ಹರಿಮಂದಿರ ಪ್ರಕಟಣೆ—೩

ಶ್ರೀ

# ಹರಿದಾಸಸಾಹಿತ್ಯ

.(ವಿಮರ್ಶೆ)

ಗ್ರಂಥಕರ್ತ
ಕೀರ್ತನಾಚಾರ್ಯ
ಬೇಲೂರು ಕೇಶವದಾಸರು
ಮೈಸೂರು.

ಪ್ರಕಾಶಕರು
ಹ ರಿ ಮಂ ದಿ ರ
ವಾಣೀವಿಲಾಸ ಮೊಹಲ್ಲಾ — . ಮೈಸೂರು.

ಬೆಲೆ ರೂ. ೩—೦—೦

## ಅ ನು ಕ್ರ ಮ ಣಿ ಕೆ





*ಇಲ್ಲಿ ಪುನಃ ಅಧ್ಯಾಯ ಸಂಖ್ಯೆ ೩ ಎಂದು ತಪ್ಪಾಗಿ ಬಿದ್ದಿದೆ. ಇಲ್ಲಿಂದ ಮುಂದೆ ೩. ೪. ೫. ೬. ಎಂದು ಛಾಪೆಯಾಗಿರುವ ಅಧ್ಯಾಯ ಸಂಖ್ಯೆಗಳನ್ನು ಕ್ರಮವಾಗಿ ೪. ೫. ೬. ೭. ಎಂದು ಓದಿಕೊಳ್ಳಬೇಕಾಗಿ ವಿನಂತಿ.



ಶ್ರೀಹರಿಮಂದಿರ ಸಂಸ್ಥೆಯ ಪೋಷಕರಾದ
ಮುಂಬೈ ಹೈಕೋರ್ಟ ನ್ಯಾಯಾಧೀಶರು
ಶ್ರೀಯುತ ನಾ. ಸ್ವಾ. ಲೋಕೂರರವರು

॥ ಶ್ರೀ ॥

ಹರಿಮಂದಿರ ಸಂಸ್ಥೆಯ ಪೋಷಕರಾದ ಮುಂಬೈ ಹೈಕೋರ್ಟಿ ಜಡ್ಜ್ ಶ್ರೀಯುತ ನಾ. ಸ್ವಾ. ಲೋಕೂರರವರ ಶುಭಸಂದೇಶ.

ಸಾಹಿತ್ಯವೆಂಬುವುದು ಭಾಷಾವ್ಯವಹಾರಕ್ಕೆ ಸಂಬಂಧಪಟ್ಟ ಬಲು ಮುಖ್ಯವಾದ ಶಾಸ್ತ್ರ. ಸಾಹಿತ್ಯಜ್ಞಾನವಿಲ್ಲದೆ ಯಾವ ಶಾಸ್ತ್ರಾಭ್ಯಾಸ ಮಾಡಿದರೂ ಆ ಶಾಸ್ತ್ರವನ್ನು ಅರ್ಥವಾಗುವಂತೆ ಬರೆಯುವುದಕ್ಕಾಗಲಿ, ನಿರೂಪಿಸುವದಕ್ಕಾಗಲಿ ಸಾಧ್ಯವಾಗುವದಿಲ್ಲ. ವಿಚಿತ್ರ ಕಲ್ಪನೆಗಳಿಂದೊಡಗೂಡಿದ ಶಬ್ದ ಸಂಪತ್ತಿನಿಂದ ರವಿಕಾಣದುದನ್ನು ಕವಿಕಂಡನೆಂಬಂತೆ ಅಮೂರ್ತವಾದುದನ್ನು ಮೂರ್ತಿಗೊಳಿಸಿ ತತ್ಕಾಲದಲ್ಲಿ ಮನರಂಜನೆಯನ್ನುಂಟು ಮಾಡುವುದು ಪ್ರೌಢ ಸಾಹಿತ್ಯವೆಂದು ಕರೆಸಿಕೊಳ್ಳುತ್ತದೆ. ಇದರಂತೆ ಅಥವಾ ಇದರಿಂದ ಪ್ರತ್ಯೇಕವಾಗಿ—ಆತ್ಮ ಸಾಮ್ರಾಜ್ಯದಲ್ಲಿ ವಿಹರಿಸುತ್ತ ಪ್ರೇಮ ಸ್ವರೂಪನಾದ ಪರಮಾತ್ಮನ ಪ್ರೇಮರಸದಲ್ಲಿ ತನ್ಮಯರಾಗಿ ತಾವು ಪಡೆದ ಆನಂದಾನುಭವಗಳನ್ನು ಪ್ರಯತ್ನವಿಲ್ಲದ ಸ್ಫೂರ್ತಿಯಿಂದ ಹಾಡಿ, ಕಲ್ಲುಮನಸ್ಸನ್ನು ಕರಗಿಸಿ, ನಾಸ್ತಿಕನನ್ನೂ, ತತ್ಕಾಲದಲ್ಲಿ ಆಸ್ತಿಕನನ್ನಾಗಿ ಮಾಡಿ, ಸ್ಮರಿಸಿದಾಗೆಲ್ಲಾ ಆನಂದ ರಸವನ್ನು ಪ್ರಸ್ಫುರಿಸುವಂತೆ ಮಾಡುತ್ತಿರುವುದು ಸಂತ ಸಾಹಿತ್ಯವೆಂದು ಕರೆಸಿಕೊಳ್ಳುತ್ತದೆ. ಈ ಎರಡು ಬಗೆಯ ಸಾಹಿತ್ಯದಲ್ಲಿ ಅತ್ಯಂತ ಪೂಜ್ಯವಾಗಿರುವುದರಿಂದಲೂ, ಮಾನವನ ಜೀವನಕ್ಕೆ ಹೊಂದಿಕೊಂಡಿರುವುದರಿಂದಲೂ, ಸಂತಸಾಹಿತ್ಯಕ್ಕೆ ಯಾವ ಭಾಷೆಯಲ್ಲಿ ನೋಡಿದರೂ ಅಗ್ರಸ್ಥಾನ ದೊರೆತಿರುವುದು ಕಂಡು ಬರುತ್ತದೆ.

ವಿವಿಧ ಭಾಷೆಗಳಲ್ಲಿರುವ ಸಂತ ಸಾಹಿತ್ಯ ರಾಶಿಯಲ್ಲಿ ಆರಿಸಿದರೆ, ಕರ್ನಾಟಕ ಸಂಗೀತ ಶಾಸ್ತ್ರ ನಿರ್ಮಾತರೂ ಹೊಸ ಕನ್ನಡ ಶೈಲಿಗೆ ಮಾರ್ಗದರ್ಶಕರೂ ಆದ ಕನ್ನಡ ಹರಿದಾಸರ ಸಾಹಿತ್ಯವು ಉತ್ತಮೋತ್ತಮವಾದುದೆಂದು ಗೋಚರವಾಗುತ್ತಿದೆ. ಕನ್ನಡ ಹರಿದಾಸ ಸಾಹಿತ್ಯದಂತಹ ಸಂಗೀತಮಯ ಸಾಹಿತ್ಯವು ಇತರ ಯಾವ ಭಾಷೆಗಳಲ್ಲಿರುವುದಕ್ಕಿಂತ ದೊಡ್ಡ ಪ್ರಮಾಣದಲ್ಲಿ

ವುದು ಕನ್ನಡ ಭಾಷೆಯ ಅಥವಾ ಜನತೆಯ ಭಾಗ್ಯವಾಗಿರುತ್ತದೆ. ವೇದ ಶಾಸ್ತ್ರಗಳನ್ನು ನಿಂದಿಸದೆ, ಕಾವ್ಯನಿಯಮವನ್ನು ಮೀರದೆ, ನಿಯಮಕ್ಕಾಗಿ ಅನವಶ್ಯ ಶಬ್ದಗಳನ್ನುಪಯೋಗಿಸದೆ, ಅತ್ಯಂತ ಸರಳವೂ ಸುಂದರವೂ ಆದ ಭಾಷಾಸರಣಿಯಲ್ಲಿ ಹಾಡಿರುವ ಹಾಡುಗಳನ್ನು ಕನ್ನಡದಲ್ಲಿ ಅಲ್ಲದೆ ಮತ್ತೆಲ್ಲಿ ಕಾಣಬಹುದು ?

ಐವತ್ತೇ ವರ್ಷಗಳ ಹಿಂದೆ ಕರ್ಣಾಟಕದ ಮನೆ ಮನೆಗಳಲ್ಲಿ ವ್ಯಾಪಿಸಿ ಜೀವನವನ್ನು ಸುಖಮಯವಾಗಿ ಮಾಡುತ್ತಿದ್ದ ಇಂತಹ ಹರಿದಾಸ ಸಾಹಿತ್ಯವು ನವನಾಗರಿಕತೆಯ ಪ್ರಭಾವದಿಂದ ಖಿಲವಾಗುತ್ತಿರುವುದನ್ನು ಕಂಡು— ಸ್ವಯಂ ವಿಜಯದಾಸರವರ ಪರಂಪರೆಯಲ್ಲಿ ಐದನೆಯವರೂ, ಕೀರ್ತನಕಲೆಯಲ್ಲಿ ನುರಿತು ಕರ್ಣಾಟಕ ಕೀರ್ತನ ಪ್ರಪಂಚದಲ್ಲೇ ಕ್ರಾಂತಿಯನ್ನುಂಟು ಮಾಡಿ ಹೊಸ ಮಾರ್ಗವನ್ನು ತೋರಿಸಿದವರೂ ಆದ ಕೀರ್ತನಾಚಾರ್ಯ ಶ್ರೀವರ್ಮಾ ಬೇಲೂರು ಕೇಶವದಾಸರು ಕನ್ನಡ ಹರಿದಾಸರ ಜೀವನ ಚರಿತ್ರೆಯನ್ನು ಒಂದು ಸಾವಿರ ಪುಟಗಳ ಎರಡು ವಹಿಗಳಲ್ಲಿ ಪ್ರಕಟಿಸಿ ಈಗ "ದಾಸ ಸಾಹಿತ್ಯ ವಿಮರ್ಶೆ" ಎಂಬ ಗ್ರಂಥವೊಂದನ್ನು ಬೆಳಕಿಗೆ ತಂದಿರುವುದು ಕನ್ನಡ ಭಾಷೆಗೂ ಜನತೆಗೂ ಮಹಾ ಸೇವೆಯನ್ನು ಸಲ್ಲಿಸಿದಂತಾಗಿರುತ್ತದೆ. ಗ್ರಂಥ ವಿಸ್ತಾರ ಭಯದಿಂದ ಎಷ್ಟೇ ಸಂಕ್ಷೇಪಿಸಿ ಬರೆದಿದ್ದರೂ ದಾಸಸಾಹಿತ್ಯ ವಿಮರ್ಶೆಯಲ್ಲಿ ಕೊಟ್ಟಿರುವ ಸಾಹಿತ್ಯದ ಮಾದರಿಗಳನ್ನು ನೋಡಿದರೆ, ಶಬ್ದ ಸಂಪತ್ತು, ಅರ್ಥ ಸಂಪತ್ತು, ರಸಭಾವಗಳ ಸಂಪತ್ತು ಒಂದಕ್ಕಿಂತ ಮತ್ತೊಂದು ಅವಿರೋಧವಾಗಿ ಪರಿಪೂರ್ಣವಾಗಿ ಪ್ರಪಂಚದ ಸಾಹಿತ್ಯದಲ್ಲಿ ಕನ್ನಡ ಹರಿದಾಸ ಸಾಹಿತ್ಯಕ್ಕೆ ಸರಿತೂಗುವ ಸಾಹಿತ್ಯ ಮತ್ತಾವ ಭಾಷೆಯಲ್ಲಾದರೂ ಇದೆಯೇ ಎಂಬ ಆಶ್ಚರ್ಯವನ್ನುಂಟು ಮಾಡುತ್ತಿದೆ.

ಕನ್ನಡ ಹರಿದಾಸ ಸಾಹಿತ್ಯ ಸೇವೆಗಾಗಿಯೇ ಶ್ರೀಯುತ ಕೇಶವದಾಸರು ಹರಿಮಂದಿರ ಸಂಸ್ಥೆಯನ್ನೇರ್ಪಡಿಸಿ, ಹರಿದಾಸ ಸಾಹಿತ್ಯದ ಮೇಲೂ ಭಾರತೀಯ ತತ್ವಶಾಸ್ತ್ರದ ಮೇಲೂ ಅನೇಕ ಗ್ರಂಥಗಳನ್ನು ಪ್ರಕಟಿಸಬೇಕೆಂದು ಸಂಕಲ್ಪಿಸಿ ಕಾರ್ಯಾರಂಭ ಮಾಡಿರುವುದು, ಅತ್ಯಂತ ಶ್ಲಾಘನೀಯ ಉದ್ಯಮವಾಗಿರುತ್ತದೆ. ಈ ಮಹಾಕಾರ್ಯವು ಕನ್ನಡ ಜನತೆಯ, ಕನ್ನಡ ಶ್ರೀಮಂ

ತರ, ಮತ್ತು ಕನ್ನಡ ರಾಜಾಧಿರಾಜರ ಬೆಂಬಲದಿಂದಲೇ ಯಶಸ್ವಿಯಾಗಿ ನಡೆಯಬೇಕಾಗಿರುವುದರಿಂದ-ವಿಶಾಲ ಕರ್ಣಾಟಕದ ಮಹನೀಯರುಗಳು ಪೋಷಕರಾಗಿಯೂ, ಆಜೀವ ಸದಸ್ಯರಾಗಿಯೂ, ಆಶ್ರಯದಾತರಾಗಿಯೂ, ಮುಕ್ತಹಸ್ತದಿಂದ ಸಹಾಯಮಾಡಿ ಕನ್ನಡ ನುಡಿನಾಡುಗಳಿಗಾಗಿ ನಲವತ್ತು ವರ್ಷಗಳಿಂದ ದುಡಿದಿರುವ ಶ್ರೀ ಕೇಶವದಾಸರ ಅನುಭವದ ಪ್ರಯೋಜನವನ್ನು ಪಡೆಯಬೇಕೆಂದು ವಿನಯ ಪೂರ್ವಕವಾಗಿ ಸೂಚಿಸುತ್ತೇನೆ.

ಮುಂಬಯಿ
೧—೧—೧೯೪೪

ನಾ. ಸ್ವಾ. ಲೋಕೂರ.

# ಗ್ರಂಥಕರ್ತನ ಮಾತು

ದಾಸಸಾಹಿತ್ಯ ಗ್ರಂಥಲೇಖನದ ಉದ್ದೇಶವನ್ನು ಪ್ರಥಮಾಧ್ಯಾಯದಲ್ಲಿ ಬರೆದಿರುವ ಕಾರಣ, ಅದನ್ನಿಲ್ಲಿ ತಿಳಿಸುವುದಿಲ್ಲ. ಉಪಲಬ್ಧವಿರುವ ಕನ್ನಡ ಹರಿದಾಸ ಸಾಹಿತ್ಯ ಎಷ್ಟು ಕಡಿಮೆ ಪ್ರಮಾಣದಿಂದಿದ್ದರೂ, ಈ ಕಾಲದ ಆವಶ್ಯಕತೆಗೆ ತಕ್ಕಂತೆ ಸಂಗೀತ ದೃಷ್ಟಿಯಿಂದ ಸ್ವರಸಹಿತ ಕೊಡುವುದಕ್ಕಾಗಲಿ, ವಾಙ್ಮಯ ದೃಷ್ಟಿಯಿಂದ ಸಾಹಿತ್ಯವೆಂದು ಕೊಡುವುದಕ್ಕಾಗಲಿ, ಸಾಕಾದಷ್ಟು ಸಮೃದ್ಧವಾಗಿದೆ. ಭಾರತ ಪ್ರಪಂಚದಲ್ಲಿ ವಿದ್ವಜ್ಜನರ ಮನಸ್ಸನ್ನಾಕರ್ಷಿಸಿರುವುದು ಸಂಸ್ಕೃತದಲ್ಲಿ ರಚಿತವಾಗಿರುವ ವ್ಯಾಸ ವಾಲ್ಮೀಕರ ಸಾಹಿತ್ಯವಾದರೆ, ಸಂಸ್ಕೃತವರಿಯದ ಮಹಾಜನರ ಮನಸ್ಸನ್ನಾಕರ್ಷಿಸಿರುವುದು ದೇಶಭಾಷೆಗಳಲ್ಲಿ ರಚಿತವಾಗಿರುವ ಹರಿದಾಸರ ಸಾಹಿತ್ಯ. ಹರಿದಾಸ ಸಾಹಿತ್ಯವು ಭಾಷಾಬದ್ಧವಾದುದಲ್ಲ. ಒಂದು ಭಾಷೆಯಲ್ಲಿ ಬರೆಸಿದ್ದರೆ ಮಾತ್ರ ಹರಿದಾಸ ಸಾಹಿತ್ಯವೆಂದು ಕರೆಸಿಕೊಳ್ಳುವ ಸಂಕುಚಿತ ಭಾವನೆ ಭಾಗವತ ಧರ್ಮದಲ್ಲಿಲ್ಲ. ಆದ್ದರಿಂದ ಭಕ್ತಿ ಪಂಥವನ್ನವಲಂಬಿಸಿದ ಸತ್ಪುರುಷರು ಯಾವ ದೇಶಭಾಷೆಯಲ್ಲಿ ಪ್ರಬಂಧಗಳನ್ನು ಬರೆದಿದ್ದರೂ ಅವು ದಾಸ ಸಾಹಿತ್ಯದಲ್ಲಿ ಸಮಾವೇಶವಾಗುತ್ತವೆ. ದಕ್ಷಿಣ ಭಾರತದ ತಮಿಳು ನಾಡಿನಲ್ಲಿ ಜನಿಸಿ, ತೆಲುಗು ಭಾಷೆಯಲ್ಲಿ ದಿವ್ಯ ಕೀರ್ತನೆಗಳನ್ನು ರಚಿಸಿರುವ ತ್ಯಾಗರಾಜರು ಸಹ ಹರಿದಾಸ ವರ್ಗದ ಸತ್ಪುರುಷರಲ್ಲಿ ಒಬ್ಬರಾಗಿರುತ್ತಾರೆ. ತ್ಯಾಗರಾಜರು ಹರಿದಾಸರೆಂಬುದಕ್ಕೆ ಅವರೇ ರಚಿಸಿರುವ "ಪ್ರಹ್ಲಾದ ಭಕ್ತಿವಿಜಯ, ನೌಕಾ ಚರಿತ್ರೆ"ಗಳೆಂಬ ಹರಿಕಥೆಗಳಿಗಿಂತ ಅನ್ಯಪ್ರಮಾಣ ಬೇಕಾಗಿಲ್ಲ. ತ್ಯಾಗರಾಜರು ಪ್ರಹ್ಲಾದ ಭಕ್ತಿವಿಜಯದಲ್ಲಿ ನಾಂದೀ ಪದ್ಯಗಳನ್ನು ಬರೆಯುತ್ತಾ-ಶ್ರೀ ರಾಮಚಂದ್ರನನ್ನೂ ಗಣಪತಿಯನ್ನೂ, ಶಾರದಾಂಬೆಯನ್ನೂ, ನಾರದರನ್ನೂ ಸ್ತೋತ್ರ ಮಾಡಿದ ನಂತರ

ಪುರಂದರದಾಸರ ಮೇಲೆ—

ದುರಿತವ್ರಾತಮುಲೆಲ್ಲನು
ಪರಿಮಾರ್ಚೆಡಿ ಹರಿಗುಣಮುಲ ಬಾಡುಚುನೆಪುಡುರ್ವ
ಪರವಶುಡೈವೆಲಯು ಪುರಂ
ದರದಾಸುನಿ ಮಹಿಮಮುಲನು ದಲಚೆ ದಮದಿಲೋ॥

ತುಲಸೀದಾಸರ ಮೇಲೆ—

ತುಲಸೀ ಕಾನನಮಂದುನ
ವಿಲಸಿತಮುಗ ಹರಿನಿ ಚೂಚಿ ವಿಸ್ಮಯಯುತುಡೈ
ಪುಲಕೀಕೃತ ತನುಡಗುನಾ
ತುಲಸೀದಾಸವರುನಿ ಸನ್ನುತುಲು ಸೇತು ಮದಿ॥

ಭದ್ರಾಚಲ ರಾಮದಾಸರಮೇಲೆ—

ಕಲಿಯುಗ ಮುನ ವರಭದ್ರಾ
ಚಲಮುನ ನೆಲಕೊನ್ನ ರಾಮಚಂದ್ರುನಿ ಪದಭ
ಕ್ತುಲಕೆಲ್ಲ ವರುಡನಂದಗಿ
ವೆಲಸಿನ ಶ್ರೀರಾಮದಾಸು ವಿನುತಿಂತು ಮದಿ॥

ಎಂಬ ಪದ್ಯಗಳಿಂದ ದಾಸಶ್ರೇಷ್ಠರುಗಳನ್ನು ವಂದಿಸಿ, ಅನಂತರ ಮಾತುಗಳಿಂದ-ನಾಮದೇವ, ತುಕಾರಾಮ, ಜ್ಞಾನದೇವ, ಸಹದೇವ, ಜಯದೇವ, ನಾರಾಯಣ ತೀರ್ಥರುಗಳ ನಾಮೋಚ್ಚಾರಣ ಮಾಡಿ ಕಥಾರಂಭ ಮಾಡಿರುತ್ತಾರೆ.

ಆದ್ದರಿಂದ ಉತ್ತರ ಭಾರತದ ತುಲಸೀದಾಸರ ಹಿಂದೀ ರಾಮಾಯಣ, ಕಬೀರ ಕಮಾಲ ಮೀರಾಬಾಯಿ ಮೊದಲಾದವರ ಹಿಂದೀ ಪ್ರಬಂಧಗಳೆಲ್ಲಾ ದಾಸಸಾಹಿತ್ಯ; ಮಹಾರಾಷ್ಟ್ರದ ಸಮರ್ಥ ರಾಮದಾಸ, ಏಕನಾಥ ಸ್ವಾಮಿ, ನಾಮದೇವ, ತುಕಾರಾಮ, ಜ್ಞಾನದೇವ, ಜಯದೇವರುಗಳ ಗ್ರಂಥಗಳೆಲ್ಲಾ ದಾಸಸಾಹಿತ್ಯ. ಪೋತನ್ನನ ಆಂಧ್ರ ಭಾಗವತ, ಭದ್ರಾಚಲ

ರಾಮದಾಸರ ಗೀತ ಪ್ರಬಂಧಗಳು, ತ್ಯಾಗರಾಜರ ಕೀರ್ತನೆಗಳೆಲ್ಲಾ ದಾಸ ಸಾಹಿತ್ಯ. ತಮಿಳುನಾಡಿನ ಆಳ್ವಾರರ ಪ್ರಬಂಧಗಳೆಲ್ಲಾ ದಾಸಸಾಹಿತ್ಯ. ದಾಸ ಮನೋಭಾವದಿಂದ ರಚಿಸಿರುವ ಗದುಗಿನ ನಾರಣಪ್ಪನ ಕನ್ನಡ ದಶ ಪರ್ವ ಭಾರತ ದಾಸಸಾಹಿತ್ಯ. ಈ ಸಾಹಿತ್ಯ ರಾಶಿಯನ್ನು ಮೀರಿಸಿದ ಸಾಹಿತ್ಯ ಪ್ರಪಂಚದ ಮತ್ತಾವ ದೇಶದಲ್ಲೂ ಇಲ್ಲ.

ಪಾಶ್ಚಾತ್ಯ ಕವಿಗಳಲ್ಲಿ ವರ್ಡ್ಸ್‌ವರ್ತ್, ಗೀಟೆ, ಟಾಲ್‌ಸ್ಟಾಯ್, ಈ ಮೂವರು ವಿನಾ ಭಕ್ತಿಪರ ಸಾಹಿತ್ಯವನ್ನು ಇತರ ಕವಿಗಳು ಹೆಚ್ಚಾಗಿ ರಚಿಸಿರು ವುದು ಕಂಡುಬರುವದಿಲ್ಲ. ದೇವರ ಅವತಾರಗಳನ್ನು ಹೇಳುವ ಮತ್ತು ದೇವ ರಲ್ಲಿ ಭಕ್ತಿಯನ್ನು ಬೆಳೆಸುವ ಪುರಾಣಗಳು ಪಾಶ್ಚಾತ್ಯರಲ್ಲಿ ಕಂಡು ಬರುವುದಿಲ್ಲ. ನಾಮಸ್ಮರಣೆಯನ್ನು ಬಲುಬಾರಿ ಮಾಡಿದರೆ ಹುಡುಗಾಟಿಕೆಯೆಂದು ತಿಳಿಯುವ ಹುಡುಗ ಬುದ್ಧಿಯೇ ಪಾಶ್ಚಾತ್ಯರನ್ನು ಬಿಟ್ಟಿಲ್ಲ. ಏಸು ಸ್ವಾಮಿಯನ್ನು ದೇವರ ಮಗನೆಂದು ಕರೆಯುವುದಕ್ಕಿಂತ ಹೆಚ್ಚಿನ ದೇವತ್ವದ ಅನುಭವವನ್ನು ಭಾರ ತೀಯರಂತೆ ಪಾಶ್ಚಾತ್ಯರು ಪಡೆದಿರುವುದಿಲ್ಲ. ದೇವರನ್ನು ಎದುರಿಗೆ ನಿಲ್ಲಿಸಿ ಕೊಂಡು ಸಖನಂತೆ, ಸ್ವಾಮಿಯಂತೆ, ಪತಿಯಂತೆ, ತನಯನಂತೆ, ಮಾತಾ ಡಿದ ಭಾಗ್ಯವಂತ ಸಾಹಿತ್ಯ ಭರತಖಂಡದಲ್ಲಿ ವಿನಾ ಅನ್ಯತ್ರ ಈ ಪ್ರಮಾಣ ದಲ್ಲಿರಲು ಸಾಧ್ಯವಿಲ್ಲ. ಭಾರತೀಯರ ಮನಸ್ಸು ಬೆಳೆದಿರುವ ರೀತಿಯೇ ಬೇರೆ. ಅದಕ್ಕೆ ತಕ್ಕಂತೆ ಭಾರತೀಯರ ಅನುಭವವೂ ಬೇರೆ.

ವಿದ್ಯಾರಣ್ಯ ಸ್ವಾಮಿಗಳು "ಸರ್ವದರ್ಶನ ಸಂಗ್ರಹ"ವೆಂಬ ಮತ ಗಳ ಇತಿಹಾಸ ಗ್ರಂಥದಲ್ಲಿ ಅನೇಕ ದರ್ಶನಗಳ ಉಗಮ ವಿಕಾಸಗಳನ್ನು ತಿಳಿಸುತ್ತಾ ಕಡೆಯಲ್ಲಿ ಶಾಂಕರದರ್ಶನವನ್ನು ಮತ್ತಷ್ಟು ವಿಸ್ತರಿಸಿ—''ಇತಿ ಶ್ರೀ ಸಾಯಣಾಚಾರ್ಯ ವಿರಚಿತೇ ಸರ್ವದರ್ಶನ ಸಂಗ್ರಹೇ, ಸಕಲ ದರ್ಶನ ಶಿರೋರತ್ನಂ ಶಾಂಕರದರ್ಶನಂ ಸಮಾಪ್ತಂ" ಎಂದು ಅಭಿ ಮಾನದಿಂದ ಬರೆದಿರುವಂತೆ ಲೇಖಕನಾದರೂ ಇತರ ದೇಶಗಳಲ್ಲಿರುವ ಹರಿ ದಾಸ ಸಾಹಿತ್ಯವನ್ನು ವಿಮರ್ಶಿಸಿ, ಸಕಲ ಸಾಹಿತ್ಯ ಶಿರೋರತ್ನದಂತಿರುವುದು ಕನ್ನಡ ಹರಿದಾಸ ಸಾಹಿತ್ಯವೆಂದು ಬರೆದರೆ ಅಪರಾಧವಾಗುವುದಿಲ್ಲ. ಏಕೆಂದರೆ

ಎಷ್ಟೆಷ್ಟು ತೂಕಮಾಡಿ ನೋಡಿದರೂ ಕನ್ನಡ ದಾಸಸಾಹಿತ್ಯವಿರುವಷ್ಟು ಹಾಗೆ; ಬರೆಯುವುದೂ ಆದಕ್ಕೇ !

ಭಾಷೆಯಲ್ಲಿ ಪ್ರೌಢ ಗ್ರಂಥಗಳ ಸ್ಥಾನ ಬೇರೆ. ಪ್ರೌಢ ಗ್ರಂಥಗಳನ್ನು ಬರೆದಿರುವ ಕವಿಗಳು ಮಹಾ ಪಂಡಿತರು. ಆದರೆ ಅವರ ಗ್ರಂಥಗಳನ್ನು ಯಾವ ದೇಶದಲ್ಲೂ ವಾಲ್ಮೀಕರ ರಾಮಾಯಣದಂತೆ–ವ್ಯಾಸರಗೀತೆಯಂತೆ ನಿಖಿಲ ಭಾರತದ ಹರಿದಾಸ ಪ್ರಬಂಧಗಳಂತೆ-ದೇವಗೃಹದ ವ್ಯಾಸಪೀಠದಲ್ಲಿಟ್ಟು ಜನರು ಪಾರಾಯಣ ಮಾಡುತ್ತಿಲ್ಲ. ಮಹಾ ಪಂಡಿತರ ಪ್ರೌಢ ಗ್ರಂಥಗಳು ಭಾಷಾ ಪಾಂಡಿತ್ಯವನ್ನು ಸಂಪಾದಿಸುವುದಕ್ಕೆ ಮಾತ್ರ ಸಹಕಾರಿಗಳು. ಪ್ರೌಢ ಗ್ರಂಥಗಳು ವಿದ್ವತ್ಪರೀಕ್ಷೆಗಳಲ್ಲಿ ಹೆಚ್ಚು ಅಂಕಿಗಳನ್ನು ಕೊಡಿಸುವುದಕ್ಕೆ ಸಹಕಾರಿಗಳು. ಕಚೇರಿಗೆ ಹೋಗುವಾಗ ಬಿಗಿದು ಕಟ್ಟಿಕೊಳ್ಳುವ ತೊಡಿಗೆಯಂತೆ ಪ್ರೌಢ ಸಾಹಿತ್ಯವಿದ್ದರೆ, ಮನೆಯಲ್ಲಿ ಜೀವನವನ್ನು ಸುಖಮಯ ಮಾಡುವ ಉಡಿಗೆಯಂತಿರುವುದು ದಾಸ ಸಾಹಿತ್ಯ.

ಸಾಹಿತ್ಯದ ರುಚಿ ಬಲ್ಲ ಪಾಶ್ಚಾತ್ಯ ವಿಮರ್ಶಕರು ಸಾಹಿತ್ಯ ಹೇಗಿರಬೇಕೆಂಬುದನ್ನು ಸುಂದರವಾಗಿ ವರ್ಣಿಸಿರುವ ಮಾತಿನ ತಾತ್ಪರ್ಯವನ್ನು ಕನ್ನಡದಲ್ಲಿ ಕೊಟ್ಟರೆ ಈ ಸಂದರ್ಭಕ್ಕೆ ಬಲು ಹೊಂದಿಕೆಯಾಗುವುದು. ಆ ಮಾತುಗಳೆಂದರೆ:—

೧ ಮಿಲ್ಟನ್—ಇಹಪರಗಳೆರಡಕ್ಕೂ ಸಾಧಕವಾದ—ಆತ್ಮ ಸಿದ್ಧಿಯನ್ನು ಪಡೆದ ಮಹಾನುಭಾವರ ಅನುಭವದ ಉದ್ಗಾರ—ಸಾಹಿತ್ಯ.

೨ ಕೀಟ್ಸ್—ಮನುಷ್ಯನ ಶಬ್ದರಚನಾಚಾತುರ್ಯವು, ತನ್ನಿಂದ ತಾನೇ ಹೊರಸೂಸಿ ಬರುತ್ತಿದ್ದರೆ—ಇತರ ಕಟ್ಟುಗಳಿಗೆ ಸಿಕ್ಕಿ ಪಕ್ವವಾಗದೆ, ಇತರ ಪ್ರೇರಣೆಗಳಿಂದ ಬಾಧಿತವಾಗದೆ, ತೇಜೋವಂತವಾಗಿ ಶಕ್ತಿಯುತವಾಗಿ ಪ್ರಸ್ಫುರಿಸಿ ಬರುತ್ತಿದ್ದರೆ—ಅನ್ಯವಾದುದನ್ನು ರಚಿಸುವಾಗಲೂ ಅದು ತನ್ನನ್ನು ತಾನೇ ರಚಿಸಿಕೊಂಡು ಬರುತ್ತಿರುವಂತೆ ಪ್ರಭಾವಶಾಲಿಯಾಗಿದ್ದರೆ—ಅದು ಸಾಹಿತ್ಯ.

೩ ವರ್ಡ್ಸ್‌ವರ್ತ್—ಜ್ಞಾನದ ತಿರುಳಿನಂತೆ ಮಾತನ್ನು ಕಳೆಕಟ್ಟಿಸಿದರೆ—ಶಾಸ್ತ್ರ ಸಮ್ಮತವಾಗಿ ಆವೇಶ ಬರುವಂತೆ ತಿಳಿಸಿದರೆ—ಅದು ಸಾಹಿತ್ಯ.

೪ ಷೆಲ್ಲಿ—ಸಾಹಿತಿ ಅಥವ ಕವಿಯು ಪ್ರಪಂಚದ ಅನಂಗೀಕೃತ ಶಾಸನ ಕರ್ತ ನಂತಿರುತ್ತಾನೆ. ವಿಷಯದಿಂದ, ಶೈಲಿಯಿಂದ, ಪ್ರಪಂಚದ ಅನುಭವ ವನ್ನು ವಿಮರ್ಶಿಸಿ ಕೊಡುವವನು ಸಾಹಿತಿ. ಅಂತಹ ಸಾಹಿತಿಯ ಮಾತು—ಸಾಹಿತ್ಯ.

೫ ಪೋಪ್—ಮಾನವ ಭಾಷೆಯ ಪರಿಪೂರ್ಣತೆಯು ಪದ್ಯ. ಎಲ್ಲರ ಮನದ ಲ್ಲಿದ್ದು ಭಾಷೆಗಿಳಿಸಲು ಸಾಧ್ಯವಾಗದಿದ್ದುದನ್ನು ಸುಂದರ ಶಬ್ದಗಳಿಂದ ಹೇಳಿದರೆ ಅದು ಪದ್ಯ. ಆ ಪದ್ಯ—ಸಾಹಿತ್ಯ.

೬ ಮತ್ಯೂ ಆರ್ನಾಲ್ಡ—ಒಬ್ಬನ ಆತ್ಮೋದ್ಧಾರಮಾಡಲು, ಸಮರ್ಥವಾಗಿದ್ದರೆ ಅದು ಪದ್ಯ, ಅದೇ—ಸಾಹಿತ್ಯ.

೭ ಷೇಕ್ಸಪಿಯರ್—ಕಲ್ಪನಾ ಸಾಮ್ರಾಜ್ಯದಲ್ಲಿ ವಿಹರಿಸುತ್ತಾ, ಅವ್ಯಕ್ತ ತತ್ವ ವನ್ನು ವ್ಯಕ್ತಗೊಳಿಸಿ, ದೇಶಕಾಲಗಳ ಪರಿಮಿತಿಯಲ್ಲಿ ಅಮೂರ್ತವಾದು ದನ್ನು ಮೂರ್ತಿಮಂತವಾಗಿ ಕಣ್ಣೆದುರಿಗೆ ನಿಲ್ಲಿಸಿ, ಶಬ್ದವನ್ನು ಹಬ್ಬ ಗೊಳಿಸುವವನು ಕವಿ! ಅವನ ಕಾವ್ಯ—ಸಾಹಿತ್ಯ.

೮ ಕೋಲ್‌ರಿಜ್—ನಂಬಲಾಗದ ಸಂದೇಹಗ್ರಸ್ತ ವಿಷಯವನ್ನು ಶಬ್ದ ಸಂಪ ತ್ತಿನಿಂದ ತತ್ಕಾಲದಲ್ಲಿ ನಂಬುವಂತೆ ಮಾಡುವವನು ಕವಿ. ಅವನ ಕಾವ್ಯ—ಸಾಹಿತ್ಯ.

೯ ಮ್ಯಥ್ಯು ಆರ್ನಾಲ್ಡ—ಜೀವನದ ಪರಿಪೂರ್ಣ ವಿಮರ್ಶೆ-ಸಾಹಿತ್ಯ.

ಹೀಗೆ ವೇಲ್ಕ್ಯಂಡ ನವಮಣಿಗಳ ಮಾತಿನಂತೆ ವಿಮರ್ಶಿಸಿ ನೋಡಿ ದರೂ, ಎಲ್ಲ ಗುಣಗಳಿಂದ ಪರಿಪೂರ್ಣವಾಗಿ "ಅತ್ಯತಿಷ್ಠದ್ದಶಾಂಗುಲಂ" ಎಂಬ ಶ್ರುತಿವಾಕ್ಯದಂತೆ ದಶಾಧಿಕ ಗುಣವಂತವಾಗಿರುವುದು, ಕನ್ನಡ ಹರಿ ದಾಸ ಸಾಹಿತ್ಯ.

ಕೆಲವು ವರ್ಷಗಳಿಂದ ಕನ್ನಡ ಸಾಹಿತ್ಯವನ್ನು—ಇದು ಜೈನ ಸಾಹಿತ್ಯ, ಇದು ವೀರಶೈವ ಸಾಹಿತ್ಯ, ಇದು ಬ್ರಾಹ್ಮಣ ಸಾಹಿತ್ಯ, ಎಂದು ಜಾತಿಭೂತದ ಬಾಯಲ್ಲಿಟ್ಟು ಕರೆಯುವ ವಾಡಿಕೆ ಏಕೋ ಬಂದು ಬಿಟ್ಟಿದೆ. ಈ ಜಾತಿಭೂತ ಆಧುನಿಕರಿಗೆ ಹಿಡಿದಿರುವಂತೆ ಪ್ರಾಚೀನರಿಗೆ ಹಿಡಿದಿರಲಿಲ್ಲವೆಂಬುವುದೂ ಕಂಡು ಬರುತ್ತಿದೆ. ಈ ಮೂರರಲ್ಲೂ ಪ್ರೌಢ ಅಥವ ಪಂಡಿತ ಸಾಹಿತ್ಯ, ಸರಳ ಅಥವ ಸಂತ ಸಾಹಿತ್ಯವಿದ್ದು, ಪಂಡಿತ ಸಾಹಿತ್ಯ ಪಾತದಲ್ಲೂ, ಸಂತ ಸಾಹಿತ್ಯ ಪತಣೆಯಲ್ಲೂ ನಿಂತಿರುವುದು ಕಂಡು ಬರುತ್ತಿದೆ. ಈ ಮೂರರಲ್ಲೂ ಸಂತ ಸಾಹಿತ್ಯಭಾಗವು ಸಾಂಪ್ರದಾಯಿಕ ಕೆಲವು ಭಾಗಗಳ ವಿನಾ, ಮಿಕ್ಕವು ಸಾರ್ವಜನಿಕವಾಗಿರುವುದು ಸಹ ಕಂಡು ಬರುತ್ತಿದೆ. ಇಷ್ಟು ಉಪಯುಕ್ತ ಸಾಹಿತ್ಯವನ್ನು ಒಟ್ಟುಗೂಡಿಸಿ ಪರಸ್ಪರ ಸಾಮ್ಯಗಳನ್ನು ತಿಳಿಸುತ್ತ ಬಂದರೆ, ಹರಿದು ಹಂಚಿದ ಕರ್ಣಾಟಕದ ಏಕೀಕರಣಕ್ಕೆ ದೊಡ್ಡದೊಂದು ಅಸ್ತಿಭಾರವನ್ನು ಹಾಕಿದಂತಾಗುತ್ತದೆ. ವಿಶ್ವವಿದ್ಯಾನಿಲಯದಂಥ, ಕನ್ನಡ ಪರಿಷತ್ತಿನಂಥ ಮಹಾಸಂಸ್ಥೆಗಳ ಕಾರ್ಯವಿದಾಗಿರುವುದರಿಂದ ಅಧಿಕಾರ ಮುದ್ರೆಯೊತ್ತಿ ಮಾತಾಡುವ ಶಕ್ತಿ ಏಕಮಾತ್ರ ವ್ಯಕ್ತಿಯಾಗಿರುವ ಗ್ರಂಥಕರ್ತನಿಗೆಲ್ಲಿಂದ ಬರಬೇಕು ? ಹರಿದಾಸ ಸಾಹಿತ್ಯದಲ್ಲೇನಿದೆಯೆಂದು ಕೇಳಿದಾಗ ಮಾತ್ರ—ಇದೆ ; ಬೇಕಾದಷ್ಟಿದೆ ; ನಿಮಗೆ ಸಾಕಾದಷ್ಟು ಕೊಡಲು ಸಿದ್ಧವಿದೆ ; ಎಂದು ಪ್ರಸಾದ ವಿನಿಯೋಗ ಮಾಡುವ ಹಕ್ಕು ತಪ್ಪದೆ ಲೇಖಕನಿಗಿರುತ್ತದೆ.

ಸಾರಾಂಶದ ಮಾತೆಂದರೆ--ಕರ್ಣಾಟಕದ ಜನರು ಕನ್ನಡಿಗರಾಗಬೇಕು. ಕನ್ನಡ ಕನ್ನೆಯರು ಕನ್ನಡ ಕನ್ನಡಿಯಲ್ಲಿ ಕಣ-ನಡೆಯಿಂದ ಕನ್ನಡದ ಹಾಡು ಹಾಡಬೇಕು. ನಾಡು ಶೋಭಿಸಬೇಕು. ನುಡಿ ಬೆಳಗಬೇಕು.

## ಗ್ರಂಥವಿಮರ್ಶಕರಿಗೆ ಸೂಚನೆ

ಗದ್ಯ ಪದ್ಯಾತ್ಮಕ ಗ್ರಂಥಗಳನ್ನೋದುವುದೊಂದು ಪ್ರತ್ಯೇಕ ಕಲೆ. ಚತುಷ್ಷಷ್ಟಿ ಕಲೆಗಳಲ್ಲಿ ಒಂದಾಗಿ ಪ್ರಸಿದ್ಧವಾಗಿರುವ ಆ ಕಲೆ ಗಮಕಕಲೆ. ವ್ಯಾಖ್ಯಾ ಗಾಯನದಂತೆ ಪದ್ಯವನ್ನು ರಾಗವಾಗಿ ರಸಭಾವಗಳರಿಯದೆ ಹಾಡಿದ ಮಾತ್ರಕ್ಕೆ ಅದು ಗಮಕ ಕಲೆಯೆನಿಸುವುದಿಲ್ಲ. ರಸಭಾವಗಳು ಅವಿ

ರ್ಭವಿಸುವಂತೆ ಗದ್ಯವನ್ನು ರಾಗವಿಲ್ಲದೆ ಓದಿದರೂ ಅದು ನಿಜವಾದ ಗಮಕ ಕಲೆಯೆನಿಸುತ್ತದೆ. ಪ್ರಕೃತ ನಮ್ಮಾ ಗ್ರಂಥವನ್ನು ವಿಮರ್ಶಿಸುವ ವಿದ್ವನ್ಮಣಿಗಳು, ಗಮಕಿಗಳಂತೆ ಒಂದಲ್ಲ–ಎರಡು ಸಲ ಓದಿ ಧಾಟಿಯನ್ನು ಕುದುರಿಸಿಕೊಂಡು ಮನಸ್ಸಿನಲ್ಲಿ ವಿಮರ್ಶೆ ಮಾಡಿಕೊಳ್ಳಬೇಕು. ಹಾಗೆ ಮಾಡಿಕೊಂಡ ಮನಸ್ಸಿನ ಭಾಷೆಯನ್ನು ಭಾವಪೂರ್ಣವಾಗಿ ಶಬ್ದದಲ್ಲಿಡಬೇಕು. ವಿಮರ್ಶೆ (criticism) ಯೆಂದರೆ ಖಂಡನೆಯೆಂದು ಅರ್ಥಮಾಡಿಕೊಂಡರಾಗುವುದಿಲ್ಲ. "Read yourself into Shakespear" ಷೇಕ್ಸಪಿಯರನು ನೀವೆಂದು ಭಾವಿಸಿ ಓದಿ ವಿಮರ್ಶಿಸಬೇಕು. ಉಗಾಭೋಗಪದಸುಳಾದಿ ಲಾವಣಿ ಮೊದಲಾದವುಗಳ ಧಾಟಿ ತಿಳಿಯದೆ ಹೋಗಬಹುದು. ವೃತ್ತಗಳ ಹೆಸರು ಸಹ ಕೇಳದವರು ಓದುವ ಚಟದಲ್ಲಿ ವಿವಿಧ ವೃತ್ತಗಳು ಒಂದಾಗುತ್ತಲೊಂದು ಬಂದರೂ, ಒಂದು ಬಗೆಯ ಧಾಟಿಯಿಂದ ಓದುವುದನ್ನು ಕಾಣುತ್ತಿರುವಂತೆ ಪದ ಸುಳಾದಿಗಳನ್ನಾದರೂ ಓದಿಬಿಡಬಹುದು.

ಬರ್ನಾರ್ಡ್ ಷಾ ಮಹಾಶಯನು ತನ್ನ ಉದ್ದಾಮ ಗ್ರಂಥಗಳನ್ನು ಓದಿ ಬೆಲೆಕಟ್ಟುವ ಜನರು ಗ್ರೇಟ್ ಬ್ರಿಟನ್ನಿನಲ್ಲಿಲ್ಲವಾಯಿತೇ ಎಂದು ಒಂದು ಬಾರಿ ಮಿಡುಕಿ ಆಕ್ಷೇಪಿಸಿದನಂತೆ! ಆಗ ಬ್ರಿಟನ್ನಿನ ಒಂದೊಂದು ವಿದ್ಯಾಸಂಸ್ಥೆಯುವರೂ ಷಾ ಮಹಾಶಯನ ಪುಸ್ತಕಗಳ ಹಾಳೆಗಳನ್ನು ಮುಗುಚಿ ಹೊಗಳಲಾರಂಭಿಸಿದರಂತೆ! ಈ ಟೊಳ್ಳುತನವನ್ನು ಪರೀಕ್ಷಿಸಬೇಕೆಂದು ಷಾ ಮಹಾಶಯನು ಕೆಲಸಕ್ಕೆ ಬಾರದ ಒಂದು ಪುಸ್ತಕವನ್ನು ಪ್ರಕಟಿಸಿದನಂತೆ! ಆಗಲೂ ಬ್ರಿಟನ್ನಿನವರು "ಷಾ, ಷಾ" ಎಂದು ಹೊಗಳಿದರಂತೆ! ಷಾ ಮಹಾಶಯನು ಸದ್ದಡಗುವತನಕ ಕಾದಿದ್ದು ಈಗ ಬ್ರಿಟನ್ನಿನವರ ಟೊಳ್ಳುತನ ಗಟ್ಟಿಯಾಯಿತೆಂದು ಸಾರಿದನಂತೆ! ನುಂಗಬಾರದ ತುತ್ತು ಷಾ! ಜನರೇನು ಮಾಡಬಲ್ಲರು?

ಈ ಬಗೆಯ ಪರಿಸ್ಥಿತಿ ನಮ್ಮ ಕರ್ಣಾಟಕದಲ್ಲಿಲ್ಲವೆಂಬುವುದು ನಮ್ಮ ನಂಬಿಕೆ. ಪ್ರಹಸನ ಪಟುಗಳಾದ ಕೈಲಾಸಂರವರ "ಟೊಳ್ಳು ಗಟ್ಟಿ"ಯನ್ನು ನಮ್ಮ ಶಾಲಾಬಾಲಕರು ಸಹ ಸವಿಕಟ್ಟಾಗಿ ಓದಲು ಕಲಿತಿದ್ದಾರೆ. ಅಂದ ಮೇಲೆ ನಮ್ಮಾ ಗ್ರಂಥದ ವಿಮರ್ಶಕ ವಿದ್ವನ್ಮಣಿಗಳು ಮುದ್ರಣದ ತಪ್ಪುಗಳಿದ್ದರೂ ತಿದ್ದಿಕೊಂಡು ಓದುವರೆಂದೇ ನಮ್ಮ ಭರವಸೆ. ಆದರೆ ಇದಕ್ಕೆ

ಬೇಕಾಗಿರುವುದು ಸ್ವಲ್ಪ ಪ್ರಯತ್ನ. ಗ್ರಂಥದಲ್ಲಿ ಕ್ಲಿಷ್ಟಪದಗಳ ಕೋಷ್ಟಕವನ್ನು ಬೇಕೆಂದೇ ಕೊಟ್ಟಿಲ್ಲ. ಓದುವ ಧಾಟಿಯಲ್ಲಿ ಕ್ಲಿಷ್ಟತೆಯನ್ನುಂಟುಮಾಡುವ ಶೈಲಿ ಹರಿದಾಸ ಸಾಹಿತ್ಯದಲ್ಲಿಲ್ಲ. ಈ ಎಲ್ಲ ವಿವರಗಳನ್ನು ಮನಸ್ಸಿನಲ್ಲಿಟ್ಟು ಕೊಂಡು ನಮ್ಮನ್ನು ಕ್ಷಮಿಸಿ ವಿಮರ್ಶೆ ಮಾಡಬೇಕೆಂದು ಮತ್ತೊಮ್ಮೆ ಸೂಚಿ ಸುತ್ತೇವೆ. ಬೇಸಿಕ್ ಇಂಗ್ಲೀಷಿನಲ್ಲಿ ೮೫೦ ಶಬ್ದಗಳಿಂದ ಪ್ರಪಂಚದ ಜ್ಞಾನ ವನ್ನು ಕೊಡಬೇಕೆಂದು ತಜ್ಞರು ಹವಣಿಸುತ್ತಿದ್ದಾರೆ. ೫೦೦ ಶಬ್ದಗಳಿ ಗಿಂತ ಕನ್ನಡ ಹರಿದಾಸರು ಹೆಚ್ಚಾಗಿ ಉಪಯೋಗಿಸಿ ಪ್ರಪಂಚದ ಜ್ಞಾನವನ್ನು ಮಾಡಿಕೊಟ್ಟಿರುವರೇ ಎಂಬುದನ್ನೂ ಸಂಶೋಧಕರು ಶೋಧಿಸಿ ಸಂತೋಷ ಪಡಬೇಕೆಂದು ಮತ್ತೊಂದು ಸವಿನಯ ಸೂಚನೆ.

## ಉಪಕಾರ ಸ್ಮರಣೆ

ಕನ್ನಡ ಹರಿದಾಸ ಸಾಹಿತ್ಯ ವಿಮರ್ಶಾತ್ಮಕ ಗ್ರಂಥವನ್ನು ಬರೆಯ ಬೇಕೆಂದು ಉದ್ದೇಶಿಸಿದಾಗ, ಸಂಗೀತ ಶಾಸ್ತ್ರಕ್ಕೆ ಸಂಬಂಧಪಟ್ಟ ವಿಷಯ ಗಳನ್ನು ತಿಳಿಸಬೇಕೆಂದು ಮೈಸೂರು ಶ್ರೀಮನ್ಮಹಾರಾಜರವರ ಆಸ್ಥಾನ ಪಂಡಿತ ಕಿನ್ನರಿ ವಿದ್ವಾನ್ ಹುಲುಗೂರು ಕೃಷ್ಣಾಚಾರ್ಯರನ್ನು ಕೇಳಿಕೊಂಡೆ. ಕಿನ್ನರಿಯವರು ದಯವಿಟ್ಟು ೨೫ ಪುಟಗಳ ದೊಡ್ಡದೊಂದು ಪ್ರಬಂಧವನ್ನೇ ಬರೆದು ಕಳುಹಿಸಿದರು. ಅದುವರೆಗೆ ನಾನು ಸಂಗ್ರಹಿಸಿದ್ದ ವಿಷಯಗಳ ಜೊತೆಗೆ ಆಚಾರ್ಯರ ಪ್ರಬಂಧವೂ ಸಾಧಕವಾಗಿ ನನ್ನ ರೀತಿಯಲ್ಲಿ ಸಂಗೀತಕ್ಕೆ ಸಂಬಂಧಿಸಿದ ದ್ವಿತೀಯಾಧ್ಯಾಯವನ್ನು ಬರೆಯಲು ಸಹಕಾರಿಯಾಯಿತು. ಮತ್ತೆ ಹುಲುಗೂರರವರು ತಮ್ಮ ಪ್ರಬಂಧವನ್ನು ತಾವು ಬರೆದಿರುವಂತೆಯೇ ಮುದ್ರಿಸಬೇಕೆಂದು ಅಪೇಕ್ಷೆಪಟ್ಟರು. ಸಂಗೀತ ಶಾಸ್ತ್ರ ವಿಷಯವನ್ನು ಹೆಚ್ಚಾಗಿ ತಿಳಿದುಕೊಳ್ಳಬೇಕೆಂಬುವರ ಅನುಕೂಲಕ್ಕಾಗಿ ಅವರದೇ ಒಂದು ಕೈಪಿಡಿಯಾಗಿರಲೆಂದು ಪ್ರತ್ಯೇಕವಾಗಿ ಮುದ್ರಣಮಾಡಿಸಿ ಪ್ರಕಟಿಸಿರುತ್ತೇನೆ. ಈ ಎಲ್ಲ ಉಪಕಾರದ ಬಗ್ಗೆ ಶ್ರೀ ಆಚಾರ್ಯರವರನ್ನು ವಂದಿಸುತ್ತೇನೆ.

ಹರಿದಾಸರ ಉಗಾಭೋಗ ಮತ್ತು ಸುಳಾದಿಗಳ ಹಾಡುವ ಪುರಾತನ ಸಂಪ್ರದಾಯವನ್ನು ಹಾಡಿತೋರಿಸಿ, ಆ ಸಾಹಿತ್ಯಕ್ಕೆ ನಾನು ಹಾಡಿದಂತೆ

ಸ್ವರ ಚಿಟ್ಟೆಗಳನ್ನು ಹಾಕಿಕೊಡಬೇಕೆಂದು ಪ್ರಾರ್ಥಿಸಿದಾಗ, ಆಸ್ಥಾನ ವಿದ್ವಾನ್ ಸೋಸಲೆ ರಾಮದಾಸರೂ, ಸಂಗೀತ ವಿದ್ವಾನ್ ಪದ್ಮನಾಭರಾಯರೂ ನೆರವಾಗಿ ಮಾಡಿದ ಸಹಾಯಕ್ಕೆ ಅವರೀರ್ವರನ್ನೂ ವಂದಿಸುತ್ತೇನೆ.

ಶ್ರೀಮನ್ಮಹಾರಾಜರ ಕಾಲೇಜು ತೆಲುಗು ಪಂಡಿತರು ಶ್ರೀಮಾನ್ ಅನಂತ ಕೃಷ್ಣಶರ್ಮರ ಸಹಾಯ ಬೇಡಿದಾಗ, ನಲವತ್ತು ವರ್ಷಗಳ ಹಿಂದೆ ಎಟ್ಟಿಯಾಪುರಂ ಸಂಸ್ಥಾನದ ಸಂಗೀತ ಸಾಹಿತ್ಯ ವಿದ್ವಾನ್ ಸುಬ್ಬರಾಮ ದೀಕ್ಷಿತರವರು ಪ್ರಕಟಿಸಿದ ಎರಡು ಗ್ರಂಥಗಳನ್ನು ಒದಗಿಸಿಕೊಟ್ಟು ಅವರು ಮಾಡಿದ ಸಹಾಯಕ್ಕಾಗಿ ಅವರನ್ನು ವಂದಿಸುತ್ತೇನೆ.

ನಾನು ಬರೆಯುವ ಗ್ರಂಥಗಳಿಗೆ ದೊಡ್ಡವರಿಂದ ಮುನ್ನುಡಿಯನ್ನು ಬರೆಯಿಸುವ ವಾಡಿಕೆಯನ್ನು ಇಟ್ಟುಕೊಂಡಿರಲಿಲ್ಲ. ಆದರೆ ಈ ಬಾರಿ ಮಾತ್ರ ನನ್ನ ಸಂಕಲ್ಪವನ್ನು ಬದಲಾಯಿಸಬೇಕಾಯಿತು. ಹೆಸರಿನ ದೊಡ್ಡಸ್ತಿಕೆಗಿಂತ ನಿಜವಾದ ದೊಡ್ಡಸ್ತಿಕೆ, ನಿಜವಾದ ಸಾಹಿತ್ಯ ಪಾಂಡಿತ್ಯ, ಎರಡೂ ಉಳ್ಳವರನ್ನು ಕಂಡು ನನ್ನೀಗ್ರಂಥವನ್ನು ಓದಿತೋರಿಸಬೇಕೆನಿಸಿತು. ಬಯಕೆಗೆ ತಕ್ಕಂತೆ ಆಂಗ್ಲ ಕರ್ಣಾಟಕ ಭಾಷೆಗಳೆರಡರಲ್ಲೂ ಬಲು ಪರಿಶ್ರಮ ಮಾಡಿರುವ ಅಗ್ರಗಣ್ಯರ ಪಙ್ತಿಯಲ್ಲಿರುವ—ತಮ್ಮನ್ನು ತಾವು ಯಾವಾಗಲೂ ಮರೆಸಿಕೊಳ್ಳುತ್ತಿರುವ—ಮೈಸೂರು ಸಿವಿಲ್ ಸರ್ವಿಸ್‌ನಲ್ಲಿ ಸೀನಿಯರ್ ಅಸಿಸ್ಟೆಂಟ್ ಕಮಿಷನರಾಗಿರುವ ಶ್ರೀಮಾನ್ ಕೆ. ಪಿ. ರಾಮನಾಥಯ್ಯನವರನ್ನೂ, ನಿವೃತ್ತ ಅಸಿಸ್ಟೆಂಟ್ ಕಮಿಷನರ್ ಎಚ್. ನಾರಾಯಣರಾಯರನ್ನೂ ಕಂಡು ಉಭಯರಿಗೂ ಗ್ರಂಥವನ್ನು ಓದಿ ತೋರಿಸಿದೆನು. ಈರ್ವರೂ ತಮ್ಮ ಮೆಚ್ಚಿಕೆಯನ್ನು ತೋರ್ಪಡಿಸಿ ಒಂದು ಮುನ್ನುಡಿಯನ್ನು ಬರೆದುಕೊಟ್ಟರು. ಈ ಬಗ್ಗೆ ಉಭಯರನ್ನೂ ವಂದಿಸುತ್ತೇನೆ.

ಕಡೆಯದಾಗಿ—ಕೆಲಕೆಲವು ಪುರಂದರದಾಸರ ಕೀರ್ತನೆಗಳಿಗೂ, ತ್ಯಾಗರಾಜರ, ದೀಕ್ಷಿತರ, ಮತ್ತು ಕ್ಷೇತ್ರಜ್ಞರ ಕೃತಿಗಳಿಗೂ, ಇರುವ ಸಾಮ್ಯವನ್ನು ತೋರಿಸುತ್ತಾ, ಒಬ್ಬೊಬ್ಬರೂ ಪುರಂದರದಾಸರ ಮಾರ್ಗವನ್ನು ಹೇಗೆ ಅನುಸರಿಸಿರುವರೆಂಬುದನ್ನು ಸ್ವರಸಹಿತ ಬರೆದು ಸಿದ್ಧಗೊಳಿಸಿದಾಗ, ಗ್ರಂಥ ವಿಸ್ತಾರ

ಭಯ ಕಾಗದದ ಅಭಾವದ ಭಯ ಎರಡೂ ನನಗುಂಟಾಯಿತು. ಆ ಕಾಲದಲ್ಲಿ ಮದ್ರಾಸ್ ಮ್ಯೂಸಿಕ್ ಅಕ್ಯಾಡೆಮಿಯವರ ತ್ರೈಮಾಸಿಕ ಪತ್ರಿಕೆಯೊಂದು ನನ್ನ ಕರಗತವಾಯಿತು. ಅಕ್ಯಾಡೆಮಿಯವರು ತಮ್ಮದು ತಮಿಳುನಾಡಾದರೂ, ಕನ್ನಡ ಹರಿದಾಸ ಸಾಹಿತ್ಯದಲ್ಲಿ ತೋರಿಸುತ್ತಿರುವ ಆದರ ಶೋಧನೆಗಳನ್ನು ನೋಡಿ ನನಗೆ ಬಹಳ ಸಂತೋಷವಾಯಿತು. ಶ್ರೀ ಪುರಂದರದಾಸರೆಂಬ ಶಿರ್‌ನಾಮೆಯಿಂದ ಇಂಗ್ಲೀಷಿನಲ್ಲಿ ಬರೆದಿರುವ ಲೇಖನವು ನನ್ನ ಬರವಣಿಗೆಗೆ ಬಹುಮಟ್ಟಿಗೆ ಹೊಂದಿಕೆಯಾಗಿರುವುದು ಕಂಡುಬಂದಿತು. ಅಕ್ಯಾಡೆಮಿಯವರು ಮಾಡುತ್ತಿರುವ ಮಹಾ ಕಾರ್ಯವನ್ನು ಅಂಶತ್ವೇನ ಅವರ ಮಾತಿನಿಂದಲೇ ನಮ್ಮ ಗ್ರಂಥದಲ್ಲಿ ಪ್ರಕಟಿಸಿ ಹೆಚ್ಚು ಜನರಿಗೆ ತಿಳಿಯುವಂತೆ ಮಾಡಬೇಕೆಂದೆನಿಸಿತು. ಆದ್ದರಿಂದ ಅವರ ಲೇಖನವನ್ನು ಅಂಶತ್ವೇನ ಪ್ರಕಟಿಸಿರುವುದು ಮಾತ್ರವಲ್ಲದೆ ಇನ್ನೂ ವಿಶೇಷವಾಗಿ ಹರಿದಾಸ ಸಾಹಿತ್ಯದ ಪರಿಶ್ರಮ ಮಾಡಿ ಕರ್ಣಾಟಕ ಸಂಗೀತ ಕಲೆಯನ್ನು ಉತ್ತರ ಪ್ರಾಂತ್ಯದಲ್ಲಿ ಸಹ ವ್ಯಾಪಿಸುವಂತೆ ಮಾಡುವ ಶಕ್ತಿಯನ್ನು ಸಂಸ್ಥೆಯವರಿಗೆ ಪರಮಾತ್ಮನು ಕೊಡಲೆಂದು ಹಾರೈಸಿ, ಅವರ ಉದ್ಯಮಕ್ಕಾಗಿ ಸಂಸ್ಥೆಯವರನ್ನೆಲ್ಲಾ ಬಹುವಾಗಿ ವಂದಿಸುತ್ತೇನೆ.

## ಮುದ್ರಣಕಾರರ ಉಪಕಾರ ಸ್ಮರಣೆ.

ಕೇವಲ ಕೀರ್ತನ ರಂಗದಲ್ಲೇ ವ್ಯವಸಾಯಮಾಡುತ್ತ ಅಷ್ಟರಿಂದಲೇ ತೃಪ್ತನಾಗಿದ್ದ ನನ್ನನ್ನು ಗ್ರಂಥಕಾರ್ಯಕ್ಕೂ ಪ್ರೇರಿಸಿ, ಮೊದಲಿನಿಂದ ನಾನು ಬರೆದ ಗ್ರಂಥಗಳನ್ನು ಅಕ್ಕರೆಯಿಂದ ಮುದ್ರಿಸಿಕೊಟ್ಟು ಅನೇಕ ರೀತಿಯಿಂದ ನನಗೆ ಉಪಕಾರ ಮಾಡಿರುವ ಸುಬೋಧ ವಿದ್ಯುನ್ಮುದ್ರಣಾಲಯದ ಯಜಮಾನರಾದ ಶ್ರೀಮಾನ್ ಎಂ. ರಾಮರಾಯರವರು ಈ ಗ್ರಂಥ ಮುದ್ರಣದಲ್ಲೂ ಆಸಕ್ತಿ ವಹಿಸಿ ಸಕಾಲದಲ್ಲಿ ಅಂದವಾಗಿ ಮುದ್ರಿಸಿಕೊಟ್ಟಿರುವುದಕ್ಕಾಗಿ ಅವರನ್ನು ಸಹ ಬಹಳವಾಗಿ ವಂದಿಸುತ್ತೇನೆ.

---

## ಹರಿಮಂದಿರ ಮತ್ತು ಪ್ರಕಟಣೆಗಳು

ಮಹಾಜನರ ಕರಗತವಾಗಿರುವ "ದಾಸಸಾಹಿತ್ಯ ವಿಮರ್ಶೆ"ಯ ಗ್ರಂಥ ಕರ್ತನಾದ ದಾಸನು ಕೀರ್ತನ ಪೀಠ ಪರಂಪರೆಯಲ್ಲಿ ಶ್ರೀ ವಿಜಯ ದಾಸರಿಂದ ಐದನೆಯವನಾಗಿಯೂ, ವೈದಿಕ ವಿದ್ಯಾಪೀಠಗಳೆನಿಸಿದ ಗುರುಮಠಗಳಿಗಿರು ವಂತೆ ಹರಿದಾಸ ಪೀಠಕ್ಕೂ ಕ್ರಮಪ್ರಾಪ್ತವಾಗಿರುವ "ಶ್ರೀಭೂಸಮೇತ ಶ್ರೀನಿವಾಸ ಮೂರ್ತಿಯ" ದಿವ್ಯಚರಣಾರಾಧಕನಾಗಿಯೂ ಇರುವ ಕಾರಣ, ಈ ಪರಂಪರೆಯನ್ನು ವಿಚ್ಛಿತಿಬಾರದಂತೆ ನಡೆಸಿಕೊಂಡು ಬರಬೇಕಾದ ಬಹು ದೊಡ್ಡ ಜವಾಬ್ದಾರಿಯುಳ್ಳವನಾಗಿರುತ್ತಾನೆ. ಈ ಜವಾಬ್ದಾರಿಯ ಮಹತ್ವವನ್ನೂ ಕಾಲವೇಗವನ್ನೂ ಅರಿತವನಾಗಿ ನಲವತ್ತು ವರ್ಷ ಗಳಿಂದ ಕೀರ್ತನ ರಂಗದಲ್ಲಿ ವ್ಯವಸಾಯಮಾಡಿ ಪಡೆದಿರುವ ಅನು ಭವವನ್ನು ಗ್ರಂಥರೂಪವಾಗಿ ಕನ್ನಡ ಜನತೆಗೆ ಸಮರ್ಪಿಸಬೇಕೆಂಬ ಉದ್ದೇಶದಿಂದ "ಹರಿಮಂದಿರ ಮತ್ತು ಪ್ರಕಟಣೆಗಳು" ಎಂಬ ಸಂಸ್ಥೆಯನ್ನು ಸ್ಥಾಪಿಸಿರುತ್ತಾನೆ. ಸಂಸ್ಥೆಯ ಕಾರ್ಯವಾಗಿ ಈಗಾಗಲೇ ಮೈಸೂರು ನಗರದ ವಾಣೀವಿಲಾಸ ಪುರದಲ್ಲಿ ಈ ಕಾಲದ ಬೆಲೆಯಂತೆ ಹನ್ನೆರಡು ಸಹಸ್ರ ರೂಪಾ ಯಿಗಳ ಅಂದಾಜಿನ ಹರಿಮಂದಿರದ ಕಟ್ಟಡವನ್ನು ಪ್ರಾರಂಭಿಸಿ, ಈ ಹಿಂದೆ ಬರೆದು ಪ್ರಕಟಿಸಿರುವ ಒಂದು ಸಾವಿರ ಪುಟಗಳ ಕರ್ಣಾಟಕ ಭಕ್ತವಿಜಯದ ಎರಡು ಸಂಪುಟಗಳನ್ನೂ ಮಂದಿರಕ್ಕಾಗಿ ಸಮರ್ಪಿಸಿ ಮುಂದೆ ಮುದ್ರಣವಾಗ ಬೇಕಾಗಿರುವ ಅನೇಕ ಸಂಪುಟಗಳಿಂದೊಡಗೂಡಿದ ಧಾರ್ಮಿಕ ವಿಶ್ವಕೋಶ (Encyclopaedia)ವನ್ನು ಸಿದ್ಧಪಡಿಸಲು ಹವಣಿಸುತ್ತಿದ್ದಾನೆ. ಇವುಗಳ ಜೊತೆಗೆ ಸಾರ್ವಜನಿಕರ ಭಜನ ಕೀರ್ತನಾದಿಗಳಿಗೂ, ಗಾಯನ ಪ್ರವಚನ ಗಳಿಗೂ, ಸಂಸ್ಥೆಯ ಪುಸ್ತಕ ಭಂಡಾರ ಮತ್ತು ಸಂಶೋಧನ ಕಾರ್ಯಗಳಿಗೂ ಅನುಕೂಲವಾಗಿರಬೇಕೆಂದು ಮೈಸೂರು ನಗರದ ಮುನಿಸಿಪಲ್ ಟ್ರಸ್ಟ್ ಬೋರ್ಡಿನವರು ಹರಿಮಂದಿರದ ಎದುರು ಸಾಲಿನಲ್ಲಿ ಉಚಿತವಾಗಿ ದಯ ಪಾಲಿಸಿರುವ ನಿವೇಶನದಲ್ಲಿ ಹರಿಮಂದಿರಕ್ಕೆ ಸಂಬಂಧಪಟ್ಟ ಸಭಾಮಂದಿರ ವನ್ನು ಕಟ್ಟಬೇಕೆಂಬ ಜವಾಬ್ದಾರಿಯನ್ನು ವಹಿಸಿಕೊಂಡಿರುತ್ತಾನೆ. "ಹರಿ ಮಂದಿರ ಮತ್ತು ಪ್ರಕಟಣೆಗಳು" ಎಂಬ ಈ ಸಂಸ್ಥೆಯ ನಿಯಮಾವಳಿಯನ್ನು

ಪ್ರಕಟಿಸಿ ತಕ್ಕಷ್ಟು ಪ್ರಚುರಪಡಿಸಿರುವನಾದ್ದರಿಂದ ಆ ವಿಷಯವನ್ನಿಲ್ಲಿ ವಿಸ್ತರಿಸಿ ಬರೆಯುತ್ತಿಲ್ಲ.

ಹರಿಮಂದಿರವು ಹರಿದಾಸ ಪರಂಪರೆಯ ಉಪಾಸ್ಯ ಮೂರ್ತಿ ಶ್ರೀಹರಿಯದು. ದಾಸನಿಗಾಗಲಿ, ವಂಶೀಕರಿಗಾಗಲಿ ಹರಿಮಂದಿರದಲ್ಲಿದ್ದು ಸಾಂಪ್ರದಾಯಿಕ ಭಜನ ಕೀರ್ತನೆಗಳನ್ನೂ ದೇವತಾರಾಧನೆಗಳನ್ನೂ ಮಹಾಪುರುಷರ ಸ್ಮರಣರೂಪವಾದ ಆರಾಧನೆಗಳನ್ನೂ ನಡೆಸಿಕೊಂಡಿರುವುದಕ್ಕಿಂತ ಹೆಚ್ಚಿನ ಅಧಿಕಾರವಿರುವುದಿಲ್ಲ. ಹರಿಮಂದಿರಕ್ಕೆ ಸಂಬಂಧಪಟ್ಟ ಸಭಾಮಂದಿರವು ಸಾರ್ವಜನಿಕ ಭಜನ ಕೀರ್ತನಾದಿಗಳಿಗೂ ಸರಸ್ವತೀ ಭಂಡಾರ ಸಂಶೋಧನ ಮೊದಲಾದ ಕಾರ್ಯಗಳಿಲ್ಲದೆ ಅನ್ಯ ಕಾರ್ಯಗಳಿಗೆ ಉಪಯೋಗಿಸಲ್ಪಡುವುದಿಲ್ಲ. ಆದ್ದರಿಂದ ಈ ಸಂಸ್ಥೆ ಕನ್ನಡಿಗರದು.

ಕನ್ನಡ ವಾಙ್ಮಯದಲ್ಲಿ ಇತರ ವಾಙ್ಮಯಗಳಂತೆ ಧಾರ್ಮಿಕ ಗ್ರಂಥಗಳ ಪ್ರಕಟಣೆಯಾಗಿಲ್ಲ. ಸಂಸ್ಕೃತದಲ್ಲಿರುವ ತತ್ವಶಾಸ್ತ್ರವನ್ನು ಸಂಸ್ಕೃತದಲ್ಲೇ ಅಭ್ಯಾಸಮಾಡಿ ಪಾರಂಗತನಾಗುವ ಕಾಲವಿದಾಗಿಲ್ಲ. ಈ ಕಾಲದ ವಿದ್ಯಾಭ್ಯಾಸ ಕ್ರಮದಲ್ಲಿ ರಾಜಭಾಷೆ, ರಾಷ್ಟ್ರಭಾಷೆ, ದೇಶಭಾಷೆ, ಈ ಮೂರನ್ನೂ ಕಲಿಯಬೇಕಾಗಿರುವ ಅವಸರವಿರುವಾಗ ಕೇವಲ ಧರ್ಮಕ್ಕೆ ಸಂಬಂಧಪಟ್ಟಿರುವ ಸಂಸ್ಕೃತವನ್ನೂ ಕಲಿಯಬೇಕೆಂದರೆ ಅದೊಂದು ದೊಡ್ಡ ಭಾರವೆಂದು ಜನರು ಎಣಿಸುತ್ತಿದ್ದಾರೆ. ಈ ಪರಿಸ್ಥಿತಿಗಳನ್ನರಿತೇ ಮಹಾರಾಷ್ಟ್ರ ಮೊದಲಾದ ಪ್ರಾಂತಗಳಲ್ಲಿ ಸಕಲ ತತ್ವಶಾಸ್ತ್ರ ಗ್ರಂಥಗಳನ್ನೂ ಪುರಾಣಗಳನ್ನೂ ಸಹ ದೇಶಭಾಷೆಗೆ ಪರಿವರ್ತಿಸಿ ವಿಶ್ವಕೋಶದಂತೆ ಮಾಡಿಕೊಂಡಿರುತ್ತಾರೆ. ಅನ್ಯ ಪ್ರಾಂತೀಯರು ನಿಮ್ಮಲ್ಲಿ ಸಂತಸಾಹಿತ್ಯವೇನಿದೆ, ತತ್ವಶಾಸ್ತ್ರ ಗ್ರಂಥಗಳೇನಿವೆ ಯೆಂದು ಕೇಳಿದರೆ ನಾವು ತಲೆತಗ್ಗಿಸಬೇಕಾದ ಪರಿಸ್ಥಿತಿ ಪ್ರಾಪ್ತವಾಗಿದೆ. ಕಥೆ ಕಾದಂಬರಿಗಳು ಕೆಲವು ಕಾವ್ಯಗಳ ವಿನಾ ನಮ್ಮಲ್ಲಿ ಏನೂ ಇಲ್ಲವೆಂದರೆ ದೇಶಕ್ಕೂ ಭಾಷೆಗೂ ಎಂಥಾ ಅಪಮಾನವೆಂಬುದನ್ನಾದರೂ ಕನ್ನಡಿಗರು ಯೋಚಿಸಬೇಕು. ಈ ಕಾರ್ಯವು ವಿಶ್ವವಿದ್ಯಾನಿಲಯದಿಂದಾಗಲಿ ಭಾಷಾ ಪರಿಷತ್ತಿನಿಂದಾಗಲಿ ಆಗಲೆಂದು ಯಾವ ದೇಶದವರೂ ಕಾದು ಕುಳಿತಿಲ್ಲ. ಈ ಕಾರ್ಯಕ್ಕಾಗಿಯೇ ಹರಿಮಂದಿರ ಸಂಸ್ಥೆಯು ದೀಕ್ಷೆವಹಿಸಿ ಸ್ಥಾಪಿತವಾಗಿರುವ

ಕಾರಣ, ಕನ್ನಡ ಬಾಂಧವರು ಸಹಕರಿಸಬೇಕು. ಅನೇಕ ಸಹಸ್ರ ದ್ರವ್ಯ ಸಾಧ್ಯವಾಗಿರುವ ಈ ಮಹಾ ಕಾರ್ಯವನ್ನು ಈಡೇರಿಸಲು ಕನ್ನಡ ನಾಡಿನಲ್ಲಿ, ಅದರಲ್ಲೂ ಕರ್ಣಾಟಕಕ್ಕೇ ಕೇಂದ್ರವೆನಿಸಿರುವ ಮೈಸೂರು ಸಂಸ್ಥಾನದಲ್ಲಿ ಧರ್ಮಕಾರ್ಯಗಳಿಗಾಗಿ ಲಕ್ಷಲಕ್ಷವಾಗಿ ದಾನಮಾಡುತ್ತಿರುವ ಲಕ್ಷ್ಮೀಪುತ್ರರ ಉದಾರಾಶ್ರಯ ದೊರೆಯಬೇಕು. ವಿದ್ಯಾಭಿಮಾನ ಧರ್ಮಾಭಿಮಾನ ಭಾಷಾಭಿಮಾನವುಳ್ಳ ಜನರು ಆಶ್ರಯದಾತರಾಗಿ ಆಜೀವ ಸದಸ್ಯರಾಗಿ ಪೋಷಕರಾಗಿ ತಮ್ಮದೇ ಆದ ಈ ಸಂಸ್ಥೆಯನ್ನೂ ಪಾಲಿಸಬೇಕು. ಹರಿಮಂದಿರದಿಂದ ಅನೇಕ ಬಗೆಯ ದೇಶಾಭ್ಯುದಯ ಕಾರ್ಯಗಳು ನೆರವೇರುವಂತೆ ಮಾಡಬೇಕು. ಪುಣ್ಯಕೀರ್ತಿಗಳಿಗೆ ಪಾತ್ರರಾಗಬೇಕು. ಇದೇ ಗ್ರಂಥಕರ್ತನ ಆಶಯ.

# ಮುನ್ನುಡಿ.

ಕನ್ನಡ ವಾಙ್ಮಯದಲ್ಲಿ ದಾಸ ಸಾಹಿತ್ಯಕ್ಕೆ ಒಂದು ವಿಶೇಷ ಸ್ಥಾನವಿದೆ. ಅದು ತನ್ನದೇ ಆದ ಪ್ರತಿಭೆಯಿಂದ ಪ್ರಕಾಶಿಸುತ್ತಲಿದೆ. ಅಂತಹ ಸಾಹಿತ್ಯವನ್ನು ವಿಮರ್ಶೆಮಾಡಿ ಈ ಗ್ರಂಥವನ್ನು ಬರೆದಿರುವವರು ತಲೆತಲಾಂತರದಿಂದ ಹರಿದಾಸರೆಂದು ಖ್ಯಾತಿ ಪಡೆದವರ ಕುಲದಲ್ಲಿ ಜನಿಸಿ, ಜನ್ಮಾರಭ್ಯ ದಾಸ ಸಾಹಿತ್ಯದಲ್ಲಿ ಪಳಗಿ, ಕೀರ್ತನಾಚಾರ್ಯರೆಂದು ಹೆಸರುಗೊಂಡ, ಪ್ರಸಿದ್ಧ ವಾಗ್ಮಿಗಳೂ ಬಹು ಶ್ರುತರೂ ಆದ ಶ್ರೀ ಕೇಶವದಾಸರು. ಪ್ರೇಮಮಯರಾದ ಶ್ರೀ ದಾಸರು ನಮ್ಮಲ್ಲಿ ಇಟ್ಟುಕೊಂಡಿರುವ ಪ್ರೇಮವೇ ದಾಸಸಾಹಿತ್ಯದ ಕಡೆಗೆ ಮೊದಲಿನಿಂದ ನಮ್ಮ ಮನಸ್ಸನ್ನು ಕೊಡಲು ಅವಕಾಶ ಮಾಡಿಕೊಟ್ಟಿತು. ಆದರ ಫಲ ನಮ್ಮೀ ಮುನ್ನುಡಿ.

ವಿಜಯನಗರದ ಸಾಮ್ರಾಜ್ಯವು ನಾಶವಾದಾಗ ದಾಸ ಸಾಹಿತ್ಯದ ಬಹು ಭಾಗವು ನಾಶವಾಗಿ ಹೋಯಿತು. ಈಗ ದೊರೆಯುತ್ತಿರುವುದು ಒಂದು ಅಂಶ ಮಾತ್ರ. ಪುರಂದರ ದಾಸರೊಬ್ಬರೇ ನಾಲ್ಕುಮುಕ್ಕಾಲು ಲಕ್ಷ ದೇವರ ನಾಮಗಳನ್ನು ರಚಿಸಿದ್ದರೆಂದು ಗೊತ್ತಾಗಿದೆ. ಅಳಿದು ಹೋಗಿರುವುದಕ್ಕಾಗಿ ವ್ಯಸನಪಡುವುದಕ್ಕಿಂತ ಉಳಿದಿರುವುದು ಪೂರ್ತಿಯಾಗಿ ಅಚ್ಚಾಗಿ ಪ್ರಕಟವಾಗಿಲ್ಲವಲ್ಲಾ ಎಂದು ವ್ಯಸನಪಡಬೇಕಾಗಿದೆ. ಆ ಕೆಲಸ ಮೊದಲು ಆವಲ್ಲದೆ ಸಾಹಿತ್ಯದ ಸಂಪೂರ್ಣ ಸೌಂದರ್ಯವು ಜನತೆಗೆ ಗೊತ್ತಾಗುವುದಿಲ್ಲ.

ಪ್ರಕಟವಾಗಿರುವ ಭಾಗವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ, ಎಲ್ಲ ಚಳವಳಿಗಳ ಚರಿತ್ರೆಗಳಲ್ಲಿ ಕಂಡುಬಂದ ಏರಿಳಿತ ದಾಸ ಸಾಹಿತ್ಯದ ಬೆಳೆವಳಿಗೆಯಲ್ಲೂ ಕಂಡುಬಂದಿದೆ. ಈಗ ತಿಳಿದಿರುವ ಪ್ರಕಾರ ದಾಸ ಸಾಹಿತ್ಯದ ನಿರ್ಮಾಣಕಾರರು ೯ನೇ ಶತಮಾನದಲ್ಲಿದ್ದ ಅಚಲಾನಂದರೆಂದು ಗೊತ್ತಾಗಿದೆ. ಇವರ ಭಾಷಾಶೈಲಿ ೧೫ನೇ ಶತಮಾನದ ಭಾಷೆಯಂತಿದೆಯೆಂದು ಕೆಲವರು

ಅಭಿಪ್ರಾಯಪಡುತ್ತಾರೆ. ಅದು ಬರೀ ಅಭಿಪ್ರಾಯವಾಗಿದ್ದರೂ ಅಚಲಾನಂದರ ಪದಗಳನ್ನು ಬಿಟ್ಟರೆ ಮೂರು ಶತಮಾನಗಳನಂತರ ಬಂದ ನರಹರಿತೀರ್ಥರ ಕೆಲವು ದೇವರನಾಮಗಳ ವಿನಾ, ವ್ಯವಸ್ಥೆಗೊಂಡ ಯಾವ ಹರಿದಾಸ ಸಾಹಿತ್ಯವೂ ಉಪಲಬ್ಧವಾಗಿಲ್ಲ. ೧೫–೧೬ನೇ ಶತಮಾನಗಳು ದಾಸಸಾಹಿತ್ಯದ ಉತ್ಕರ್ಷಕಾಲವೆನ್ನಬಹುದು. ಅದು ಕನ್ನಡ ರಾಜ್ಯಾಧಿಪತ್ಯದ ಸುವರ್ಣಯುಗ. ಶ್ರೀಪಾದರಾಯರು, ವ್ಯಾಸರಾಯರು, ಪುರಂದರದಾಸರು, ವಾದಿರಾಜರು, ಕನಕದಾಸರು ಇವರೆಲ್ಲಾ ಉತ್ತಮ ಶ್ರೇಣಿಯ ಹರಿದಾಸರು. ಇವರ ತರುವಾಯ ಒಂದೂವರೆ ಶತಮಾನದಷ್ಟು ಕಾಲ ಸ್ವಲ್ಪ ಮಸಕಾಗಿದ್ದು ಅನಂತರ ವಿಜಯದಾಸರು ಗೋಪಾಲದಾಸರು ಜಗನ್ನಾಥದಾಸರು ಮೊದಲಾದವರ ಪ್ರಭಾವದಿಂದ ದಾಸ ಸಾಹಿತ್ಯ ಮತ್ತೆ ಹೇರಳವಾಗಿ ಬೆಳೆಯಿತು. ಅನಂತರ ೧೯ನೇ ಶತಮಾನದಲ್ಲಿ ಆನಂದದಾಸರು, ಶ್ರೀನಿವಾಸದಾಸರು, ಕೃಷ್ಣದಾಸರುಗಳಿಂದ ಸ್ವಲ್ಪ ಮಾತ್ರ ಬೆಳೆಯಿತು. ಈ ೨೦ನೇ ಶತಮಾನದಲ್ಲಿ ಅದು ಶುದ್ಧಾಂಗವಾಗಿ ನಿಂತುಹೋಗಿದೆ.

ಪುರಂದರದಾಸರ ಕಾಲದಲ್ಲಿ ಜನಗಳಿಗೆ ಉಪದೇಶ ಮಾಡಬೇಕಾಗಿದ್ದ ವಿಷಯಗಳೆಲ್ಲವೂ ಸಂಸ್ಕೃತ ಭಾಷೆಯಲ್ಲಿದ್ದುವು. ಆ ಭಾಷೆ ಕೆಲವು ಪಂಡಿತರಲ್ಲಿ ಮಾತ್ರ ಅಡಗಿದ್ದು ಅದು ಜನಸಾಮಾನ್ಯರ ಸ್ವತ್ತಾಗಿರಲಿಲ್ಲ. ಜನಸಾಮಾನ್ಯರಿಗೆ ಉಪದೇಶಾವಳಿಯು ಮುಟ್ಟಬೇಕಾಗಿದ್ದರೆ ದೇಶಭಾಷೆಯ ಮೂಲಕವೇ ಆಗಬೇಕಾಗಿತ್ತು. ಧರ್ಮೋಪದೇಶಕ್ಕೆ ದೇಶ ಭಾಷೆಯನ್ನುಪಯೋಗಿಸುವುದು ಆ ಕಾಲದಲ್ಲಿ ಹೊಸ ಪದ್ಧತಿಯಾಗಿರಲಿಲ್ಲ. ತಮಿಳು ದೇಶದಲ್ಲಿ ದ್ರಾವಿಡ ಪ್ರಬಂಧಗಳು ವೇದಮಂತ್ರಗಳಷ್ಟೇ ಪ್ರಾಶಸ್ತ್ಯ ಪಡೆದು ಜನರ ನಿತ್ಯಪಠಣೆಯಲ್ಲಿದ್ದವು. ಶಿವಶರಣರು ವಚನ ಶಾಸ್ತ್ರವನ್ನು ಪ್ರಚಾರಕ್ಕೆ ತಂದಿದ್ದರು. ಆಗ ಬೇಕಾದ ಕೆಲಸ ಮಾತ್ರ ಅಪಾರವಾಗಿತ್ತು. ವಚನ ಶಾಸ್ತ್ರವು ಕೇವಲ ಒಂದು ಪಂಗಡಕ್ಕೆ ಮಾತ್ರ ಸಂಬಂಧಪಟ್ಟಿತ್ತು. ಸಾಹಿತ್ಯವು ಹೆಚ್ಚು ರುಚಿಕರವಾಗಿ ಜನರ ನಿತ್ಯಬಳಕೆಯಲ್ಲಿರುವಂತೆ ಮಾಡಬೇಕಾದ ಆವಶ್ಯಕತೆ ಹೆಚ್ಚಾಗಿತ್ತು. ಈ ಕೊರತೆಗಳನ್ನು ನಿವಾರಿಸುವುದಕ್ಕೆ ಮೊದಲು ಶ್ರೀಪಾದರಾಯರೂ ವ್ಯಾಸರಾಯರೂ ಕೈಹಾಕಿದರು. ವಚನ ರೂಪದಲ್ಲಿ ಉಪದೇಶ ಮಾಡಿದರೆ

ಜನರಿಗೆ ಹಿಡಿಸುವುದಿಲ್ಲವೆಂದು ಸಂಗೀತ ರೂಪದಲ್ಲಿ ಹರಡಲಾರಂಭಿಸಿದರು. ಶ್ರೀಪಾದರಾಯ ಮೊದಲಾದ ಯತಿಪುಂಗವರು ಮಠಾಧಿಪತಿಗಳಾಗಿದ್ದುದರಿಂದ ಸ್ವೇಚ್ಛೆಯಿಂದ ಜನಸಾಮಾನ್ಯರಲ್ಲಿ ಬೆರೆಯಲು ಅವಕಾಶ ಕಡಿಮೆಯಾಗಿತ್ತು. ಪುರಂದರದಾಸರು ಧರ್ಮಪ್ರಚಾರಕ್ಕಾಗಿ ತಮ್ಮ ಜೀವನವನ್ನು ವಿನಿಯೋಗಿಸಲುಮಾಡಿ ರಂಗಸ್ಥಳಕ್ಕೆ ಬರುತ್ತಲೇ ದಾಸಸಾಹಿತ್ಯವು ಕಳೆಗಟ್ಟಿ ಜನರ ಮನೆಮನೆಗಳಲ್ಲಿ ವ್ಯಾಪಿಸಿತು. ಸಂಗೀತ ಪದ್ಧತಿಯಲ್ಲಿ ಅನೇಕ ಸುಧಾರಣೆಗಳಾದವು. ಉಗಾಭೋಗ ಸುಳಾದಿ ದೇವರ ನಾಮಾದಿಗಳು ಜನಪ್ರಿಯಗಳಾಗಿ ಎಲ್ಲರ ಬಾಯಲ್ಲೂ ಯಾವಾಗಲೂ ಮೊಳಗುವಂತಾದವು. ಕರ್ಣಾಟಕ ಸಂಗೀತ ಪದ್ಧತಿಗೆ ಪುರಂದರದಾಸರು ಜನ್ಮದಾತರೆಂದು ಅವರ ಹೆಸರು ಎಲ್ಲೆಲ್ಲೂ ಪ್ರಸಿದ್ಧಿಗೆ ಬಂದಿತು.

ದಾಸಸಾಹಿತ್ಯದಲ್ಲಿ ಶಬ್ದಗಳ ಜೋಡುಕಟ್ಟು ಬಹು ಸುಂದರವಾಗಿದೆ. ಕನ್ನಡ ಪದ್ಯಗಳಿಗೆ ವಾಡಿಕೆಯಾಗಿರುವ ಪಙ್ಕ್ತಿಯ ಎರಡನೆಯ ಅಕ್ಷರದ ಪ್ರಾಸದ ಜೊತೆಗೆ ಅನೇಕ ಸಂದರ್ಭಗಳಲ್ಲಿ ಕೊನೆಯ ಅಕ್ಷರದ ಪ್ರಾಸಗಳೂ ಪಙ್ಕ್ತಿಗಳ ನಡುವೆ ಅಲ್ಲಲ್ಲಿ ತಲೆದೂಗಿಸುವ ಮಧ್ಯ ಪ್ರಾಸಗಳೂ, ಹೇರಳವಾಗಿ ಸೇರಿ ಕಾವ್ಯದ ಸೌಂದರ್ಯವನ್ನು ಹೆಚ್ಚಿಸಿವೆ. ಪ್ರಾಸದಲ್ಲಿ ಸ್ವರಗಳೂ ಲ, ನ, ಸ, ವ, ಮ, ಮುಂತಾದ ಲಲಿತ ವರ್ಣಗಳೂ ಬಹು ಮುದ್ದಾಗಿ ಸೇರಿಕೊಂಡು ಉಚ್ಚಾರ ಮಾತ್ರದಿಂದ ಮನಸ್ಸಿನ ಅಭಿಪ್ರಾಯವು ಹೊರಸೂಸಿ ಬರುವಂತೆ ಮನೋಹರವಾಗಿವೆ. ಸಂಗೀತದ ಸಹಕಾರವೂ ಸೇರಿರುವುದರಿಂದ ಕಾವ್ಯದಲ್ಲಿ ರಸವು ಉಕ್ಕಿ ಬರುತ್ತಿದೆ. ರಸಪೋಷಣೆಯನ್ನು ಚೆನ್ನಾಗಿ ಮಾಡಬಲ್ಲ ಅಕ್ಷರಯುತ ಶಬ್ದಗಳು ಹಾಡುಗಳಲ್ಲಿ ರಮ್ಯವಾಗಿ ಹೆಣೆದುಕೊಂಡಿವೆ. ಗಹನವಾದ ತತ್ವವಿಚಾರವನ್ನು ಸುಲಭ ಮಾತುಗಳಲ್ಲಿ ಅಡಕವಾಗಿ ಮನಸ್ಸಿಗೆ ತಟ್ಟನೆ ಹಿಡಿಯುವಂತೆ ದೇವರನಾಮಗಳ ರಚನೆಯಾಗಿದೆ. ನೊಂದ ಮನಸ್ಸನ್ನು ಸಮಾಧಾನಗೊಳಿಸಿ ಪೂರ್ವದ ಸ್ಥಿತಿಗೆ ತರುವುದಕ್ಕಾಗಲಿ, ಉತ್ತಮಗೊಳ್ಳಬೇಕೆಂಬ ಮನಸ್ಸನ್ನು ಮೇಲ್ಮಟ್ಟಕ್ಕೆ ತೆಗೆದುಕೊಂಡು ಹೋಗುವುದಕ್ಕಾಗಲಿ, ~~ಮುಂತು ಮನಸ್ಸನ್ನು ಸಮಾಧಾನಗೊಳಿಸಿ ಪೂರ್ವದ ಸ್ಥಿತಿಗೆ ತರುವುದಕ್ಕಾಗಲಿ, ಉತ್ತಮಗೊಳ್ಳಬೇಕೆಂಬ ಮನಸ್ಸನ್ನು ಮೇಲ್ಮಟ್ಟಕ್ಕೆ~~

ತೆಗೆದುಕೊಂಡು ಹೋಗುವುದಕ್ಕಾಗಲಿ, ಮಂಕು ಮನಸ್ಸನ್ನು [illegible]
ಎಚ್ಚರಿಸುವುದಕ್ಕಾಗಲಿ ದಾಸಸಾಹಿತ್ಯವು ದಿವ್ಯೌಷಧಿಯಂತಿದೆ. ಸುಸ್ವರದಲ್ಲಿ ಹಾಡಿದ ದಾಸಸಾಹಿತ್ಯವನ್ನು ಕೇಳಿದವರು ಎಂತಹ ಮನುಷ್ಯರಾದರೂ ತತ್ಕಾಲದಲ್ಲಿ ತಮ್ಮನ್ನು ತಾವು ಮರೆತುಕೊಂಡು ತಲ್ಲೀನರಾಗಿ ಆನಂದಪರವಶರಾಗುವುದರಲ್ಲಿ ಸಂದೇಹವಿಲ್ಲ. ಇಂತಹ ಉತ್ತಾರಕವಾದ ಸಾಹಿತ್ಯಕ್ಕೆ ಎಣೆಯಾದದ್ದು ಮತ್ತೊಂದಿಲ್ಲವೆಂದೇ ಅನ್ನಬಹುದು.

ವೀರಶೈವ ವಚನ ಸಾಹಿತ್ಯದ ಕರ್ತೃಗಳು ವೀರಶೈವರು ಮಾತ್ರ ಇರುವಂತೆ ದಾಸಸಾಹಿತ್ಯದ ಕರ್ತೃಗಳಲ್ಲಿ ಮಾಧ್ವರು ಮಾತ್ರವೇ ಇಲ್ಲ. ಸ್ಮಾರ್ತರೂ ಶ್ರೀವೈಷ್ಣವರೂ, ಸ್ತ್ರೀಯರೂ. ಬ್ರಾಹ್ಮಣೇತರರೂ ಎಲ್ಲರೂ ಇದ್ದಾರೆ. ಆದುದರಿಂದ ದಾಸಸಾಹಿತ್ಯವು ಎಲ್ಲ ಪಂಗಡದವರ ಸ್ವತ್ತಾಗಿರುತ್ತದೆ. ಅಲ್ಲಲ್ಲಿ ಕರ್ತೃಗಳು ಸ್ವಂತ ಮತದ ಸೂಚನೆ ಮಾಡಿದ್ದರೂ ಒಟ್ಟಿನಲ್ಲಿ ಉಪದೇಶವು ಯಾವ ಒಂದು ಪಂಗಡಕ್ಕೂ ಸಂಬಂಧಪಡದ ವಿಶ್ವಧರ್ಮವಾಗಿರುತ್ತದೆ. ಪಂಗಡಗಳ ಭೇದವನ್ನು ಲೆಕ್ಕಿಸದೆ, ಎಲ್ಲ ಪಂಗಡಗಳನ್ನೂ ಎಂದರೆ ಜನಸಾಮಾನ್ಯರನ್ನು ಒಂದೇ ಸಮನಾಗಿ ಮೇಲಕ್ಕೆತ್ತುವ ಉಪದೇಶ ವಾಕ್ಯಗಳು ದಾಸ ಸಾಹಿತ್ಯದಲ್ಲಿ ಎಲ್ಲೆಲ್ಲಿಯೂ ತುಂಬಿವೆ. ವಿಷ್ಣುಪರವಾದ ನಾಮಗಳೇ ಬಹಳ ಮಟ್ಟಿಗೆ ಬಂದಿರುವವೆಂದು ಜನರು ಭಾವಿಸಬಹುದಾದರೂ ಅವು ಸರ್ವಶಬ್ದವಾಚ್ಯನಾದ ಪರಬ್ರಹ್ಮನ ಸಂಕೇತನಾಮಗಳಾಗಿರುವುದರಿಂದ ದುರಭಿಮಾನವೆ ಆಗುವುದಿಲ್ಲ. ಪುರಂದರದಾಸರೇ ಈ ಭಾಗವನ್ನು ಹೇಗೆ ಸ್ಪಷ್ಟಗೊಳಿಸಿರುವರೆಂಬುದನ್ನು "ಜಂಗಮರು ನಾವು" ಎಂಬ ನಾಮದಿಂದಲೇ ಅರ್ಥಮಾಡಿಕೊಳ್ಳಬಹುದು. ಅಭ್ಯಾಸ ಬಲದಿಂದ ದಾಸರುಗಳು ಅವರ ಸ್ವಂತ ಉಪಾಸ್ಯ ಮೂರ್ತಿಯ ಹೆಸರನ್ನು ಉಚ್ಚರಿಸುವರೇ ಹೊರತು ಆ ಹೆಸರುಗಳಿಂದ ಇತರರಿಗೆ ಅಪಾರ್ಥಮಾಡಿಕೊಳ್ಳಲು ಎಂದಿಗೂ ಅವಕಾಶವಿರುವುದಿಲ್ಲ. ಹಾಗೆ ನೋಡಿದರೆ ಬ್ರಾಹ್ಮಣರಲ್ಲಿ ಅತಿ ಪ್ರಬಲವಾಗಿ ಇತರರ ಕಣ್ಣುಗಳಿಗೆ ವಿಪರೀತವಾಗಿ ತೋರುವ—ಮಡಿ, ಆಚಾರ, ಸ್ನಾನ, ಜಪ, ತಪ, ಹೋಮ ಮುಂತಾದ ಪ್ರಕ್ರಿಯೆಗಳು ಅಂತರಂಗ ಶುದ್ಧಿಯಿರದಿದ್ದರೆ ಉಪಯೋಗವಿಲ್ಲವೆಂತಲೂ ನಿಷ್ಫಲವೆಂತಲೂ ಒಬ್ಬೊಬ್ಬ ದಾಸರೂ ಅಂತಃಶುದ್ಧಿಗೆ

ಮಹತ್ವಕೊಟ್ಟು ಬಾಹ್ಯಾಡಂಬರವನ್ನು-ಖಂಡಿಸಿರುತ್ತಾರೆ. "ಕಣ್ಣಿನೊಳಗೆ ನೋಡು ಹರಿಯ, ಒಳಗಣ್ಣಿನಿಂದಲಿ ನೋಡು ಮೂಜಗ ಧೊರೆಯ" ಎಂಬ ದೇವರನಾಮದಲ್ಲಿ ಯೋಗಾಭ್ಯಾಸದ ಬಲದಿಂದ ಅಂತರಾತ್ಮನನ್ನು ಕಂಡು ಕೊಂಡು ಆನಂದವನ್ನು ಪಡೆಯುವುದೇ ನಿಜವಾದ ಸಾಧನವೆಂದು, ಯೋಗಿ ಗಳ ಯೋಗಾಭ್ಯಾಸವನ್ನು ಕೊಂಡಾಡಿರುತ್ತಾರೆ. ದಾಸಸಾಹಿತ್ಯದಲ್ಲಿ ಕೇವಲ ಯೋಗವನ್ನೇ ಕುರಿತು ಹಾಡಬೇಕೆಂದರೂ ಒಬ್ಬೊಬ್ಬ ದಾಸರೂ ಹಾಡಿದ ದೇವರನಾಮಗಳು ಅಗಣಿತವಾಗಿವೆ. ಹರಿದಾಸರೆಲ್ಲರೂ ಭಕ್ತಿಪಂಥಿಗಳಾದುದ ರಿಂದ ಎಲ್ಲ ತರಗತಿಯ ಜನರ ಅಂತಸ್ಸಿಗೆ ಸರಿಹೋಗುವಂತೆ ಸಗುಣೋಪಾಸ ನೆಯ ಮುಖ್ಯಾಂಗವಾದ ಮೂರ್ತಿ ಪೂಜೆಗೆ ವಿಶೇಷ ಪ್ರಾಶಸ್ತ್ಯಕೊಟ್ಟು ಭಕ್ತಿಪರ ದೇವರನಾಮಗಳನ್ನು ಹಾಡಿರುತ್ತಾರೆ ಹರಿದಾಸರು ದೇವರ ಮಹಿಮೆ ಯನ್ನು ಕೊಂಡಾಡುವಾಗ, ಜೀವನ ಅಸ್ವಾತಂತ್ರ್ಯವನ್ನೂ ಅಶಕ್ತತೆಯನ್ನೂ ಅಪೂರ್ಣತೆಯನ್ನೂ ಮನಮರುಗುವಂತೆ, ಕಣ್ಣೀರು ಬರುವಂತೆ, ಬಲು ಒಪ್ಪ ವಾಗಿ ಚಿತ್ರಿಸಿರುತ್ತಾರೆ. ಆದರೂ ಹೀನದೀನ ಮಾನವನು ಭಕ್ತನಾದರೆ, ಅವನಲ್ಲಿ ಭಕ್ತಿಯ ಆವೇಶ ಹುಟ್ಟಿ ನಾಮಸ್ಮರಣೆಯೊಂದಾದರೂ ಬಲಿತು ನಿಂತರೆ, ಅವನೇ ಮಹಾ ಸತ್ವಶಾಲಿ, ಅವನಿಗೇ ದೇವರು ವಶವಾಗುತ್ತಾನೆ. ಅವನು ಏನು ಮಾಡಲೂ ಸಮರ್ಥ, ಎಂದು ಮೊದಲಾದ ಅನುಭವದ ನುಡಿ ಗಳಿಂದ ಮಾನವನನ್ನು ಹುರಿದುಂಬಿಸಿರುತ್ತಾರೆ. ಇಷ್ಟು ಮಾತ್ರವಲ್ಲದೆ ಒಬ್ಬೊಬ್ಬ ಹರಿದಾಸರೂ ತಮ್ಮ ಕಾಲದೇಶ ಪರಿಸ್ಥಿತಿಗೆ ತಕ್ಕಂತೆ ಇಡೀ ಸಮಾ ಜಕ್ಕೇ ಸಂದೇಶ ವಾಕ್ಯಗಳನ್ನು ಸಹ ಕೊಟ್ಟಿರುತ್ತಾರೆ.

ಇವೇ ಮೊದಲಾದ ಅನೇಕ ವಿಶೇಷ ಗುಣಗಳು ಸಮಗ್ರವಾಗಿ ಪ್ರಕಾಶಿ ಸುವಂತೆ ಶ್ರೀ ಬೇಲೂರು ಕೇಶವದಾಸರು ಈ ಗ್ರಂಥವನ್ನು ರಚಿಸಿರುತ್ತಾರೆ. ಚಾರಿತ್ರಿಕ ದೃಷ್ಟಿಯಿಂದ ಇವರು ಮಾಡಿರುವ ವಿಮರ್ಶೆ ಬಹಳ ಬೆಲೆಯುಳ್ಳ ದ್ದಾಗಿರುತ್ತದೆ. ದಾಸಸಾಹಿತ್ಯದಲ್ಲಿ ಅಂಗಭೂತವಾಗಿ ಕಂಡುಬರುವ ಒಂ ದೊಂದು ಮುಖ್ಯ ಲಕ್ಷಣವನ್ನೂ ಒಂದೊಂದು ಪ್ರತ್ಯೇಕ ಅಧ್ಯಾಯದಲ್ಲಿ ವಿಸ್ತರಿಸಿ ಅದನ್ನು ಪೋಷಿಸುವ ಕೀರ್ತನೆಗಳ ಮಾದರಿಗಳನ್ನು ಉದಹರಿ ಸಿರುತ್ತಾರೆ.

ಈ ಗ್ರಂಥವು ಸಕಾಲದಲ್ಲಿ ಹೊರಬಿದ್ದಿರುವುದೊಂದು ಸಂತೋಷದ ಸಂಗತಿಯಾಗಿದೆ. ಏಕೆಂದರೆ ಈ ಕಾಲದಲ್ಲಿ ದಾಸಸಾಹಿತ್ಯ ಬೆಳೆಯುವ ಮಾತಿರಲಿ, ಇದ್ದದ್ದೆಲ್ಲಾ ಅಳಿದುಹೋಗುತ್ತಿದೆ. ಅದಕ್ಕೆ ಕಾರಣವೇನೇ ಇರಲಿ ಬೆಳವಣಿಗೆ ನಿಂತಿರುವುದು ವಿಷಾದದ ಸಂಗತಿ. ಹೇಗಾದರೂ ಮಾಡಿ ಇರುವದನ್ನುಳಿಸಿಕೊಂಡು ಮುಂದೆ ಬೆಳೆಯುವಂತೆ ಮಾಡುವುದು ಅಭಿಮಾನಿಗಳಿಗೆ ಕರ್ತವ್ಯ. ಈ ಕರ್ತವ್ಯನಿರ್ವಹಣೆಗೆ ಈ ಗ್ರಂಥವು ಸಹಾಯಕವಾದೀತೆಂದು ಆಶಿಸುತ್ತೇವೆ. ಇದರ ಪರಿಣಾಮವಾಗಿ ಹೊಸ ಚೈತನ್ಯದಿಂದ ಸ್ಫೂರ್ತಿ ಪಡೆದು ಹೊಸ ರೀತಿಯಲ್ಲೇ ದಾಸಸಾಹಿತ್ಯವು ಬೆಳೆಯುವುದಾದರೆ ಒಂದು ಸೂಚನೆಯನ್ನು ಕೊಡಲು ಬಯಸುತ್ತೇವೆ. ಇದು ಆತ್ಮಶಕ್ತಿಯ ತೇಜಸ್ಸನ್ನು ಉದ್ದೀಪನಗೊಳಿಸಿ ಮುಂದುವರಿಯುವ ಕಾಲ. ಪ್ರಾರ್ಥನೆಯನ್ನು ಮಾಡುತ್ತ, ಅನುಗ್ರಹವನ್ನು ಬೇಡುತ್ತ, ಸಿದ್ಧಿಯ ಕಾಲವನ್ನು ನಿರೀಕ್ಷಿಸುತ್ತ, ತನ್ನಲ್ಲಿ ತಾನು ತೃಪ್ತಿಪಟ್ಟುಕೊಂಡು ಸುಮ್ಮನೆ ಉಳಿತಿರುವ ಅನುಕೂಲ ಕಾಲವಿದಲ್ಲ. "ಪ್ರಯತ್ನಮೇಕಮುಗ್ರತೋ ವಿಧಾಯ ಭೂತಿಪೂರ್ಣ್ಣಮಃ" ಎಂಬದಾಗಿ ೭೦೦ ವರ್ಷಗಳ ಕೆಳಗೇ ಶ್ರೀಮನ್ಮಧ್ವಾಚಾರ್ಯರವರು ಹೇಳಿರುವಂತೆ ಪುರುಷ ಪ್ರಯತ್ನಕ್ಕೆ ಮಹತ್ವಕೊಟ್ಟು ಮನುಷ್ಯರನ್ನು ಕಾರ್ಯತತ್ಪರರನ್ನಾಗಿ ಮಾಡಲು ಇದು ಕಾಲ. ಆಚಾರ್ಯರ ಅಮರವಾಣಿಯನ್ನು ಅಕ್ಷರಶಃ ಸತ್ಯವೆಂದು ವಿಜ್ಞಾನ ಶಾಸ್ತ್ರಗಳು ತೋರಿಸಿಕೊಡುತ್ತಲಿವೆ. ಇದುವರೆಗೆ ಧರ್ಮೋಪದೇಶವೂ ವಿಜ್ಞಾನ ಶಾಸ್ತ್ರಗಳ ಉಪದೇಶವೂ ಒಂದಕ್ಕೊಂದು ಸಂಬಂಧವಿಲ್ಲದಂತೆ ಸ್ವತಂತ್ರವಾಗಿ ಸಮಾನಾಂತರವಾಗಿ ನಡೆಯುತ್ತಿದ್ದವು. ಇನ್ನುಮೇಲೆ ಹೀಗೆ ನಡೆಯುವುದು ಸಾಧ್ಯವಲ್ಲ. ಜನರ ಮನಸ್ಸು ವಿಜ್ಞಾನಶಾಸ್ತ್ರಗಳ ಕಡೆಗೇ ಹೆಚ್ಚು ಹೆಚ್ಚಾಗಿ ಒಲಿಯುತ್ತ ಬೆಳೆಯುತ್ತಿದೆ. ವಿಜ್ಞಾನಶಾಸ್ತ್ರಗಳಿಗೂ ಧರ್ಮೋಪದೇಶಕ್ಕೂ ಸಾಮರಸ್ಯವಿರುವಂತೆ ಉಪದೇಶ ಕ್ರಮವನ್ನು ರೂಪುಗೊಳಿಸಿ, ಸಮಾಜದ ಅನೈಕ್ಯತೆಯನ್ನು ಪರಿಹರಿಸಿ, ಜನರಲ್ಲಿ ವಿಶೇಷವಾಗಿ ಧೈರ್ಯೋತ್ಸಾಹಗಳನ್ನು ತುಂಬಿ ಮಹತ್ಕಾರ್ಯಗಳಲ್ಲಿ ತೊಡಗುವಂತೆ ಪ್ರೇರಿಸುವ ಹೊಸ ಬಗೆಯ ಸಾಹಿತ್ಯವೇ ರಚಿತವಾಗಬೇಕು. ಹಿಂದಿನ ಕಾಲದಲ್ಲೇ ಹೊಸ ಮಾರ್ಗವನ್ನು ತೋರಿಸಿ ಸಮಾಜವನ್ನು ಕಟ್ಟಿದ ಹರಿದಾಸ ಸಾಹಿತ್ಯವು ಇಂದಿನ ಕಾಲದಲ್ಲಿ ಕಟ್ಟಲಾರದೆಂಬ ಸಂಶಯ ಯಾರಿಗೂ ಇರುವುದಿಲ್ಲ. ಈ ಬಗೆಯ ಸೂಚನೆಗೆ

ಅಭಿಮಾನಿಗಳು ಬೆಂಬಲ ಕೊಡುವರೇ? ಕೀರ್ತನರಂಗದಲ್ಲೇ ನಲವತ್ತು ವರ್ಷ ಕಾಲ ನುರಿತು ಕೀರ್ತನ ಪ್ರಪಂಚದಲ್ಲಿ ಕ್ರಾಂತಿಯನ್ನುಂಟುಮಾಡಿ ಹಾದಿ ತೋರಿಸಿದ ಕೀರ್ತನಾಚಾರ್ಯರೇ ನಮ್ಮ ಸಲಹೆಯನ್ನು ಮನ್ನಿಸಿ ಮಾರ್ಗದರ್ಶಕರಾಗುವರೆ? ಎಂಬುದು ನಮ್ಮ ಸೂಚನೆ.

ಕೆ. ಪಿ. ರಾಮನಾಥಯ್ಯ
ಎಚ್. ನಾರಾಯಣರಾವ್

---



# ಹರಿದಾಸ ಸಾಹಿತ್ಯ

## (ವಿಮರ್ಶೆ)

---

### ಅಧ್ಯಾಯ ೧

#### ೧. ದಾಸ ಸಾಹಿತ್ಯದ ಸ್ವರೂಪ

ಕರ್ಣಾಟಿಕ ಭಕ್ತ ವಿಜಯದ ಎರಡು ಸಂಪುಟಗಳನ್ನು ಬರೆದು ಮುಗಿಸಿದಾಗ ಕನ್ನಡ ಹರಿದಾಸ ಸಾಹಿತ್ಯದ ಮೇಲೆ ಚಿಕ್ಕದೊಂದು ವಿಮರ್ಶಾತ್ಮಕ ಗ್ರಂಥವನ್ನು ಬರೆಯಬೇಕೆಂಬ ಹಿರಿಯಾಶೆ ನನ್ನ ಮನಸ್ಸಿನಲ್ಲಿ ಅಂಕುರಿಸಿತು. ಹೆಚ್ಚು ತಿಳಿವಳಿಕೆಯುಳ್ಳ ಅನೇಕರಿಂದ ಕೂಡಿದ ದೊಡ್ಡ ಸಂಸ್ಥೆಯಿಂದ ಆಗಬೇಕಾದ ಕಾರ್ಯವಿದೆಂದು ಸಂಕೋಚದಿಂದ ತಟಸ್ಥನಾಗಿದ್ದೆನು. ಉದ್ದಾಮ ಪಂಡಿತರಿರುವ ಇಷ್ಟು ದೊಡ್ಡ ಕನ್ನಡ ನಾಡಿನಲ್ಲಿ ಹತ್ತು ವರ್ಷಗಳ ದೀರ್ಘಾವಧಿಯಲ್ಲಿ ಯಾರೂ ಕೈಕೊಳ್ಳದಿರುವುದನ್ನು ನೋಡಿ, ಮುಂದೆ ಬರೆಯಬಹುದಾದ ವಿದ್ವನ್ಮಣಿಗಳ ಚಿತ್ರಕ್ಕೆ ತಡಿಕೆಯಿರಲೆಂದು ಈ ಉದ್ಯಮ ದಲ್ಲಿ ಕೈಹಾಕಿದೆನು. ದಾಸ ಸಾಹಿತ್ಯ ಸಮುದ್ರದಲ್ಲಿ ಏನಿದೆಯೆಂದು ಹುಡುಕುತ್ತ ಹೊರಟರೆ ಯಾವುದನ್ನು ಬರೆಯಬೇಕು ಯಾವುದನ್ನು ಬಿಡಬೇಕು ಎಂಬ ಭಯ ನನಗಾಯಿತು. ದಾಸ ಸಾಹಿತ್ಯ ಏಕ ಮುಖವಾಗಿಲ್ಲ. ಇಡಿಯಾದ ಗ್ರಂಥ ಕೆಲವಿದ್ದರೆ ಬಿಡಿಯಾದ ಗ್ರಂಥ ಹಲವು ಇವೆ. ಒಂದು ಬಗೆಯ ಪದ್ಯಗಳಲ್ಲ. ಒಂದು ಬಗೆಯ ಪದಗಳಲ್ಲ. ಪದಗಳ ನಡೆಯನ್ನು ನೋಡುತ್ತ ಕುಳಿತರೆ, ಸಂಗೀತ ಶಾಸ್ತ್ರವೇ ಎದ್ದು ಬರುವಂತೆ ಕಾಣುತ್ತದೆ.

ಒಂದೇ ರಾಗದಲ್ಲಿರುವ ಪದಗಳನ್ನು ಆ ರಾಗದ ಸ್ವರಗ್ರಾಮಗಳಲ್ಲಿ ಕ್ರಮವಾಗಿ ಇರಿಸಿದರೆ, ತಾಳಗತಿಯಲ್ಲಿ ಆ ರಾಗದ ಸುಖಸ್ಥಾನಗಳ ಆಲಾಪನೆಯನ್ನು ಪೂರ್ತಿಮಾಡಿರುವಂತೆ ಕಂಡುಬರುತ್ತದೆ. ತಾಳಗಳ ದೃಷ್ಟಿಯಿಂದ ನೋಡಿದರೆ ಯಾರೂ ಉಪಯೋಗಿಸದಿರುವ ಧ್ರುವತಾಳ ಮಠ್ಯತಾಳಗಳ ಅಕ್ಷರಕಾಲಗಳನ್ನು ತೋರಿಸಿ ಚರಣಗಳ ಕೊನೆಯಲ್ಲಿ ತ್ಯ್ರಶ್ರ ಮಿಶ್ರ ಖಂಡ ಸಂಕೀರ್ಣ ಜಾತಿಗಳ ನಡೆಯನ್ನು ಸಾಹಿತ್ಯಾಕ್ಷರಗಳಲ್ಲಿಟ್ಟಿರುವುದು ಕಂಡುಬರುತ್ತದೆ. ನರ್ತನ ದೃಷ್ಟಿಯಿಂದ ನೋಡಿದರೆ ಭರತನ ಲಕ್ಷಣಶಾಸ್ತ್ರಕ್ಕೆ ಲಕ್ಷ್ಯವಿದೆಂದು ರಾಗಭಾವಕ್ಕೆ ಹೊಂದಿದ ರಸಭರಿತ ಶಬ್ದಗಳು ಕುಣಿಕುಣಿಯುತ್ತ ನರ್ತನದ ಮುಕ್ತಾಯಗಳನ್ನು ತೋರಿಸುವುದು ಕಂಡುಬರುತ್ತದೆ. ಕೆಲಕೆಲವು ಶಬ್ದಗಳನ್ನು ನೋಡಿದರೆ ಸಂಸ್ಕೃತ ಭಾಷಾ ನಾಟಕಗಳಲ್ಲಿ ಹೀನ ಪಾತ್ರಗಳಿಗಾಗಿ ನಿರ್ಮಿಸಿರುವ ಪ್ರಾಕೃತ ಭಾಷೆಯಂತೆ ಕನ್ನಡಕ್ಕೊಂದು ಪ್ರಾಕೃತ ಭಾಷೆಯನ್ನು ನಿರ್ಮಿಸಿರಬಹುದೇ ಎಂಬ ಸಂಶಯವಾಗುತ್ತದೆ. ಒಂದು ಸಂಪ್ರದಾಯಕ್ಕೆ ಆದ್ಯಪ್ರವರ್ತಕರು ಬೇರೊಬ್ಬರಿದ್ದು ಅವರ ಮಾರ್ಗವನ್ನನುಸರಿಸಿ ಮತ್ತೊಬ್ಬರು ಗ್ರಂಥ ರಚನೆ ಮಾಡಿದ್ದರೆ ಪರಿಶೀಲಿಸಿ ಇದು ಹಿರಿಯರ ಮಾರ್ಗದಂತಿದೆ ಆದ್ದರಿಂದ ಸರಿ, ಇದು ಹಿರಿಯರ ಮಾರ್ಗ ಬಿಟ್ಟಿದೆ ಆದ್ದರಿಂದ ತಪ್ಪು, ಎಂದು ಬರೆಯಬಹುದು. ಕರ್ಣಾಟಕ ಸಂಗೀತದ ಆದ್ಯ ಪ್ರವರ್ತಕರೂ ಹೊಸಗನ್ನಡ ಶೈಲಿಯ ನಿರ್ಮಾತರೂ ಹರಿದಾಸರೇ ಆಗಿರುವ ಕಾರಣ ಋಷಿ ತುಲ್ಯರಾದ ಆ ಪುರಾತನ ದಾಸರುಗಳ ಸಾಹಿತ್ಯವನ್ನು ವಿಮರ್ಶಿಸಲು ಅಧಿಕಾರವಿದೆಯೇ ಎಂಬ ಭಯವಾಗುತ್ತದೆ. ದಾಸ ಸಾಹಿತ್ಯದ ವಿಮರ್ಶೆಗೆ ಹೊರಟು ಸಂಪ್ರದಾಯವರಿಯದೆ ಟೀಕೆ ಮಾಡಿದರೆ "ಅಹಂ ರುದ್ರೇಭಿಃ" ಎಂಬ ವೇದವಾಕ್ಯವನ್ನು ತೆಗೆದುಕೊಂಡು ರುದ್ರೇಭಿಃ ಎಂಬುವುದು ಅಪಶಬ್ದವೆಂದು ತೋರಿಸಿದಂತಾಗುತ್ತದೆ.

ಹಾಗಿದ್ದರೆ ಈ ವಿಮರ್ಶಾತ್ಮಕ ಗ್ರಂಥದ ಉದ್ದೇಶವೇನೆಂದು ಯಾರಾದರೂ ಕೇಳಬಹುದು. ಉತ್ತರವಿಷ್ಟೆ! ಕೆಲ ಕೆಲವು ತಪ್ಪು ಭಾವನೆಗಳನ್ನು ಸರಿಪಡಿಸುವುದು, ದಾಸರ ಮತ ಧರ್ಮ ಕಾಲ ದೇಶ ಗಾನ ಜ್ಞಾನ ಭಕ್ತಿ ವೈರಾಗ್ಯ ಭಾಷಾಸೇವೆ ದೇಶಸೇವೆ ಮೊದಲಾದ ಸಂಗತಿಗಳನ್ನು ತಿಳಿಯು

ಹಾಡಿಸುವುದು; ಸಂಗೀತ ಸಾಹಿತ್ಯಗಳ ಕೆಲವು ಮಾದರಿಗಳನ್ನು ತೋರಿಸುವುದು; ಇಷ್ಟೇ.

## ೨. ದಾಸರ ಮತ

ದಾಸರಲ್ಲಿ ಮೊದಲಿಗರಾದ ಅಚಲಾನಂದರು, ಶುಕಾಚಾರ್ಯರ ಪರಂಪರೆಯಿಂದ ಬೆಳೆದು ಬಂದ ಭಾಗವತ ಧರ್ಮದ ಅನುಯಾಯಿಗಳು. ವೈಕುಂಠ ದಾಸರು ತೆಂಕಲೈ ಸಂಪ್ರದಾಯದ ಶ್ರೀ ವೈಷ್ಣವರು. ಮಿಕ್ಕ ಪ್ರಸಿದ್ಧ ದಾಸರುಗಳು ಮಧ್ವ ಮತಸ್ಥರು. ಮಧ್ವಮತದ ತತ್ವವಾದರೋ—

ಶ್ರೀ ಮನ್ಮಧ್ವಮತೇ ಹರಿಃ ಪರತರಃ, ಸತ್ಯಂ ಜಗತ್, ತತ್ವತೋಭೇದಃ,
ಜೀವಗಣಾಃ ಹರೇರನುಚರಾಃ, ನೀಚೋಚ್ಚಭಾವಂಗತಾಃ ॥
ಮುಕ್ತಿರ್ನೈಜ ಸುಖಾನುಭೂತಿಃ, ಅಮಲಾಭಕ್ತಿಶ್ಚ ತತ್ಸಾಧನಂ, ಅಕ್ಷಾದಿ
ತ್ರಿತಯಂ ಪ್ರಮಾಣಂ, ಅಖಿಲಾಮ್ನಾಯೈಕವೇದ್ಯಃ ಹರಿಃ ॥ ೧ ॥

ತಾ॥ ದೇವರು (ಹರಿಯು) ಸರ್ವೋತ್ತಮನು. ಜಗತ್ತು ಸತ್ಯವಾದದ್ದು. ತತ್ವದಿಂದ ಇರುವುದು ಭೇದ. ತರತಮ ಭಾವದಿಂದಿರುವ ಜೀವರು ಹರಿಯ ಅನುಚರರು. ವಿಷಯ ಸ್ಪರ್ಶವಿಲ್ಲದ ನಿಜಸುಖಾನುಭವವೇ ಮುಕ್ತಿ. ಮುಕ್ತಿಗೆ ಭಕ್ತಿ ಸಾಧನೆ. ಪ್ರತ್ಯಕ್ಷ ಅನುಮಾನ ಆಗಮಗಳು ಮೂರು ಪ್ರಮಾಣಗಳು. ಸಕಲಾಗಮಗಳಿಂದ ವೇದ್ಯನಾದವನು ದೇವರು.

ಮಾನವ ಪ್ರಪಂಚ ವ್ಯವಹಾರಕ್ಕೆ ಈ ತತ್ವಗಳು ಸಾಧಕವಾಗಿವೆ. ಲೋಕದಲ್ಲಿ ಇದುವರೆಗೆ ಸ್ಥಾಪಿತವಾಗಿರುವ ಮತಗಳು ವೈದಿಕವಾಗಿರಲಿ, ಅವೈದಿಕವಾಗಿರಲಿ, ದ್ವೈತ ಅದ್ವೈತ ಎಂಬ ಎರಡು ದೊಡ್ಡ ಗುಂಪುಗಳಲ್ಲಿ ಸಮಾವೇಶವಾಗುತ್ತವೆ. ಶಬ್ದ ಶ್ರವಣ ಮಾತ್ರದಿಂದ ದ್ವೈತ ಮೊದಲಿದ್ದು ಅನಂತರ ಅದ್ವೈತ ಬಂದಿತೆಂದು ಅರ್ಥವಾಗುತ್ತದೆ. ದ್ವೈತಿಗಳು ಜೀವ ಬ್ರಹ್ಮರು ಭಿನ್ನರೆಂದರೆ ಅದ್ವೈತಿಗಳು ಅಭಿನ್ನರೆನ್ನುತ್ತಾರೆ. ದ್ವೈತಿಗಳು ಜಗತ್ತು ಸತ್ಯವೆಂದರೆ ಅದ್ವೈತಿಗಳು ಮಿಥ್ಯವೆನ್ನುತ್ತಾರೆ. ದ್ವೈತಿಗಳು ಜಗತ್ತು ಸತ್ಯವಾದರೂ ನಶ್ವರವೆಂದರೆ, ಅದ್ವೈತಿಗಳು ಸತ್ಯವೆಂದು ಹೇಳಿ ನಶ್ವರವೆನ್ನಬೇಕಾಗಿಲ್ಲ; ಜಗತ್ತು ತ್ರೈಕಾಲಿಕನಿಷೇಧವುಳ್ಳದ್ದು ಅಂದರೆ ಹಿಂದೆ ಇರಲಿಲ್ಲ

ಈಗ ಇಲ್ಲ ಮುಂದೆ ಇರುವುದಿಲ್ಲ; ಎನ್ನುತ್ತಾರೆ. ಅದ್ವೈತ ತತ್ವದ ಪರಮಾವಧಿ ಹೀಗಿದ್ದರೂ ಐಕ್ಯರೂಪವಾದ ಮುಕ್ತಿಯು ಶತಕೋಟಿ ಜನ್ಮಗಳ ಪುಣ್ಯದಿಂದ ವಿನಾ ಲಭಿಸುವದಿಲ್ಲವೆಂದು "ಮುಕ್ತಿರ್ನೋ ಶತಕೋಟಿ ಜನ್ಮ ಸುಕೃತೈಃ ಪುಣ್ಯೈರ್ವಿನಾ ಲಭ್ಯತೆ" ಎಂದು ಶಂಕರ ಭಗವತ್ಪಾದರು ಅಪ್ಪಣೆ ಕೊಡಿಸಿರುತ್ತಾರೆ. ಪರಮಾರ್ಥದ ಮಾತು ಹೀಗಿದ್ದರೆ ವ್ಯವಹಾರವನ್ನವರು ನಿರಾಕರಿಸಿಲ್ಲ. ಎಲ್ಲ ಆಚಾರ್ಯರಿಗಿಂತ ಅಧಿಕವಾಗಿ ಭಕ್ತಿಮಾರ್ಗವನ್ನವರು ಉಪದೇಶಿಸಿರುತ್ತಾರೆ: "ನಾನು" ಎಂಬುವುದು ಹೋಗುವವರೆಗೆ ಐಕ್ಯವಿಲ್ಲ. "ನಾನು" ಇರುವವರೆಗೆ ಜಗತ್ತು ಮಿಥ್ಯನಲ್ಲ. "ನಾನು" ಹೋದಾಗ ಜಗತ್ತಿನ ಮಾತೇ ಇಲ್ಲ. ಇಷ್ಟು ಸೂಕ್ಷ್ಮವಾಗಿದೆ ಅದ್ವೈತ. ವ್ಯವಹಾರ ದಲ್ಲಾದರೋ–ಅದ್ವೈತಿಗಳಿಗಾಗಲಿ ದ್ವೈತಿಗಳಿಗಾಗಲಿ ದೇವರು ದೊಡ್ಡವ ನೆನ್ನುವುದಕ್ಕಿಂತ, ಜಗತ್ತು ನಶ್ವರವೆನ್ನುವುದಕ್ಕಿಂತ ಹೆಚ್ಚು ವಿಚಾರ ಬುದ್ಧಿಗೆ ವಿಷಯವಾಗುತ್ತಿಲ್ಲ. ಆದ್ದರಿಂದ ಹರಿದಾಸರ ಮತ ಯಾರಿಗೂ ಬಾಧಕ ವಾಗಿಲ್ಲ.

## ೩. ದಾಸರ ಧರ್ಮ

ಮತ ಶಬ್ದಾರ್ಥಕ್ಕಿಂತ ಧರ್ಮ ಶಬ್ದಾರ್ಥವು ವ್ಯಾಪಕವೆಂದು ಕಾಣುತ್ತದೆ. ಮತ ಶಬ್ದಕ್ಕೆ ಕೆಲಕೆಲವು ಪಂಗಡಗಳವರು ಆಚರಿಸುವ ಸಾಂಪ್ರದಾಯಿಕ ಕರ್ಮವೆಂದು ಅರ್ಥ ಸಂಕೋಚವಾಗಿದೆ. ದಾಸರು ಅನುಸರಿಸಿದ ಧರ್ಮವೆಂದರೆ ಭಾಗವತ ಧರ್ಮ. ವೇದಾರ್ಥ ನಿರ್ಣಯಕ್ಕಾಗಿ ಬ್ರಹ್ಮ ಸೂತ್ರಗಳನ್ನು ರಚಿಸಿ, ಆ ಸೂತ್ರಗಳಿಗೆ ವ್ಯಾಖ್ಯಾನದಂತಿರಲೆಂದು ಆಖ್ಯಾನರೂಪವಾಗಿ ಶ್ರೀಮದ್ಭಾಗವತವನ್ನು ಬರೆದ ವ್ಯಾಸ ಭಗವಾನರ ಧರ್ಮ. ವ್ಯಾಸ ಪುತ್ರರಾದ ಶುಕಬ್ರಹ್ಮರು ಉಪದೇಶಿಸಿ ಪ್ರಚಾರ ಮಾಡಿದ ಧರ್ಮ. ಅಂದರೆ ಭಕ್ತಿಪಂಥ. ಅದ್ವೈತ ಗುರುಪರಂಪರೆಯಲ್ಲಿ ಈ ತಂದೆ ಮಕ್ಕಳುಗಳಿದ್ದಾರೆ. ದ್ವೈತ ಗುರುಪರಂಪರೆಯಲ್ಲಿ ಮಧ್ವಾಚಾರ್ಯರೇ ಬದರಿಕಾಶ್ರಮಕ್ಕೆ ಹೋಗಿ ವೇದವ್ಯಾಸರಲ್ಲಿ ಶಿಷ್ಯತ್ವವಹಿಸಿದ್ದಾರೆ. ಆದ್ದರಿಂದ ಭಾಗವತ ಧರ್ಮ ಸಕಲ ಧರ್ಮಗಳಿಗೆ ಸಮಾನವಾದದ್ದು. ಭಕ್ತಿಗೆ ಮಹತ್ವ ಕೊಡದ ಮತ ಪ್ರಪಂಚದಲ್ಲಿಲ್ಲ. ಭಕ್ತಿಪಂಥದಲ್ಲಿ ವರ್ಣಾಶ್ರಮಗಳ ಪ್ರಶ್ನೆಯಿಲ್ಲ. ಭಾಗವತ

ಭಾರತಾದಿ ಆಗಮಗಳಿಂದ ಭಗವನ್ಮಹಿಮೆಯನ್ನು ತಿಳಿದು ಭಗವಂತನನ್ನು ಆರಾಧಿಸಲು ಮನುಷ್ಯಮಾತ್ರರೆಲ್ಲಾ ಅಧಿಕಾರಿಗಳು. ವರ್ಣಾಶ್ರಮ ಧರ್ಮ ಗಳನ್ನೂ ಪಾಲಿಸಿಕೊಂಡು ವಿಶ್ವವ್ಯಾಪಕ ಭಕ್ತಿಪಂಥವನ್ನು ಪದೇಶಿಸಿ ಸಮಾಜ ವನ್ನುದ್ಧರಿಸಲು ಹೊರಟವರು ಹರಿದಾಸರು. ವೇದಗಳನ್ನು ನಿಂದಿಸದೆ, ಪುರಾಣಗಳನ್ನು ತಿರಸ್ಕರಿಸದೆ, ಕರ್ಮ ಮಾರ್ಗವನ್ನು ಜರಿಯದೆ, ನಿತ್ಯವೂ ಸತ್ಯವೂ ಆದ ರಾಜಮಾರ್ಗದಲ್ಲಿ ಸಂಚರಿಸಿದವರು ಹರಿದಾಸರು.

ಶಂಕರ, ರಾಮಾನುಜ, ಮಧ್ವ, ವಲ್ಲಭಾಚಾರ್ಯರಂಥಾ ಸಕಲ ಪ್ರಸಿದ್ಧ ಭಾಷ್ಯಕಾರರು ಜಗತ್ತಿನ ಸೃಷ್ಟಿ ಸ್ಥಿತಿ ಲಯ ಜ್ಞಾನ ಅಜ್ಞಾನ ನಿಯಮನ ಬಂಧ ಮೋಕ್ಷಗಳಿಗೆ ಯಾವ ಶ್ರೀಮನ್ನಾರಾಯಣನು ಕಾರಣ ನೆಂದು ಸಾರಿದರೋ - ಸಂಧ್ಯಾದಿ ಕರ್ಮಗಳನ್ನಾಚರಿಸುವಾಗ ಯಾವನ ಕೇಶವಾದಿ ಚತುರ್ವಿಂಶತಿ ನಾಮಗಳಿಂದ ಆಚಮನ ಅಂಗನ್ಯಾಸಗಳನ್ನು ಸಕಲ ವೈದಿಕಮತಾನುಯಾಯಿಗಳೂ ಮಾಡಿ "ಯಸ್ಯಸ್ಮೃತ್ಯಾಚ ನಾಮೋಕ್ತ್ಯಾ ತಪಸ್ಸಂಧ್ಯಾಕ್ರಿಯಾದಿಷು ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋವಂದೇ ತಮಚ್ಯುತಂ" ಇತ್ಯಾದಿ ಮಂತ್ರವನ್ನುಚ್ಚರಿಸಿ, ಅಚ್ಯುತಾನಂತ ಗೋವಿಂದ ನಾಮೋಚ್ಚಾರಣೆಗಳಿಂದ ಮಂತ್ರ ತಂತ್ರ ಸ್ವರ ವರ್ಣ ಲೋಪ ದೋಷಗಳ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವರೋ - ಸಕಲ ಕರ್ಮಗಳ ಸಮಾರೋಪಣೆಯಲ್ಲಿ "ಕಾಯೇನವಾಚಾ ಮನಸೇಂದ್ರಿಯೈರ್ವಾ ಬುಧ್ಯಾತ್ಮ ನಾವಾ ಪ್ರಕೃತೇಃ ಸ್ವಭಾವಾತ್ ಕರೋಮಿಯದ್ಯತ್ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯಾಮಿ" ಎಂಬದಾಗಿ ಸಕಲರೂ ಕರ್ಮ ಫಲವನ್ನು ಶ್ರೀಹರಿಗೆ ಸಮರ್ಪಿಸುವರೋ–ಅಧ್ಯಯನದ ಆದಿಯಲ್ಲಿ ಅಂತ್ಯದಲ್ಲಿ "ಹರಿಃ ಓಂ" ಎಂಬ ಶಬ್ದಗಳನ್ನು ಸ್ವರಪೂರ್ವಕ ಉಚ್ಚರಿಸುತ್ತಾ ಅಧ್ಯಯನದ ಫಲವನ್ನು ಶ್ರೀ ಕೃಷ್ಣನಿಗೆ ಸಮರ್ಪಿಸುವರೋ - ಪುರಾಣಗಳೆಷ್ಟಿದ್ದರೂ ರಾಮಾಯಣ ಭಾರತ ಭಾಗವತ ಪುರಾಣಗಳನ್ನು ಪಠಣಮಾಡಿ, ಶ್ರವಣ ಮಾಡಿ "ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ' ಆದಾವಂತ್ಯೇಚ ಮಧ್ಯೇಚ ವಿಷ್ಣುಸ್ಸರ್ವತ್ರಗೀಯತೇ'' ಎಂಬ ಸಕಲ ಶಾಸ್ತ್ರಗಳ ಮಥಿತಾರ್ಥವನ್ನು ಒಂದೇ ಶ್ಲೋಕದಿಂದ ಕಥನಮಾಡಿ ಪುನೀತರಾಗುವರೋ-

ಅಂಥಾ ಪ್ರಸಿದ್ಧನಾದ ಶ್ರೀಹರಿಯ ಭಕ್ತಿಮಾರ್ಗವನ್ನು ಅನುಸರಿಸಿ, ಸ್ವಯಂ ಹರಿದಾಸರೆನಿಸಿ, ಸ್ವಾರ್ಥವನ್ನು ಪರಿತ್ಯಜಿಸಿ ಲೋಕೋಪಕಾರ ಮಾಡಿದವರು ಹರಿದಾಸರು. ಅಂದಬಳಿಕ ದಾಸರು ಯಾರಿಗೆ ಬೇಡ ? ಅವರ ಧರ್ಮ ಯಾವ ಕಾಲಕ್ಕೆ ಬೇಡ ?

## ೪. ದಾಸರ ಕಾಲ

ದಾಸ ಸಾಹಿತ್ಯದ ಉಗಮ ಒಂಭತ್ತನೇ ಶತಮಾನದಷ್ಟು ಹಿಂದಿನ ಕಾಲದಲ್ಲೇ ಆಯಿತೆಂಬುದರಲ್ಲಿ ಲೇಶವಾದರೂ ಸಂಶಯವಿಲ್ಲ. ಶಾಲೀವಾಹನ ಶಕ ೮೧೧ ಅಂದರೆ ಕ್ರಿ. ಶ. ೮೭೯ರಲ್ಲಿದ್ದ ಅಚಲಾನಂದರು ಇದುವರೆಗೆ ದೊರೆತಿರುವ ಇತಿಹಾಸದಂತೆ ದಾಸ ಸಾಹಿತ್ಯ ರಚನೆಗೆ ಮೊದಲಿಗರು. ಕನ್ನಡ ಭಾಷಾ ಸಾಹಿತ್ಯದಲ್ಲಿ ಎಂಟನೇ ಶತಕದಲ್ಲಿ ರಚಿತವಾದುದೆಂದು ಉಪಲಬ್ಧ ವಾಗಿರುವ ಪ್ರೌಢ ಗ್ರಂಥ ನೃಪತುಂಗನ ಕವಿರಾಜಮಾರ್ಗ. ಗ್ರಂಥದ ಪ್ರೌಢಿಮೆ ನೋಡಿದರೆ ಅದಕ್ಕಿಂತ ಎಷ್ಟೋ ಹಿಂದಿನ ಕಾಲದಿಂದ ಕನ್ನಡದಲ್ಲಿ ಗ್ರಂಥರಚನೆಯಾಗುತ್ತಿತ್ತೆಂದು ಅರ್ಥವಾಗುತ್ತದೆ. ಶಾಸನಗಳಲ್ಲಿ ಅತ್ಯಂತ ಹಳೆಯದೆಂದು ದೊರೆತಿರುವುದು ಕ್ರಿ. ಶ. ೪೫೦ರ ಹಲ್ಮಿಡಿಯ ಶಾಸನ. ಈ ಶಾಸನದಲ್ಲಿ ಸಂಸ್ಕೃತ ಮಾತುಗಳು ಹೆಚ್ಚಾಗಿವೆ. ಅನಂತರ ದೊರೆತಿರುವ ಶಾಸನಗಳಲ್ಲಿ ಏಳನೇ ಶತಕದ ಬಾದಾಮಿಯ ಶಾಸನ ಹಳೆಯದು. ಆ ಶಾಸನದ—

ಸಾಧುಗೆ ಸಾಧು, ಮಾಧುರ್ಯಂಗೆ ಮಾಧುರ್ಯಂ<br>
ಬಾಧಿಪ್ಪಕಲಿಗೆ ಕಲಿಯುಗ ವಿಪರೀತ<br>
ಮಾಧವ ನೀತ ಪೆರನಲ್ಲ

ಎಂಬ ಮಾತುಗಳಲ್ಲಿ ಅರ್ಥವಾಗದ ಶಬ್ದ ಒಂದೂ ಇಲ್ಲ. ಹಳೆಗನ್ನಡ ಧೋರಣೆ ಬಂದರೆ ಕವಿಗಳು ಈಗಲೂ ಹೀಗೆ ಬರೆಯುತ್ತಾರೆ. ಹೊಸಗನ್ನಡ ಧೋರಣೆ ಬಂದರೆ ದಾಸರ ಶೈಲಿಯನ್ನನುಸರಿಸುತ್ತಾರೆ.

ಅಚಲಾನಂದರ—

ಪಾತಕರೊಳಗೆಲ್ಲ ನಾನೆ ವೆಗ್ಗಳನಯ್ಯ<br>
ಪ್ರಾಯಶ್ಚಿತಕ್ಕೆ ನಿನ್ನ ನಾಮವೆ ಘನವಯ್ಯ

ಪಾತಕವನು ನಾನು ಮಾಡಿದ್ದು ಏನು ?
ಪಾತಕ ಪಾವನ ಎರಡು ನಿನ್ನಾಧೀನ
ಪಾತಕವೆನಗಿಲ್ಲ ಪ್ರಾಯಶ್ಚಿತವೆನಗಿಲ್ಲ
ಕೇಳಯ್ಯ ದೇವ ಅಚಲಾನಂದ ವಿಠಲ ॥ ೧ ॥

ಸುಖವಾದರೆ ತನ್ನಿಂದಾಯಿತೆಂಬೋರೋ
ದುಃಖವಾದರೆ ದೈವ ಮಾಡಿತೆಂಬೋರೋ
ಸುಖಕೆ ತಾನ್ಯಾರೋ ದುಃಖಕೆ ತಾನ್ಯಾರೋ
ಸುಖದುಃಖವೆರಡೂ ಹರಿಯೆ ನಿನ್ನಾಧೀನ
ರುಕುಮಿಣಿ ಪತಿ ಅಚಲಾನಂದ ವಿಠಲ ॥ ೨ ॥

ಸಿರಿ ನಿನಗುಂಟೆಂದು ಗರ್ವಿಸಲಿ ಬೇಡ
ಸಿರಿ ಎನಗಿಲ್ಲೆಂದು ಮುನಿದು ನೋಡಲಿ ಬೇಡ
ಹರಿಯೆ ನಿನ್ನಂಥ ಒಡೆಯರು ಎನಗುಂಟು
ಆರುಹೊ ನಿನ್ನೊಡೆಯರ ಅಚಲಾನಂದ ವಿಠಲ ॥೩॥

ಈ ಉಗಾಭೋಗಗಳು ಹೊಸಗನ್ನಡ ಶೈಲಿಯಲ್ಲಿವೆ. ಹರಿದಾಸ ಪರಂಪರೆಯಲ್ಲಿ ಇಬ್ಬರು ಅಚಲಾನಂದರಾಗಿಲ್ಲ. ಅಚಲಾನಂದರ ಶಿಷ್ಯರು ಅನೇಕರಾಗಿದ್ದರೂ ಸಂತತಿಯವರು ತಂದೆ ಅಚಲಾನಂದ ವಿಠಲ, ಗುರು ಅಚಲಾನಂದ ವಿಠಲ, ಮುದ್ದು ಅಚಲಾನಂದ ವಿಠಲ, ಎಂಬದಾಗಿ ಹಾಡಿದ ಹಾಡುಗಳಿವೆ. ಸಂಸ್ಕೃತದಲ್ಲಿ ಗದ್ಯಪದ್ಯಗಳನ್ನೂ, ಪ್ರೌಢಿಮೆಗಾಗಿ ಕನ್ನಡದಲ್ಲಿ ಸಂಸ್ಕೃತಮಯವಾದ ಹಾಡುಗಳನ್ನೂ ಇವರು ಬರೆದಿದ್ದಾರೆ. ವಂಶ ಪರಂಪರೆಯಿಂದ ಸಂಗೃಹೀತವಾಗಿರುವ ನಮ್ಮ ದಪ್ತರದಲ್ಲಿರುವಂತೆ ಇತರ ಅನೇಕ ಸಂಪ್ರದಾಯಸ್ಥರ ಮನೆಗಳಲ್ಲೂ ವ್ಯತ್ಯಾಸವಿಲ್ಲದೆ ಈ ಉಗಾಭೋಗಗಳಿವೆ. ಆದ್ದರಿಂದ ಹೊಸ ಕನ್ನಡ ಶೈಲಿಗೆ ದಾರಿ ಅಚಲಾನಂದರಿಂದಾಯಿತೆಂದು ತಿಳಿದರೆ ತಪ್ಪಾಗುವುದಿಲ್ಲ. ಈ ಉಗಾಭೋಗಗಳು ಸ್ಥಾಯಿಯಾ ಗಾನ ಪದ್ಧತಿಯಂತೆ ಹಾಡುವ ಕ್ರಮ ಈ ಕಾಲದಲ್ಲಿ ಮರೆತಿದ್ದರೂ ಸರ್ವ ಲಘು ಗತಿಯಲ್ಲೂ ಅಟ್ಟತಾಳ ಗತಿಯಲ್ಲೂ ಹಾಡುವ ರೂಢಿ ಇದೆ. ಅಚಲಾನಂದರ

ನಂತರ ಅವರ ಸಂತತಿಯವರೂ ಇತರ ಪೀಠಸ್ಥ ಶಿಷ್ಯರೂ ಭಾಗವತ ಧರ್ಮವನ್ನು ಪ್ರಚಾರಮಾಡಿರಬಹುದಾಗಿದ್ದರೂ ಪ್ರಸಿದ್ಧವಾದ ಇತಿಹಾಸ ದೊರೆಯುವುದಿಲ್ಲ. ಕ್ರಿ. ಶ. ೮೭೯ ರಿಂದ ಮೂರು ಶತಮಾನಗಳ ಕಾಲವನ್ನು ಕತ್ತಲೆಯ ದಿನಗಳೆಂದು ಕರೆಯಬಹುದು. ಕ್ರಿ. ೧೨೦೫ ರಿಂದ ೧೨೧೪ರವರೆಗೆ ಶ್ರೀಮನ್ಮಧ್ವಾಚಾರ್ಯರ ಪೀಠವನ್ನಲಂಕರಿಸಿ ಮಠರಾಜ್ಯಭಾರಮಾಡಿದ ನರಹರಿ ತೀರ್ಥರು ಭಾಗವತ ಧರ್ಮ ಪ್ರಚಾರಕ್ಕಾಗಿ ಅನೇಕ ಕನ್ನಡ ದೇವರ ನಾಮಾವಿಗಳನ್ನು ಮಾಡಿದರು. ಆ ಪೈಕಿ ನಮಗೆ ದೊರೆತಿರುವುದು ಮೂರೇ ಹಾಡುಗಳು. ಆ ಹಾಡುಗಳ ಭಾಷೆ ಅಚಲಾನಂದರ ಕಾಲಕ್ಕಿಂತ ಸುರಿತಿರುವಂತೆ ಕಾಣುತ್ತದೆ. ಹಾಡಿನ ರಾಗವೂ ನಡೆಯೂ ಗಾನದೃಷ್ಟಿಯಿಂದ ಕಳೆಕಟ್ಟಿ ಬಂದಿವೆ. ಆ ಪೈಕಿ ಒಂದು ಹಾಡು ಈ ರೀತಿ ಇದೆ.

ಆನಂದ ಭೈರವಿ-ಆದಿತಾಳ

ಎಂತು ಮರುಳಾದೆ । ನಾ । ನೆಂತು ಮರುಳಾದೆ ॥ ಪ ॥
ಎಂತು ಮರುಳಾದೆ । ಭವದೊಳು ಬಳಲಿದೆ
ಸಂತತ ಪೊರೆ ರಘು । ಕುಲ ತಿಲಕ ॥ ಅ ॥
ಮಾತಿನಲ್ಲಿ ಹರಿದಾಸತನ । ರೀತಿಯಲ್ಲಿ ಪ್ರಭುದಾಸತನ
ಪ್ರೀತಿ ಧನಾದಿ ವಿಷಯದಲ್ಲಿ । ನಿ । ರ್ಭೀತಿ
ದೈವಗುರುದ್ರೋಹದಲಿ ॥ ೧ ॥
ಏಕಾಂತದಲ್ಲಿ ಧನದ ಗೋಷ್ಠಿ । ಲೋಕಾಂತದಿ ವೈರಾಗ್ಯದ ಗೋಷ್ಠಿ
ಶ್ರೀಕಾಂತನ ಸೇವೆಗೆ ಅನುಮಾನ । ಭೂಕಾಂತನ ಸೇವೆಗೆ
ಸುಮ್ಮಾನ ॥ ೨ ॥
ಡೊಂಬನಂತೆ ಬೈಲಿಗೆ ಹರಹಿ । ಡಂಭತನಕೆ ಕರ್ಮವ ಮಾಡಿ
ಅಂಬುಜನಾಭಗೆ ದೂರಾಗಿ । ಕುಂಭೀಪಾಕಕೆ ಗುರಿಯಾದೆ ॥ ೩ ॥
ಯಾರಿಗಾಗಿ ಧಾವತಿ ಪಡುವೇ । ಇ । ನ್ನಾರಿಗೆ ಒಡವೆಯ ಬಚ್ಚಿಡುವೆ
ನಾರಿಪುತ್ರ ಮಿತ್ರಾದಿಗಳು । ಯಾರು ಬಾರರೋ ಸಂಗಡದೀ ॥ ೪ ॥
ಭಜಿಸು ಬ್ರಹ್ಮಾದಿ ವಂದಿತ ಹರಿಯ । ತ್ಯಜಿಸು ಕಾಮಾದಿ ದುರ್ವಿಷಯ
ಸುಜನ ವಂದಿತನಾದ ನರಹರಿಯು । ಭಜಿಸು ಶ್ರೀಶ
ಶ್ರೀ ರಘುಪತಿಯ ॥ ೫ ॥

ನರಹರಿ ತೀರ್ಥರು ಮಧ್ವಾಚಾರ್ಯರ ಪೀಠವನ್ನಲಂಕರಿಸಿದವರಲ್ಲಿ ಎರಡನೆಯವರು. ಸ್ವಾಮಿ ಶಾಸ್ತ್ರಿಗಳೆಂದು ಇವರ ಪೂರ್ವಾಶ್ರಮದ ಹೆಸರು. ಇವರು ಗಜಪತಿರಾಜರ ವಿದ್ಯಾಗುರುಗಳಾಗಿದ್ದುದಲ್ಲದೆ ಬೊಕ್ಕಸದ ಮುಖ್ಯಾಧಿಕಾರಿಗಳಾಗಿದ್ದರು. ಮಧ್ವಾಚಾರ್ಯರು ಆ ಪ್ರಾಂತ್ಯ ದಿಗ್ವಿಜಯಕ್ಕೆ ಬಂದಾಗ ಶಾಸ್ತ್ರಿಗಳು ಆಚಾರ್ಯರ ಪಾಂಡಿತ್ಯಕ್ಕೆ ಮೆಚ್ಚಿ ಅವರಿಂದ ಸನ್ಯಾಸ ಗ್ರಹಣಮಾಡಿದರು. ಸ್ವಾಮಿ ಶಾಸ್ತ್ರಿಗಳ ಆಶ್ರಮನಾಮ ನರಹರಿತೀರ್ಥರೆಂದಾಯಿತು. ಸನ್ಯಾಸಿಗಳಾದರೂ ಗುರುಗಳನ್ನು ಹಿಂಬಾಲಿಸಲು ತೀರ್ಥರಿಗೆ ಸಾಧ್ಯವಾಗಲಿಲ್ಲ. ಗಜಪತಿರಾಜನು ಮೃತನಾಗುತ್ತಲೇ ರಾಜ್ಯಕಾರ್ಯನಿರ್ವಾಹ ನರಹರಿ ತೀರ್ಥರ ಕೊರಳಿಗೆ ಕಟ್ಟಿತು. ರಾಜಕುಮಾರನು ವಯಸ್ಕನಾಗುವವರೆಗೆ ಹನ್ನೆರಡು ವರ್ಷ ತೀರ್ಥರಿಗೆ ಲೌಕಿಕ ಬಿಡಲಿಲ್ಲ. ಆಗಿನ ಮನಸ್ಸಿನ ಸ್ಥಿತಿಯಲ್ಲಿ ಹಾಡಿದುದು ಮೇಲ್ಕಂಡ ದೇವರನಾಮ. ನರಹರಿ ತೀರ್ಥರು ವೇದಾಂತ ಪೀಠಾರೋಹಣ ಮಾಡಿದ ಮೇಲೆ ಹರಿದಾಸರಂತಿದ್ದು ಕನ್ನಡ ದೇವರ ನಾಮಗಳಿಂದ ಜನಸಮಾಜಕ್ಕೆ ಧರ್ಮ ಬೋಧನೆ ಮಾಡಿದರು. ಮತ್ತೆ ಇವರ ನಂತರ ಕ್ರಿ. ಶ. ೧೪೫೦ರವರೆಗೆ ದಾಸ ಸಾಹಿತ್ಯದ ಇತಿಹಾಸ ದೊರೆಯುವುದಿಲ್ಲ. ಸುಮಾರು ಕ್ರಿ. ೧೪೦೬ ರಿಂದ ೧೪೮೬ರವರೆಗಿದ್ದ ಶ್ರೀಪಾದರಾಯರ ಕಾಲದಲ್ಲಿ ಹರಿದಾಸ ಸಾಹಿತ್ಯಕ್ಕೆ ಕಳೆಬಂದಿತು. ವೇದಾದಿ ಸಕಲ ಶಾಸ್ತ್ರಗಳಲ್ಲಿ, ಕನ್ನಡ ಸಾಹಿತ್ಯದಲ್ಲಿ, ಸಂಗೀತದಲ್ಲಿ, ಶ್ರೀಪಾದರಾಯರಿಗೆ ಆ ಕಾಲದಲ್ಲಿ ಸಮರು ಮತ್ತೊಬ್ಬರಿರಲಿಲ್ಲ. ಸಂಗೀತದಲ್ಲಿ "ಸುಳಾದಿ" ಯೆಂಬ ಪರಿಭಾಷೆಯಿಂದ ಕರ್ಣಾಟಕ ಗಾಯನಕ್ಕೆ ಹೊಸ ಬೆಳಕನ್ನು ಕೊಟ್ಟ ಕೀರ್ತಿ ಈ ಮಹನೀಯರದು. ಇವರ ಸಂಗೀತ ಸಾಹಿತ್ಯಗಳ ಮಾದರಿಗಳನ್ನು ಮುಂದಿನ ಅಧ್ಯಾಯಗಳಲ್ಲಿ ಕೊಡಲಾಗುತ್ತದೆ.

ಶ್ರೀಪಾದರಾಯರ ನಂತರ ಬಂದವರು ವ್ಯಾಸರಾಯರು. ಸಳುವ ನರಸಿಂಹನ ಕಾಲದಿಂದ ಅಚ್ಯುತರಾಯನ ಕಾಲದವರೆಗೆ ಸುಮಾರು ಅರವತ್ತು ವರ್ಷ ಕರ್ಣಾಟಕ ಸಾಮ್ರಾಜ್ಯ ದೇವತೆಯೆಂದು ಹೊಗಳಿಸಿಕೊಂಡು ಕೃಷ್ಣದೇವರಾಯನಿಂದ ರತ್ನಾಭಿಷಿಕ್ತರಾಗಿ ಕನ್ನಡ ಭಾಷೆಗೆ, ಗಾಯಕರಿಗೆ, ಶಾಸ್ತ್ರ ಪಂಡಿತರಿಗೆ, ಇವರು ಕೊಟ್ಟ ಆಶ್ರಯವು ಸುವರ್ಣಾಕ್ಷರಗಳಿಂದ

ಬೆಳೆದಿರುವಂತಿವೆ. ಇವರಿಗಿದ್ದ ಮತ ಸಹಾನುಭೂತಿ, ರಾಜಕಾರಣ ನೈಪುಣ್ಯ ಮೊದಲಾದ ಸದ್ಗುಣಗಳು ಪ್ರಪಂಚದಲ್ಲಿ ಮತ್ತೆ ಯಾರಿಗಾದರಿದ್ದರೆ ಅದು ವಿದ್ಯಾರಣ್ಯರಿಗಿತ್ತೆಂದು ಒಬ್ಬರ ಹೆಸರನ್ನು ಹೇಳಬಹುದು. ಕರ್ನಾಟಕ ಸಾಮ್ರಾಜ್ಯ ಸ್ಥಾಪನೆ ಪಾಲನೆಗಳಿಗೆ ಕಾರಣರಾದ ಇವರೀರ್ವರನ್ನು ಬಿಟ್ಟರೆ ಕರ್ನಾಟಕಕ್ಕೆ ಇತಿಹಾಸವೇ ಇಲ್ಲವೆನ್ನಬಹುದು. ಪಕ್ಷಧರಮಿಶ್ರನೆಂಬ ಉತ್ತರ ಭಾರತದ ಉದ್ದಾಮ ಪಂಡಿತನು ವ್ಯಾಸರಾಯರನ್ನು ಯಾವ ಬಗೆಯಿಂದಲೂ ಸೋಲಿಸಲರಿಯದೆ, ಅವರ ವಿದ್ಯಾಗುರುಗಳಾದ ಶ್ರೀಪಾದರಾಯರ ಬಳಿಗೆ ಬಂದು ಸ್ವಾಮಿ, ನಿಮ್ಮ ಶಿಷ್ಯರ ಪ್ರಭಾವವನ್ನು ಕೇಳಿ !

ಯದಧೀತಂ ತದಧೀತಂ ಯದನಧೀತಂ ತದಪ್ಯಧೀತಂ
ಪಕ್ಷಧರವಿಪಕ್ಷಃ ನಾವೇಕ್ಷಿ ವಿನಾ ನವೀನ ವ್ಯಾಸೇನ ॥

ತಾ॥ ನಾನು ಓದಿರುವುದನ್ನು ಅವರು ಓದಿದ್ದಾರೆ. ನಾನು ಓದದಿರುವುದನ್ನೂ ಅವರು ಓದಿದ್ದಾರೆ. ಈ ಪಕ್ಷಧರನಿಗೆ ಎದುರಾಳಿಯು ಅಭಿನವ ವ್ಯಾಸರ ವಿನಾ ಮತ್ತೊಬ್ಬರನ್ನು ನೋಡಲಿಲ್ಲ; ಎಂದು ಹೇಳಿದ ಪಂತೆ! ವ್ಯಾಸರಾಯರು ಸ್ವಯಂಗಾನ ಪಂಡಿತರೂ ಕನ್ನಡ ಭಾಷಾ ಪಂಡಿತರೂ ಆಗಿದ್ದುದರಿಂದ ಅವರ ಸಂಗೀತ ಸಾಹಿತ್ಯಗಳ ಮಾದರಿಯನ್ನು ಮುಂದಿನ ಅಧ್ಯಾಯಗಳಲ್ಲಿ ನೋಡಬಹುದು. ಇಂಥಾ ವ್ಯಾಸರಾಯರ ಶಿಷ್ಯರು ಪುರಂದರದಾಸರು.

ಪುರಂದರ ದಾಸರ ಕಾಲವೆಂದರೆ ಕರ್ನಾಟಕ ಸಂಗೀತ ಸಾಹಿತ್ಯಗಳ ಸುವರ್ಣಯುಗ. ಗಾಯನದ ಮೂಲಕ ಕನ್ನಡ ಭಾಷಾ ಪ್ರಚಾರ ಧರ್ಮ ಪ್ರಚಾರ ಮಾಡಿ ಸಮಾಜವನ್ನುದ್ಧರಿಸಲು ಕಂಕಣ ಕಟ್ಟಿ ನಿಂತವರು ಪುರಂದರದಾಸರು. ಅವರವರ ಆಶ್ರಮ ಧರ್ಮ ಪರಿಪಾಲನೆಯಲ್ಲಿ—ಶಾಸ್ತ್ರ ಗ್ರಂಥ ರಚನೆಯಲ್ಲಿ - ರಾಜ್ಯಕಾರ್ಯ ನಿರ್ವಹಣದಲ್ಲಿ - ಯಾವುದು ಮೇಲ್ಕಂಡ ಮುನಿತ್ರಯರಿಂದ ಸಾಧ್ಯವಾಗುತ್ತಿರಲಿಲ್ಲವೋ ಅದು, ಆ ಕಾರ್ಯಕ್ಕೇ ಜನ್ಮವನ್ನು ಧಾರೆಯೆರೆದ ಪುರಂದರದಾಸರಿಂದಾಯಿತು. ದಾಸರ ಸಂಗೀತ, ಸಾಹಿತ್ಯಗಳ ಮಾದರಿಗಳನ್ನು ಮುಂದಿನ ಅಧ್ಯಾಯಗಳಲ್ಲಿ ಕೊಟ್ಟಿರುವುದರಿಂದ ಅವುಗಳನ್ನು ಅಲ್ಲಿ ನೋಡಬಹುದು. ಪುರಂದರದಾಸರು ಕರ್ನಾಟಕ ಗಾಯನ

ಸಂಪ್ರದಾಯಕ್ಕೆ ಆಚಾರ್ಯ ಪುರುಷರಾದ ವಿವರವನ್ನು ಮುಂದಿನ ಪುಟ ಗಳಲ್ಲಿರುವ "ಹರಿದಾಸರು ಮತ್ತು ಗಾನ ಕಲೆ" ಎಂಬ ಅಧ್ಯಾಯದಲ್ಲಿ ನೋಡ ಬಹುದು.

## ಒಂದು ವೈಶಿಷ್ಟ್ಯ

ಹರಿದಾಸರೆಲ್ಲರೂ ಭಕ್ತಿಪಂಥಿಗಳಾದುದರಿಂದ ಅವರ ಉಪಾಸನೆಯು ಸಗುಣೋಪಾಸನೆ. ಉಪಾಸನೆಗೆ ತಕ್ಕಂತೆ ಅವರು ಪಡೆದ ಸಾಕ್ಷಾತ್ಕಾರ ಸಗುಣ ಸಾಕ್ಷಾತ್ಕಾರ. ಕರ್ಣಾಟಕದಲ್ಲಿ ಮಾತ್ರವಲ್ಲ, ಮಹಾರಾಷ್ಟ್ರದಲ್ಲಿ ಜನ್ಮತಾಳಿದ ಹರಿದಾಸರದೂ ಸಗುಣೋಪಾಸನೆ. ಉತ್ತರ ಭಾರತದ ತುಲಸೀದಾಸ ಕಬೀರದಾಸರು ಸಗುಣೋಪಾಸಕರು. ಪರಮಾತ್ಮನನ್ನು ಬಯಲೆಂದು ಯಾವ ದೇಶದ ಹರಿದಾಸರೂ ಭಾವಿಸಲಿಲ್ಲ. ಬಯಲೆಂಪರೆ (ಆಕಾಶಂ ಗಗನಂ ಶೂನ್ಯಂ) ಶೂನ್ಯವೆಂದರ್ಥವಾಗುವುದು. ಶೂನ್ಯವೆಂದರೆ ನಾಮ ರೂಪ ಗುಣ ಕ್ರಿಯೆಗಳೊಂದೂ ಇರದಿರುವುದು. ಇಂತಹದೊಂದು ಏನಾದರಿದ್ದರೆ ಅದನ್ನು ಭಾವನೆಗೆ ತೆಗೆದುಕೊಳ್ಳುವುದು ಹೇಗೆ? ಭಾವನೆಗೆ ನಿಲುಕದ ಶೂನ್ಯವು ಸಾಕ್ಷಾತ್ಕಾರವಾಯಿತೆಂಬ ಬಗೆ ಹೇಗೆ? ಅಕ್ಷಿಗೆ ಗೋಚರವಾಗುವುದು ಬೇಡ, ಮತ್ಯಾವ ಇಂದ್ರಿಯಗಳಿಗಾದರೂ ಯಾವ ರೀತಿಯಿಂದಾದರೂ ತಿಳಿಯಬೇಕಲ್ಲವೆ? ತಿಳಿವಳಿಕೆಗೆ ಸಿಗದ ಶೂನ್ಯವನ್ನು ಶಬ್ದದಿಂದ ವರ್ಣಿಸುವುದು ಹೇಗೆ? ಈ ಎಲ್ಲ ಪ್ರಶ್ನೆಗಳೂ ಅವರ ಮುಂದಿದ್ದುದರಿಂದ ಹರಿದಾಸರು ದೇವರನ್ನು ಬಯಲೆನ್ನುವ ಗೊಡವೆಗೆ ಹೋಗಲಿಲ್ಲ. ಪುರುಷ ಸೂಕ್ತವೂ ಸಕಲ ಪುರಾಣಗಳೂ ಪರಮಾತ್ಮನನ್ನು ಯಾವ ರೀತಿ ವರ್ಣಿಸಿದವೋ ಆ ರೀತಿಯಿಂದ ಅವರು ಭಗವದುಪಾಸನೆ ಮಾಡಿದರು. ಅರ್ಜುನನಂತೆ ದಿವ್ಯ ವಿಶ್ವರೂಪವನ್ನು ಕಂಡರು. ಕಂಡದ್ದನ್ನು ಭಾಷೆಯಿಂದ ವರ್ಣಿಸಿದರು. ಆ ವರ್ಣನೆಗಳು ಹೃದಯಂಗಮವಾಗಿವೆ. ಭಾಷೆಗೆ ಭೂಷಣಗಳಾಗಿವೆ. ಭಾವನೆಗೆ ವಿಷಯವಾಗದ, ಭಾಷೆಗೆ ಭೂಷಣ ವಾಗದ ಬಿಡಿನುಡಿಗಳು ಹರಿದಾಸ ಸಾಹಿತ್ಯದಲ್ಲಿಲ್ಲ.

ಈ ವಿಮರ್ಶಾತ್ಮಕ ಗ್ರಂಥದಲ್ಲಿರುವ ಸಂಗತಿಗಳೆಂದರೆ—ಹರಿದಾಸ ಸಾಹಿತ್ಯದ ಉಗಮ ಮತ್ತು ಕಾಲ, ಹರಿದಾಸರಿಗೂ ಗಾನಕಲೆಗೂ ಇರುವ

ಸಂಬಂಧ, ಒಂದೆಡೆಯಲ್ಲಿ ಕೊಟ್ಟಿರುವ ನೂರು ಉಗಾಭೋಗಗಳು, ಹರಿದಾಸರ ಜ್ಞಾನ ಭಕ್ತಿ ವೈರಾಗ್ಯಗಳು, ನವವಿಧ ಭಕ್ತಿಯಲ್ಲಿ, ನವರಸಗಳಲ್ಲಿ ಹಾಡಿರುವ ಮಾದರಿಗಳು, ವಿವಿಧ ವಿಷಯಗಳಲ್ಲಿ, ಪದ್ಯಗ್ರಂಥಗಳಲ್ಲಿ ಇರುವ ಕಾವ್ಯ ಚಾತುರ್ಯಗಳು, ಸಾಕ್ಷಾತ್ಕಾರದ ಅನುಭವಗಳು; ಇಷ್ಟು ವಿಷಯಗಳನ್ನೂ ಅವರವರ ಮಾತಿನಿಂದ ತಿಳಿಸಿರುವುದಲ್ಲದೆ ಲೇಖಕನ ಸ್ವಾತಂತ್ರ್ಯವೇನೂ ಇರುವುದಿಲ್ಲ. ಸಂಸ್ಕೃತ ಗ್ರಂಥಗಳಲ್ಲಿರುವ ಅಭಿಪ್ರಾಯಗಳನ್ನು ಸಂಸ್ಕೃತದಲ್ಲೇ ಓದಿದಾಗ ಕೇಳಿದಾಗ ಮನಸ್ಸಿನ ಮೇಲಾಗುವ ಪರಿಣಾಮಕ್ಕೂ ಅದೇ ಅಭಿಪ್ರಾಯಗಳನ್ನು ಹರಿದಾಸರ ತಾಯ್ನುಡಿಯಲ್ಲಿ ಓದಿದಾಗ ಮನಸ್ಸಿನ ಮೇಲಾಗುವ ಪರಿಣಾಮಕ್ಕೂ ಇರುವ ವ್ಯತ್ಯಾಸವನ್ನು ತಾಯ್ನುಡಿಯ ಸವಿಯರಿತಿರುವ ಸಹೃದಯರು ಹೇಳಬೇಕಲ್ಲದೆ ಗ್ರಂಥಕರ್ತನಿಗೆ ಅಧಿಕಾರವಿರುವುದಿಲ್ಲ. ಸಕ್ಕರೆ ಹೇಗಿದೆಯೆಂದರೆ ಸಿಹಿಯಾಗಿದೆಯೆಂದು ಮಾತ್ರ ಹೇಳಬಹುದು. ಸಿಹಿ ಹೇಗಿದೆಯೆಂದು ಮತ್ತೆ ಕೇಳಿದರೆ ತಿಂದುನೋಡು ಎನ್ನುವುದಕ್ಕಿಂತ ಮಾರುತ್ತರವಿಲ್ಲ.

---

# ಅಧ್ಯಾಯ ೨

## ಹರಿದಾಸರು ಮತ್ತು ಗಾನಕಲೆ

"ಓಂ"ಕಾರವು ಸಕಲ ವರ್ಣಾತ್ಮಕ ವೇದಶಾಸ್ತ್ರಗಳಿಗೆ ಮೂಲವಾಗಿರುವಂತೆ, ನಾದಾತ್ಮಕ ಸಂಗೀತ ಶಾಸ್ತ್ರಕ್ಕೂ ಮೂಲವಾಗಿರುವುದು. ಧ್ವನಿ ಮಾಡಬಲ್ಲ ಮಾನವಪ್ರಾಣಿಯ ನಾಭಿಯಿಂದ ಹೊರಟು ಕಂಠದಿಂದ ಕೇಳಿ ಬರುವ ಮೊಟ್ಟಮೊದಲ "ಂಂಂ" ನಾದವು "ಅಉಮ್" ಎಂಬ ವ್ಯಕ್ತಾವ್ಯಕ್ತ ಸ್ಥಿತಿಯಲ್ಲಿ ಕೇಳಿ "ಓಂ" ಎಂಬ ವ್ಯಕ್ತರೂಪವನ್ನು ತಾಳುವುದು. ಯಾವ ದೇಶಕಾಲಗಳಲ್ಲಿ ಯಾರ ಕಂಠದಿಂದ ಬಂದರೂ ಅದು "ಓಂ"ಕಾರವೇ ಆಗುವುದು. ಆದ್ದರಿಂದ ಎಲ್ಲಕ್ಕೂ ಮೂಲ "ಓಂ"ಕಾರವೆಂದು ಶಾಸ್ತ್ರಕಾರರು ನಿರ್ಣಯಿಸಿರುವರು. ಪ್ರಾಚೀನ ಗ್ರಂಥಗಳಲ್ಲಿ ನಾದದಿಂದ ವರ್ಣವೂ ವರ್ಣಗಳಿಂದ ಪದವೂ ಪದಗಳಿಂದ ವಾಕ್ಯವೂ ವಾಕ್ಯಗಳಿಂದ ವ್ಯವಹಾರವೂ ನಡೆಯುವ ಕಾರಣ, "ನಾದೇನ ವ್ಯಜ್ಯತೇ ವರ್ಣಃ ಪದಂ ವರ್ಣಾತ್ ಪದಾದ್ವಚಃ ॥ ವಚಸಾ ವ್ಯವಹಾರೋಽಯಂ ನಾದಾಧೀನಮತೋ ಜಗತ್ ॥" ಎಂದು ಹೇಳಿರುವರು. ಆದ್ದರಿಂದ ನಾದದ ಸ್ಥಾನವು ಬಲು ದೊಡ್ಡದು. ನಾದೋಪಾಸನೆಯೆಂಬುವುದು ಸಂಗೀತಕ್ಕೆ ಶಾಸ್ತ್ರ ಸಮ್ಮತವಾದ ಹೆಸರು. ಸ್ಮೃತಿಕರ್ತ ಯಾಜ್ಞವಲ್ಕ್ಯರು ನಾದೋಪಾಸನೆಯ ಮಹಿಮೆಯನ್ನು ಅನುಭವಿಸಿ—"ವೀಣಾವಾದನ ತತ್ವಜ್ಞಃ ಶೃತಿಜಾತಿ ವಿಶಾರದಃ ಕಾಲಜ್ಞಶ್ಚಾಪ್ರಯಾಸೇನ ಮೋಕ್ಷಮಾರ್ಗಂಚ ಗಚ್ಛತಿ ॥" ಎಂಬದಾಗಿ ಸ್ಪಷ್ಟಪಡಿಸಿರುವರು. ಅಂದಬಳಿಕ ನಾದೋಪಾಸನೆಯೆಂದರೆ ಬ್ರಹ್ಮೋಪಾಸನೆಯೆಂದೇ ವ್ಯಾಖ್ಯಾನವಾಗುವುದು. "ಓಂ"ಕಾರದ ನಾದ ಸಂಗೀತವಾದರೆ ವರ್ಣ ಸಾಹಿತ್ಯವೆನಿಸುವುದು. ವಾಕ್ಕಿನಿಂದ ಅರ್ಥ ಬೇರೆಯಿರದಂತೆ ಸಂಗೀತದಿಂದ ಸಾಹಿತ್ಯ ಬೇರೆಯಿರದು. ಸಂಗೀತದಲ್ಲಿ ಸಾಮಗಾನಕ್ಕೆ ವೈದಿಕಗಾನವೆಂತಲೂ, ರಾಮಾಯಣಾದಿ ಆರ್ಷ ಗ್ರಂಥಗಳನ್ನು ರಾಗವಾಗಿ ಪಾರಾಯಣ ಮಾಡುವುದಕ್ಕೆ ವ್ಯಾಖ್ಯಾಗಾನವೆಂತಲೂ, ಸಂಸ್ಕೃತ ಪ್ರಾಕೃತ

ಭಾಷೆಗಳಲ್ಲಿ ಕವಿತೆಮಾಡಿ ದೇವರನ್ನು ಕೊಂಡಾಡುವುದಕ್ಕೆ ಲೌಕಿಕಗಾನವೆಂತಲೂ, ದೇವತಾ ಸ್ತೋತ್ರವಲ್ಲದ ಗಾನಕ್ಕೆ ಕೇವಲ ಲೌಕಿಕಗಾನವೆಂತಲೂ, ಶಾಸ್ತ್ರಜ್ಞರು ಪ್ರಭೇದಗಳನ್ನು ಕಲ್ಪಿಸಿರುವರು.

ಯಜ್ಞಾದಿಗಳನ್ನು ಆಚರಿಸುವಾಗ ಉಚ್ಚಕಂಠದಿಂದ ಒಂದೇ ಸ್ವರದಲ್ಲಿ ಹೇಳುವ ಕೆಲವು ವೇದಮಂತ್ರಗಳಿವೆ. ಅರ್ಥವತ್ತಾದ ಸಾಹಿತ್ಯ ಪ್ರಭಾವದಿಂದ ಆ ಏಕಸ್ವರ ಗಾಯನವು ಉತ್ತಮೋತ್ತಮವಾಗಿ ಕೇಳಿಸುತ್ತದೆ. ಋಗ್ಯಜುಸ್ಸಾಮ ವೇದಗಳಲ್ಲಿ ಕ್ರಮವಾಗಿ ಉದಾತ್ತ, ಅನುದಾತ್ತ, ಸ್ವರಿತಗಳೆಂಬ ಮೂರು ಸ್ವರಗಳೂ, ಮತ್ತೆ ಉದಾತ್ತತರ, ಅನುದಾತ್ತತರಗಳೆಂಬೆರಡು ಸ್ವರಗಳೂ, ಅನಂತರ ಮಂದ್ರ, ಅತಿಸ್ವಾರಗಳೆಂಬ ಸ್ವರಗಳೂ ಸೇರಿ ಸಪ್ತಸ್ವರ ಗಾಯನವಾಗುತ್ತದೆ. ಸಂಪೂರ್ಣ ಸಪ್ತಸ್ವರ ಗಾಯನವಿರುವುದು ಸಾಮವೇದದಲ್ಲಿ ಮಾತ್ರ. ಆದ್ದರಿಂದ ಋಷಿಗಳು ಸಾಮವೇದದಿಂದ ಸಂಗೀತದ ಉಗಮವಾಯಿತೆಂದು ಸ್ಪಷ್ಟೀಕರಿಸಿರುತ್ತಾರೆ.

ಸಂಗೀತ ಇಷ್ಟು ಪ್ರಾಚೀನ ಶಾಸ್ತ್ರವಾದರೂ, ಈ ಶಾಸ್ತ್ರದ ಮೇಲೆ ಎರಡು ಸಾವಿರ ವರ್ಷಗಳಿಗಿಂತ ಪುರಾತನ ವಿಧಾಯಕ ಗ್ರಂಥ ಯಾವುದೂ ಉಪಲಬ್ಧವಾಗಿಲ್ಲ. ಕ್ರಿ. ಪೂ. ಒಂದನೇ ಶತಮಾನದಲ್ಲಿ ಜನ್ಮತಾಳಿದವನೆಂದು ತರ್ಕಸಿದ್ಧವಾಗಿರುವ ಭರತಮುನಿಯು, ನಾಟ್ಯಶಾಸ್ತ್ರದ ಮೇಲೆ ಮುವ್ವತ್ತೇಳು ಅಧ್ಯಾಯಗಳ ಗ್ರಂಥವೊಂದನ್ನು ಬರೆದಿರುತ್ತಾನೆ. ಇಷ್ಟು ದೊಡ್ಡ ಗ್ರಂಥದಲ್ಲಿ ಎರಡೇ ಎರಡು ಅಧ್ಯಾಯಗಳಲ್ಲಿ ಸಂಗೀತ ಶಾಸ್ತ್ರದಮೇಲೆ ಸೂತ್ರವತ್ತಾಗಿ ಕೆಲವು ನಿಬಂಧನೆಗಳನ್ನು ಮಾಡಿರುತ್ತಾನೆ. ಭರತಮುನಿಗಿಂತ ಮುಂಚೆ ಗಾಯನ ಪದ್ಧತಿ ಹೇಗಿತ್ತೆಂಬುದನ್ನು ತಿಳಿಯಲು ಸಾಧ್ಯವಿಲ್ಲ. ತನಗಿಂತ ಪೂರ್ವದಲ್ಲಿದ್ದ ಪದ್ಧತಿಯನ್ನು ಭರತನು ಅನುಸರಿಸಿದನೆಂದು ಅನೇಕರು ಅಭಿಪ್ರಾಯಪಡುತ್ತಾರೆ. ಸಂಪ್ರದಾಯ ಗ್ರಂಥಗಳಲ್ಲಿ—ಸದಾಶಿವ ಬ್ರಹ್ಮ ಆಂಜನೇಯ ರಾವಣ ಅರ್ಜುನ ನಾರದ ಮೊದಲಾದವರು ಲಕ್ಷ ಲಕ್ಷ ಗ್ರಂಥಗಳನ್ನು ಬರೆದಿರುವರೆಂದು ಹೇಳುತ್ತಾರೆ. ಆ ಹೇಳಿಕೆ ಕೇಳಿಕೆಯಲ್ಲಿ ಮಾತ್ರ ನಿಂತಿರುತ್ತದೆ. ಆದ್ದರಿಂದ ಭರತಮುನಿಯನ್ನು ಸಂಗೀತಕ್ಕೂ ನೃತ್ಯಕ್ಕೂ ಆದಿ ಆಚಾರ್ಯನೆಂದು ತೃಪ್ತಿ ಪಡಬೇಕಾಗುತ್ತದೆ. ಭರತನು ತನ್ನ ಗ್ರಂಥದಲ್ಲಿ

ಲೌಕಿಕ ಸಂಗೀತಕ್ಕಾಗಿ ಅನೇಕ ಪ್ರಮೇಯಗಳನ್ನು ಕಂಡುಹಿಡಿದು ತಕ್ಕ ಪರಿಭಾಷೆಗಳನ್ನು ಕಲ್ಪಿಸಿರುವುದು ಒಡೆದು ಕಾಣುತ್ತದೆ. ಭಾರತೀಯ ಸಂಗೀತದ ಬೆಳವಣಿಗೆ ಅವನ ಗ್ರಂಥದಿಂದಲೇ ಆಗಿರುತ್ತದೆ. ಮತ್ತೆ ಶಾಸ್ತ್ರ ಗ್ರಂಥಗಳನ್ನು ಬರೆದವರು ಭರತನ ಮತವನ್ನು ಆಧಾರವಾಗಿಟ್ಟುಕೊಂಡು ಬರೆದಿರುತ್ತಾರೆ. ಅರ್ಥಮಾಡಿಕೊಂಡ ವಿಷಯಗಳನ್ನು ತಮ್ಮ ರೀತಿಯಿಂದ ಬೆಳೆಸಿರುತ್ತಾರೆ. ಅರ್ಥವಾಗದೆ ಗಹನವಾಗಿರುವುದನ್ನು ದೇವಗಾನವೆಂದು ಕೈಬಿಟ್ಟಿರುತ್ತಾರೆ. ಒಟ್ಟಿನಲ್ಲಿ ಭರತ ಗಾಯನವು ವ್ಯಾಸರ ಬ್ರಹ್ಮಸೂತ್ರ ದಂತಿದೆ. ಒಬ್ಬೊಬ್ಬರೂ ತಮ್ಮ ತಮ್ಮ ಮತವನ್ನು ಸ್ಥಾಪಿಸಿದ್ದಾರೆ. ಪರ್ಯವಸಾನದಲ್ಲಿ ಅದು ಎರಡು ದೊಡ್ಡ ಪ್ರಭೇದವಾಗಿ ನಿಂತಿದೆ. ಆ ಎರಡರಲ್ಲಿ ಒಬ್ಬೊಬ್ಬರೂ ತಮ್ಮದೇ ಶಾಸ್ತ್ರೀಯವೆಂದು ಪ್ರತಿಪಾದಿಸುತ್ತಾರೆ.

ಭರತನಿಂದ ಎಷ್ಟೋ ಕಾಲಕ್ಕೆ ಮುಂಚೆ ಆರ್ಯ ದ್ರಾವಿಡ ಸಂಸ್ಕೃತಿಗಳು ಬೆರೆತು ಸಮರಸವಾಗಿದ್ದವು. ಒಂದು ಸಂಸ್ಕೃತಿಗಿಂತ ಮತ್ತೊಂದು ಹೀನ ವೆಂಬ ಭಾವನೆ ಉಳಿದಿರಲಿಲ್ಲ. ಶ್ರೀರಾಮ ಯುಧಿಷ್ಠಿರಾದಿ ಸಾರ್ವಭೌಮರ ಪ್ರಭಾವದಿಂದ ಭಾರತವು ಏಕರಾಷ್ಟ್ರವಾಗಿತ್ತು. ಭರತನು ಆಸೇತು ಹಿಮಾಚಲದವರೆಗೆ ಸಂಚರಿಸಿ ಜನರ ಪ್ರವೃತ್ತಿ ಹೇಗಿತ್ತೆಂಬುದನ್ನು ಅಭ್ಯಾಸ ಮಾಡಿದ್ದನು. ಆ ಪ್ರವೃತ್ತಿಗಳನ್ನು ಭಾರತೀ, ಸಾತ್ವತೀ, ಆರಭಟೀ, ಕೈಶಿಕೀ ಎಂದು ಕರೆದಿದ್ದನು. ಪ್ರವೃತ್ತಿ ಪರಿಭಾಷೆಗಳನ್ನು ಮತ್ತೆ ದೇಶ ಪರಿಭಾಷೆಯಾಗಿರಬೇಕೆಂದು ಅವಂತೀ, ಅರ್ಧಮಾಗಧೀ, ಪಾಂಚಾಲಮಧ್ಯಾ, ದಾಕ್ಷಿಣಾತ್ಯಾ ಎಂದು ಕರೆದನು. ದಾಕ್ಷಿಣಾತ್ಯರ ವಿಷಯದಲ್ಲಿ—"ತತ್ರ ದಾಕ್ಷಿಣಾತ್ಯಾ ಬಹುಗೀತ ನೃತ್ಯ ವಾದ್ಯಾಃ ಕೈಶಿಕೀಪ್ರಾಯಾಃ ಚತುರ ಮಧುರ ಲಲಿತಾಂಗಾಭಿನಯಾಃ" ಎಂದು ಉಲ್ಲೇಖಿಸಿ ಟಿಪ್ಪಣಿ ಮಾಡಿದ್ದನು. ಅನಂತರ ತನ್ನ ದೇಶಪರ್ಯಟನದ ಅನುಭವಕ್ಕೆ ಅನುಸಾರವಾಗಿ ಶಾಸ್ತ್ರ ಗ್ರಂಥವನ್ನು ಬರೆದನು. ಭರತನ ದಾಕ್ಷಿಣಾತ್ಯರೆಂದರೆ ಕರ್ಣಾಟಕ, ಆಂಧ್ರ, ಅರವ, ಮಲೆಯಾಳ, ತುಳು ದೇಶಗಳ ಜನರು.

ಯಾವ ದೇಶದಲ್ಲಾಗಲಿ ಮೊದಲು ಹುಟ್ಟುವುದು ಭಾಷೆ. ಭಾಷೆ ಬೆಳೆದು ಬಳಕೆಗೆ ಬಂದಮೇಲೆ, ಬೆಳೆದ ಬೆಳವಣಿಗೆ ಸ್ವಚ್ಛಂದವಾಗದಂತೆ ತಡೆ

ಗಟ್ಟಿದ್ದು ವ್ಯಾಕರಣ. ಅಂತೆಯೇ ದಾಕ್ಷಿಣಾತ್ಯರಲ್ಲಿ ಹುಟ್ಟಿ ಬೆಳೆದದ್ದು ಗಾನ ಮತ್ತು ನರ್ತನ. ಅಸಹ್ಯವಾಗದಂತೆ ಅಶ್ಲೀಲವಾಗದಂತೆ ನಿಯಮಬದ್ಧ ಮಾಡಿದವನು ಭರತ ಮುನೀಶ್ವರ. ಇಷ್ಟು ದೊಡ್ಡ ಅನುಭವಿಯಾದುದರಿಂದ ಭರತನು ನಿಖಿಲ ಭಾರತಕ್ಕೂ ಆಚಾರ್ಯಪುರುಷನಾದನು. ಅಸಂಸ್ಕಾರಿಗಳ ಬಯಲಾಟದಲ್ಲಾಗಲಿ, ಸಂಸ್ಕಾರಿಗಳ ನಾಟಕಗಳಲ್ಲಾಗಲಿ, ನಟಗಾಯಕರು ಗಳಿಗೆ ಭರತರೆಂದು ಹೆಸರು ಬರುವಷ್ಟು ಜನಾನುರಾಗವನ್ನು ಭರತನ ನಾಟ್ಯ ಶಾಸ್ತ್ರವು ಪಡೆಯಿತು. ಅವರ ವಾಕ್ಯಕ್ಕೆ ಭರತ ವಾಕ್ಯವೆಂದು ಹೆಸರಾಯಿತು. ಮಹಾಕವಿ ಕಾಳಿದಾಸನು—"ಮುನಿನಾ ಭರತೇನ ಯಃಪ್ರಯೋಗೋ ಭವತೀಷ್ವಷ್ಟ ರಸಾಶ್ರಯೋ ನಿಯುಕ್ತಃ || ಲಲಿತಾಭಿನಯಂ ತಮದ್ಯಭರ್ತಾ ಮರುತಾಂ ಶ್ರೋತು ಮನಾಃ ಸಲೋಕಪಾಲಃ" ಎಂಬದಾಗಿ ತನ್ನ ವಿಕ್ರಮೋರ್ವಶೀಯದಲ್ಲಿ ಉಲ್ಲೇಖಿಸಿದನು. ಭರತನಿಂದ ವೈದಿಕ ಸಮಾಜಕ್ಕೆ ಮೀಸಲಾಗಿದ್ದ ಗಾಯನವು ಸಾರ್ವಜನಿಕವಾಯಿತು. ಸೂತ್ರವತ್ತಾಗಿ ಹಾಕಿಕೊಟ್ಟ ಗಾನಪದ್ಧತಿ ವಿಸ್ತಾರವಾಗಿ ಬೆಳೆಯಿತು. ಭರತನ ಸಂಪ್ರದಾಯ ದಲ್ಲಿ ಮುಖ್ಯವೂ ಪ್ರೌಢವೂ ಆದದ್ದು ಧ್ರುವಪದ ಗಾನ. ಅಂದರೆ ಜಾತಿ ವಿನ್ಯಾಸಮಾಡಿ ಧ್ರುವಪದವನ್ನು ಹಾಡುವುದು. ಅಂದರೆ ರಾಗಾಲಾಪನೆ ಮಾಡಿ ಪಲ್ಲವಿಯನ್ನು ಹಾಡುವುದು. ಈ ಗಾನದಲ್ಲಿ ವಾದ್ಯಗಳಿರಬಹುದು, ನರ್ತನವಿರಬಹುದು. ಭರತನದು ನಾಟ್ಯಶಾಸ್ತ್ರವಾದ ಕಾರಣ ನಾಟ್ಯ, ನಾಟ್ಯಕ್ಕೆ ತಕ್ಕ ಗಾಯನ, ಗಾಯನಕ್ಕೆ ತಕ್ಕ ವಾದನ. ಇದೇ ಭರತನ ನಾಟ್ಯಶಾಸ್ತ್ರ ಸರ್ವಸ್ವ.

ದಿನದಿನಕ್ಕೆ ನಿಖಿಲ ಭಾರತದಲ್ಲೂ ಬೆಳೆದ ಭರತಗಾನ ಪದ್ಧತಿಯಲ್ಲಿ ಸರ್ವ ಸಾಧ್ಯವಲ್ಲದ ಧ್ರುವಪದದ ಕ್ಲಿಷ್ಟತೆ ಕಡಮೆಯಾಗುತ್ತ ಬಂತು. ಲಯ ತಾಳಗಳ ನಿಬದ್ಧತೆ ಸಡಿಲವಾಯಿತು. ವಿವಿಧ ಜಾತಿಗಳಲ್ಲಿ ವಿವಿಧ ಮಟ್ಟು ಗಳನ್ನು ಸರಳವಾಗಿ ಹಾಡುವ ಸರಣಿ ಹುಟ್ಟಿತು. ಈ ಗಾಯನ ತತ್ಕಾಲದಲ್ಲಿ ಸ್ಥಾಯಿಾ ಎಂದು ಕರೆಸಿಕೊಂಡಿತು. ಮುಂದೆ ಶಾರ್ಙದೇವನ ಕಾಲದಲ್ಲಿ "ಉಗಾಭೋಗ"ವೆಂಬ ಹೆಸರನ್ನು ಪಡೆಯಿತು. ಒಂಭತ್ತನೆ ಶತಮಾನದಲ್ಲಿ ಸ್ಥಾಯಿಾ ಪದ್ಧತಿಗೆ ಭಾಷೆಯನ್ನು ಹುದುಗಿಸಿ ಹಾಡಿದ ಮೊದಲ ಕೀರ್ತ

ಕನ್ನಡ ಭಾಷೆಗೆ ಬಂದಿತು. ಹರಿದಾಸರಲ್ಲಿ ಮೊದಲಿಗರೆನಿಸಿದ ಅಚಲಾನಂದರ ಹೆಸರು ಮುಂದೆ ಬಂದಿತು.

ಸಂಗೀತಕ್ಕೆ ಅನುಕೂಲವಾಗುವಂತೆ ಭಾಷೆಯನ್ನು ಹೊಂದಿಸುವುದು ಸಂಪೂರ್ಣ ಭಾಷಾಜ್ಞಾನವಿದ್ದವರಿಗೆ ಮಾತ್ರ ಸಾಧ್ಯ. ಸಂಗೀತದ ಭಾಷೆ ಸಾಮವೇದದ ಭಾಷೆಯಂತಿರಬೇಕು. ಛಂದಸ್ಸು ಅಲಂಕಾರ ವಿಶೇಷಾರ್ಥ ಅರ್ಥೋಚ್ಚಾರ ಶಿಥಿಲೋಚ್ಚಾರಗಳ್ಯಾವುದಕ್ಕೂ ಒಳಪಟ್ಟ ಕ್ಲಿಷ್ಟಭಾಷೆ ಯಾಗಿರಬಾರದು. ಸಾಕಷ್ಟು ವ್ಯಾಕರಣ ನಿಯಮಕ್ಕೊಳಪಟ್ಟ ಸರಳ ಭಾಷೆ ಯಾಗಿರಬೇಕು. ಅಂತಹ ಸಂಗೀತ ಭಾಷೆಯನ್ನು ಕನ್ನಡದಲ್ಲಿ ಕಂಡು ಹಿಡಿದವರು ಅಚಲಾನಂದರು. ಅವರು – ಸಮಗ್ರ ಭರತಖಂಡವನ್ನು ಸಂಚರಿಸಿದವರು; ಶಾಸ್ತ್ರವಿದ್ಯಾಪಾರಂಗತರು; ಗಾನವಿದ್ಯಾ ಕುಶಲರು; ಅತಿಮಾನುಷ ಮಹಿಮೆ ತೋರಿ ನೇಪಾಳದ ರಾಜನಿಂದ ಸನ್ಮಾನಿತರಾದವರು; ಧರ್ಮಪ್ರಚಾರಕ್ಕಾಗಿ ಕರ್ಣಾಟಕದಲ್ಲಿ ಆರು ಕೀರ್ತನ ಪೀಠಗಳನ್ನು ಸ್ಥಾಪಿಸಿದವರು. ಅಚಲಾನಂದರು ತಾವಿದ್ದ ಕಾಲವನ್ನೂ ತಮಗೆ ಸಾಕ್ಷಾತ್ಕಾರವಾದ ದಿನವನ್ನೂ ತಿಳಿಸುವ "ಕಾಶೀತಿ ಸಂಖ್ಯಾ ಶಕ ಕಾಲಕೇಬ್ದೇ ವಿಳಂಬಿ ವರ್ಷೇ ಕಲಿ ಚೈತ್ರ ಶುಕ್ಲೇ || ಪಕ್ಷೇದಶಮ್ಯಾಂ ದಿನಮಧ್ಯಕಾಲೇ ಪ್ರತ್ಯಕ್ಷಕೋ ಭೂತ್ ಗುರು ವಿಠಲಾಖ್ಯಃ" ಎಂಬ ಶ್ಲೋಕದಲ್ಲಿ ಶಾಲೀವಾಹನ ಶಕ ೮೦೧ ಎಂದು ತಿಳಿಸಿರುವ ಕಾರಣ ಸಂಶಯಕ್ಕೆ ದಾರಿಯಿರುವುದಿಲ್ಲ. ಇವರ ಹಾಡುಗಳು ೨೫ಕ್ಕಿಂತ ಹೆಚ್ಚಾಗಿ ದೊರೆಯುವುದಿಲ್ಲ. ಇವರ ಹಾಡುಗಳ ಭಾಷೆ ತಿಳಿಗನ್ನಡದ ಸಂಗೀತ ಶೈಲಿಯಲ್ಲಿದೆ. ಇವರ ಪರಂಪರೆಯವರು ಕರ್ಣಾಟಕದಲ್ಲಿ ಸಂಗೀತವನ್ನು ಬೆಳೆಸಿದರು. ಇವರ ಸರಣಿಯನ್ನು ನರಹರಿ ತೀರ್ಥರು ಸ್ವೀಕರಿಸಿದರು. ನರಹರಿತೀರ್ಥರ ಸಮಕಾಲಿಕ ಜಯದೇವ ಕವಿಯು ಬಂಗಾಳ ಬಿಹಾರ ಪ್ರಾಂತ್ಯಗಳಲ್ಲಿದ್ದು ಇದೇ ಸಂಪ್ರದಾಯವನ್ನು ಅವಲಂಬಿಸಿಯೋ ಎಂಬಂತೆ, ಗೀತಗೋವಿಂದವೆಂಬ ದಿವ್ಯಕಾವ್ಯವನ್ನು ರಚಿಸಿ, ಪ್ರತಿ ಗೀತೆಗೂ ರಾಗ ತಾಳಗಳನ್ನು ಗೊತ್ತುಪಡಿಸಿದನು.

## ಶಾರ್ಙದೇವ

ಭರತಮುನಿಯ ನಂತರ ಸಂಗೀತ ಶಾಸ್ತ್ರದಮೇಲೆ ಪ್ರಸಿದ್ಧ ಗ್ರಂಥ ರಚನೆಮಾಡಿದವನು ಶಾರ್ಙದೇವ. ಈತನದು ಕಾಶ್ಮೀರದೇಶ. ದೇವಗಿರಿ

ಯನ್ನು ಆಳಿದ ಸಿಂಹಣರಾಜನ (೧೨೧೦-೪೭) ಆಶ್ರಯದಲ್ಲಿದ್ದವನು. ವೇದಾಂತದಲ್ಲಿ ಅಧ್ಯಾತ್ಮ ವಿವೇಕವನ್ನೂ ಸಂಗೀತದಲ್ಲಿ ಸಂಗೀತ ರತ್ನಾಕರವನ್ನೂ ಇವನು ಬರೆದನು. ಸಂಗೀತ ರತ್ನಾಕರದಲ್ಲಿ - ಸ್ವರಾಧ್ಯಾಯ, ವಿವೇಕಾಧ್ಯಾಯ, ಪ್ರಕೀರ್ಣಾಧ್ಯಾಯ, ಪ್ರಬಂಧಾಧ್ಯಾಯ, ತಾಳಾಧ್ಯಾಯ, ವಾದ್ಯಾಧ್ಯಾಯ, ನೃತ್ಯಾಧ್ಯಾಯಗಳೆಂಬ ಏಳು ಭಾಗಗಳಿವೆ. ಭರತನು ನಾಟ್ಯಶಾಸ್ತ್ರವನ್ನು ವಿಸ್ತರಿಸಿ ಬರೆದಂತೆ ಶಾರ್ಙದೇವನು ಸಂಗೀತ ಶಾಸ್ತ್ರವನ್ನು ವಿಸ್ತರಿಸಿ ಬರೆದಿರುವನು. ಈ ಗ್ರಂಥಕ್ಕೆ ಏಳು ವ್ಯಾಖ್ಯಾನಗಳಿವೆ. ಅವುಗಳಲ್ಲಿ ಕಲ್ಲಿನಾಥನ ವ್ಯಾಖ್ಯಾನ ಪ್ರಸಿದ್ಧವಾದದ್ದು.

ಶಾರ್ಙದೇವನು ನಿಬಂಧನೆಯಿಲ್ಲದೆ ಬೆಳೆಯುತ್ತಿದ್ದ ಸ್ಥಾಯಿಗಾನ ಪದ್ಧತಿಯನ್ನು ಕ್ರಮಪಡಿಸಿದನು. ಸ್ಥಾಯಿಯಲ್ಲಿ ಐದು ಬಗೆಯ ಧಾತುಗಳಿರಬೇಕೆಂದು ನಿಬಂಧನೆ ಮಾಡಿದನು. ಈ ನಿಬಂಧನೆಯಲ್ಲಿ ಎರಡಕ್ಕಿಂತ ಕಡಮೆ ಧಾತುಗಳಿದ್ದರೆ ಸಂಗೀತ ಪ್ರಬಂಧವಾಗುವದಿಲ್ಲವೆಂದು ನಿಷೇಧಿಸಿದನು. ಅಂತಹ ಪ್ರಬಂಧಗಳೇನಿದ್ದರೂ ಅವು ಬಿಡಿ ವಚನಗಳೆನಿಸುವವು. ಹೀಗೆ ಕಟ್ಟುಗೊಳಗಾದ ಪ್ರಬಂಧವು ಉಗಾಭೋಗವೆನಿಸಿತು. ಉತ್ತರ ಭಾರತದಲ್ಲಿ ಸ್ಥಾಯಿೀ, ಠಾಯೀ, ಆಸ್ತಾಯೀ ಎಂದು ಕರೆಸಿಕೊಳ್ಳುವ ಪ್ರಬಂಧವು ಕನ್ನಡ ಹರಿದಾಸ ಸಾಹಿತ್ಯದ ಮೊದಲ ಪ್ರಬಂಧವಾಯಿತು- ಉದ್ಗ್ರಾಹ, ಮೇಲಾಪಕ, ಧ್ರುವ, ಅಂತರಾ, ಆಭೋಗವೆಂಬವುಗಳು ಉಗಾಭೋಗದ ಐದು ಧಾತುಗಳು. ಒಂದು ರಾಗವನ್ನು ಗ್ರಹಿಸಿ ಮೇಳದಲ್ಲಿ ನಿಲ್ಲಿಸಿ ರಾಗವನ್ನು ಧ್ರುವಗೊಳಿಸಿ ಸಮೀಪ ರಾಗಗಳ ಸೂಕ್ಷ್ಮ ಸ್ಥಾನಗಳಲ್ಲಿ ವಿನ್ಯಾಸ ಮಾಡಿ ರಾಗ ಸಮಾರೋಪಣ ಮಾಡುವುದು ಧಾತುಗಳ ತಾತ್ಪರ್ಯ. ಈ ಅಭಿಪ್ರಾಯವನ್ನು ಶಾರ್ಙದೇವನು—

ಉದ್ಗ್ರಾಹಃ ಪ್ರಥಮೋ ಭಾಗಃ ತತೋ ಮೇಳಾಪಕಃ ಸ್ಮೃತಃ
ಧ್ರುವತ್ವಾಚ್ಚ ಧ್ರುವಃ ಪಶ್ಚಾದಾಭೋಗಸ್ತ್ವಂತಿಮೋ ಮತಃ
ಧ್ರುವಾ ಭೋಗಾಂತರೇ ಜಾತಃ ಧಾತುರನ್ಯೋಽಂತರಾಭಿದಃ

ಎಂಬ ಶ್ಲೋಕರೂಪದಿಂದ ತಿಳಿಸಿರುವನು. ಇಷ್ಟನ್ನೂ ಮೂಕ ರಾಗದಲ್ಲಿ ವಿನ್ಯಾಸಮಾಡದೆ ಲಲಿತ ಸಾಹಿತ್ಯ ಸಹಿತವಾಗಿ ಪೂರ್ಣ ಮಾಡಿದರೆ ಅದು

ಉಗಾಭೋಗವೆನಿಸುವುದು. ಉಗಾಭೋಗವನ್ನು ಸಾಮಾನ್ಯವಾಗಿ ಸರ್ವ ಲಘು ಗತಿಯಲ್ಲಿ ಹಾಡಬಹುದು. ಹೀಗೆ ಹಾಡಿ ಧರ್ಮಪ್ರಚಾರ ಮಾಡಿದವರು ಅಚಲಾನಂದರಾದಿಯಾದ ಹರಿದಾಸರು. ಈ ಮೂರು ಶತಮಾನಗಳ ಅವಧಿಯಲ್ಲಿ ಗೀತಗೋವಿಂದದ ವಿನಾ ಸಂಸ್ಕೃತದಲ್ಲಾಗಲಿ, ಕನ್ನಡದಲ್ಲಿ ವಿನಾ ಅನ್ಯಭಾಷೆಗಳಲ್ಲಾಗಲಿ ಸಂಗೀತಕ್ಕೆ ಹೊಂದಿಕೆಯಾಗುವ ಸಾಹಿತ್ಯ ರಚನೆ ಯಾಗಿರಲಿಲ್ಲ.

ಶಾರ್ಙದೇವನು ತನ್ನ ಕಾಲದವರೆಗೆ ೨೬೪ ರಾಗಗಳು ಪ್ರಸಿದ್ಧ ವಾಗಿದ್ದರೂ ಅವುಗಳಲ್ಲಿ ೫೨ ದೇಶೀ ರಾಗಗಳು ಮಾತ್ರ ಗಾನಾರ್ಹಗಳೆಂದು ನಿರ್ಣಯಿಸಿದನು. ರಾಗಗಳಲ್ಲಿ ಸಪ್ತಸ್ವರಗಳು ಪೂರ್ತಿಯಾಗಿದ್ದರೆ ಸಂಪೂರ್ಣ ರಾಗವೆಂದೂ ಆರು ಐದು ಸ್ವರಗಳಿದ್ದರೆ ಷಾಡವ ಔಡವ ರಾಗಗಳೆಂದೂ ಭರತನ ಮತವನ್ನೇ ಪೋಷಿಸಿ ೫ ಕ್ಕಿಂತ ಕಮ್ಮಿ ೪, ೩ ಸ್ವರಗಳಿಂದ ನಿರ್ಮಿಸ ಬಹುದಾದ ರಾಗಗಳನ್ನು ನಿಷೇಧಿಸಿದನು. ವೇದದಲ್ಲಿ ಏಕಸ್ವರ ಗಾನಕ್ಕೆ ಆರ್ಚಿಕವೆಂದೂ, ದ್ವಿಸ್ವರ ಗಾನಕ್ಕೆ ಗಾಥಿಕವೆಂದೂ, ತ್ರಿಸ್ವರ ಗಾನಕ್ಕೆ ಸಾಮಿಕವೆಂದೂ, ಚತುಃಸ್ವರ ಗಾನಕ್ಕೆ ಸ್ವರಾಂತರವೆಂದೂ ಹೆಸರುಗಳಿವೆ. ಅವು ಪೂಜ್ಯ ವೇದಗಳಿಗೆ ಮಾತ್ರ ಭೂಷಣವಲ್ಲದೆ ಸಂಗೀತಕ್ಕೆ ಯೋಗ್ಯ ಗಳಲ್ಲವೆಂಬುದು ಶಾರ್ಙದೇವನ ಮತ. ತಾಳ ಶಾಸ್ತ್ರದಲ್ಲಿ ಶಾರ್ಙದೇವನು ಕಂಡುಹಿಡಿದ ತಾಳಗಳು ಪ್ರಚಾರಕ್ಕೆ ಬರದೆ ಕಾಲಾಂತರದಲ್ಲಿ ಶ್ರೀಪಾದರಾಯ ರಿಂದ ಆಚರಣೆಗೆ ಬಂದ ಸುಳಾದಿಗಳ ಸಪ್ತತಾಳಗಳಲ್ಲಿ ಅಂತರ್ಭೂತವಾಗಿವೆ.

## ಗೋಪಾಲನಾಯಕ

ಕ್ರಿ. ಶ. ಹದಿಮೂರರ ಉತ್ತರಾರ್ಧದಲ್ಲಿ ಹಾಗು ಹದಿನಾಲ್ಕರ ಪೂರ್ವಾರ್ಧದಲ್ಲಿದ್ದವನು ಗೋಪಾಲನಾಯಕನೆಂಬ ವಾಗ್ಗೇಯಕಾರನು. ಈತನು ಶಾರ್ಙದೇವನ ಸಂಪ್ರದಾಯವನ್ನು ಪೋಷಿಸಿ ಹಿಂದುಸ್ಥಾನೀ ಗಾಯನಕ್ಕೆ ಆಚಾರ್ಯ ಪುರುಷನಾದನು. ಇವನ ಕಾಲದಲ್ಲಿ ದೇವಗಿರಿಯಲ್ಲಿ ಯಾದವರೂ ದ್ವಾರಸಮುದ್ರದಲ್ಲಿ ಹೊಯ್ಸಳರೂ ಸಾಮ್ರಾಜ್ಯವಾಳುತ್ತಿದ್ದರು. ಕನ್ನಡ ಸಂತತಿಯವರಾಗಿದ್ದ ಈ ಉಭಯರಲ್ಲಿ ಸಾಮರಸ್ಯವಿರಲಿಲ್ಲ. ಇದೇ ಕಾಲದಲ್ಲಿ ದೆಹಲಿಯಲ್ಲಿ ಖಿಲ್ಜಿ ಸಂತತಿಯ ಅಲ್ಲಾವುದೀನನು ಉತ್ತರ

ಭಾರತದ ಸುಲ್ತಾನನಾಗಿದ್ದನು. ಖಿಲ್ಜಿಯು ದಕ್ಷಿಣ ಭಾರತವನ್ನು ಜೈಸ ಬೇಕೆಂದು ದೇವಗಿರಿಯಮೇಲೆ ಮಲ್ಲಿಕ್ ಕಾಫರನೆಂಬ ದಂಡನಾಯಕನನ್ನು ಕಳುಹಿಸಿದನು. ಯಾದವ ವಂಶದ ರಾಮಚಂದ್ರದೇವನಿಗೂ ಮಲ್ಲಿಕನಿಗೂ ಘೋರ ಯುದ್ಧವಾಯಿತು. ಮಲ್ಲಿಕನು ಜಯಶೀಲನಾದನು. ರಾಮಚಂದ್ರನು ಹೇರಳವಾಗಿ ಕಪ್ಪಕೊಟ್ಟು ೧೩೦೭ರಲ್ಲಿ ಖಿಲ್ಜಿಯೊಡನೆ ಸ್ನೇಹ ಬೆಳೆಸಿದನು. ಸಂಧಿಕಾಲದಲ್ಲಿ ರಾಮಚಂದ್ರನ ಆಸ್ಥಾನ ಪಂಡಿತನಾಗಿದ್ದ ಗೋಪಾಲ ನಾಯಕನ ಗಾನಕೇಳಿ ಮಲ್ಲಿಕನು ಅವನನ್ನು ತನ್ನೊಡನೆ ದೆಹಲಿಗೆ ಕರೆದು ಕೊಂಡು ಹೋದನು. ಸಂಗೀತವನ್ನು 'ಹರಾಂ' ಎನ್ನುತ್ತಿದ್ದ ಅಲ್ಲಾವುದೀನನು ನಾಯಕನ ಗಾನಕ್ಕೆ ಮೆಚ್ಚಿ ತನ್ನಲ್ಲಿ ಆಶ್ರಯಕೊಟ್ಟನು. ಮುಸಲ್ಮಾನ ರಾಜರ ಪ್ರೀತ್ಯರ್ಥವಾಗಿ ನಾಯಕನು ಹಿಂದುಸ್ತಾನಿಯಲ್ಲಿ ಕವಿತೆಮಾಡಿ ಹಾಡ ಲಾರಂಭಿಸಿದನು. ನಾಯಕನು ಶಾರ್ಙದೇವನ ಉಗಾಭೋಗ ಪದ್ಧತಿಯ ಎರಡು ಧಾತುಗಳನ್ನು ಆರಿಸಿಕೊಂಡು ಮಾಡಿದ ಕವಿತೆಗಳು ಲೋಕಪ್ರಿಯ ವಾದವು. ಉಗಾಭೋಗದಂತೆ ವಿವಿಧ ಮಟ್ಟುಗಳಲ್ಲಿ ರಚಿಸಿದ ಇವನ ಪ್ರಬಂಧಗಳು ಉತ್ತರ ಭಾರತದಲ್ಲಿ ವ್ಯಾಪಿಸಿದವು. ಕಾಲಕ್ರಮದಲ್ಲಿ ಇವನ ಪದ್ಧತಿಯನ್ನನುಸರಿಸಿ ಹಾಡಿದ ಬೇಜು ಬಾವರೆ, ತಾನಸೇನ, ರಾಮದಾಸ, ಸೂರದಾಸ, ಆದಾರಂಗ ಮೊದಲಾದವರು ಹಿಂದುಸ್ತಾನಿ ಗಾಯನಕ್ಕೆ ಆಚಾರ್ಯ ಪುರುಷರಾದರು. ಹೀಗೆ ಗೋಪಾಲನಾಯಕನಿಂದ ಪ್ರಾರಂಭ ವಾಗಿ ಬೆಳೆದ ಹಿಂದುಸ್ತಾನಿ ಭಾಷಾ ಗಾನವು ಹಿಂದುಸ್ತಾನಿ ಸಂಗೀತವೆನಿಸಿತು. ಅಚಲಾನಂದರ ಪರಂಪರೆಯಲ್ಲಿ ಬೆಳೆದು ವರಹರಿತೀರ್ಥ ಶ್ರೀಪಾದರಾಜರು ಗಳಿಂದ ವಿಕಾಸಗೊಂಡ ಕನ್ನಡ ಭಾಷೆಯ ಗಾನವು ಕರ್ಣಾಟಕ ಸಂಗೀತ ವೆನಿಸಿತು. ಈ ಹೆಸರುಗಳು ಭಾಷಾ ಭೇದದಿಂದ ಬಂದವಲ್ಲದೆ ಸಂಪ್ರದಾಯ ಭೇದದಿಂದ ಬಂದವುಗಳಲ್ಲ. ೧೪೩೩ ರಿಂದ ೪೬ರ ಮಧ್ಯಕಾಲದಲ್ಲಿ ಶಾರ್ಙ ದೇವನ ಸಂಗೀತರತ್ನಾಕರಕ್ಕೆ ವ್ಯಾಖ್ಯಾನ ಮಾಡಿದ ಕಲ್ಲಿನಾಥನೆಂಬ ವಾಗ್ಗೇಯಕಾರನು. "ಯೋಕ್ತಾಸ್ಮಾಭಿಃ ಕಲಾಸಂಖ್ಯಾಸಾದಕ್ಷಿಣಪಥಿಸ್ಥಿತಾ" ಎಂಬ ಶ್ಲೋಕದ ಅಸ್ಮಾಭಿಃ ಎಂಬ ಪದಕ್ಕೆ ಭರತ ಮತಾನುಸಾರಭಿಃ ಎಂದೇ ವ್ಯಾಖ್ಯಾನ ಮಾಡಿರುವುದರಿಂದ ೧೪೫೦ರವರೆಗೆ ದಕ್ಷಿಣೋತ್ತರ ಭಾರತಗಳಲ್ಲಿ ಭರತ ಮತವೇ ಆಚರಣೆಯಲ್ಲಿತ್ತೆಂದೂ ಸಂಪ್ರದಾಯ ಭೇದವಾಗಲಿಲ್ಲವೆಂದೂ

ಗೋಚರವಾಗುತ್ತದೆ. ಕಲ್ಲಿನಾಥನಾದರೋ—ವಿಜಯನಗರ ಸಾಮ್ರಾಜ್ಯದಲ್ಲಿ ಇಮ್ಮಡಿ ದೇವರಾಜರ ಆಶ್ರಯದಲ್ಲಿದ್ದು ಪ್ರಖ್ಯಾತಿಪಡೆದವನು. ತನಗೆ ಆಶ್ರಯದಾತನಾದ ಧೊರೆಯನ್ನು—"ಸಂಗೀತ ಸಾಹಿತ್ಯ ಕಲಾಸ್ವಭಿಜ್ಞಃ ಪ್ರತಾಪವಾನಿಮ್ಮಡಿ ದೇವರಾಜಃ" ಎಂದು ಮೊದಲಾಗಿ ನಿಪುಣತರವಾಗಿ ಬಣ್ಣಿಸಿದ ಮಹಾಕವಿಯು. ಈ ವಾಗ್ಗೇಯಕಾರನನ್ನು ಇತಿಹಾಸ ಬಲ್ಲವರು ಕನ್ನಡಿಗನೆಂದೇ ನಿಶ್ಚಯಿಸಿದ್ದಾರೆ.

ಸಾರಾಂಶ :—ಭರತನ ಕಾಲಕ್ಕೆ ಮುಂಚೆ ಎಷ್ಟೋ ಕಾಲದಿಂದ ದಾಕ್ಷಿಣಾತ್ಯರು ಕೈಶಿಕೀ ಪ್ರಾಯರಾಗಿದ್ದರು. ಲಲಿತ ಮಧುರ ಗಾನ ನರ್ತನಗಳಲ್ಲಿ ನಿಷ್ಣಾತರಾಗಿದ್ದರು. ಕನ್ನಡಿಗನಾದ ಗೋಪಾಲನಾಯಕನು ಹಿಂದುಸ್ತಾನಿ ಗಾಯನಕ್ಕೆ ಆಚಾರ್ಯ ಪುರುಷನಾದನು. ಆತನ ಪರಂಪರೆಯಲ್ಲಿ ಬಂದ ತಾನಸೇನ ಮೊದಲಾದವರು ಆ ಸಂಪ್ರದಾಯವನ್ನು ಬೆಳೆಸಿದರು. ಅದರಂತೆ ಕನ್ನಡಿಗರಾದ ಅಚಲಾನಂದ ಪರಂಪರೆಯವರು ಕರ್ಣಾಟಕ ಸಂಪ್ರದಾಯವನ್ನು ಬೆಳೆಸಿದರು. ಭಾಷಾ ಭೇದವಲ್ಲದೆ ಸಂಗೀತ ಭೇದವಾಗಿರಲಿಲ್ಲ.

## ಪುಂಡರೀಕವಿಠಲ

ಪುಂಡರೀಕ ವಿಠಲನು ಬೆಂಗಳೂರು ಜಿಲ್ಲಾ ಶಿವಗಂಗೆಯ ಬಳಿಯ ಸಾತನೂರಿನವನು. ಪುರಂದರದಾಸರ ಸಮಕಾಲಿಕನು. ಇವನು ಅಚಲಾನಂದರ ಆರು ಕೀರ್ತನ ಪೀಠಗಳ ಪೈಕಿ ಶಿವಗಂಗೆ ಪೀಠದ ಪರಂಪರೆಗೆ ಸೇರಿದ ಹರಿದಾಸನಿರಬೇಕೆಂದು ಊಹಿಸಲು ಅವಕಾಶವಿದೆ. ಇವನು ಅಹಮದನಗರದ ಸುಲ್ತಾನ ಬುರಹಾನಖಾನನ ಆಶ್ರಯದಲ್ಲಿದ್ದು ಸಂಗೀತಶಾಸ್ತ್ರದಮೇಲೆ "ಸದ್ರಾಗ ಚಂದ್ರೋದಯ" ವೆಂಬ ಪ್ರಸಿದ್ಧ ಗ್ರಂಥವನ್ನು ಬರೆದಿದ್ದಾನೆ. ಈ ಸಾಹಸಿಯು ಜಯಪುರದ ಧೊರೆಯಾಗಿದ್ದ ಮಾಧವಸಿಂಹನ ಆಶ್ರಯಪಡೆದು ಆ ರಾಜನ ತಂಗಿಗೆ ಗಾನವಿದ್ಯಾ ಗುರುವಾಗಿದ್ದಾನೆ. ಆ ಕಾಲದಲ್ಲಿವನು "ರಾಗಮಂಜರಿ" ಎಂಬ ಗ್ರಂಥವನ್ನು ಬರೆದಿದ್ದಾನೆ. ಅಕ್ಬರ ಚಕ್ರವರ್ತಿ ರಾಜಕುಮಾರಿಯನ್ನು ವಿವಾಹಮಾಡಿಕೊಂಡಾಗ ಈತನು ರಾಜಕುಮಾರಿಯನ್ನು ಹಿಂಬಾಲಿಸಿದ್ದಾನೆ. ಅಕ್ಬರನಲ್ಲಿ

ಇವನಿಗೆ ಆಶ್ರಯ ದೊರೆತಿದೆ. ದೆಹಲಿಯಲ್ಲಿದ್ದಾಗ ೧೫೭೬ರಲ್ಲಿ ರಾಗಮಾಲಾ ನರ್ತನ ಮಂಜರಿ ಎಂಬ ಮತ್ತೆರಡು ಗ್ರಂಥಗಳನ್ನು ಬರೆದು ಚಕ್ರವರ್ತಿಯ ಮೆಚ್ಚಿಕೆಗೆ ಪಾತ್ರನಾಗಿದ್ದಾನೆ. ಭರತಮುನಿಯ ನಂತರ ಸಂಗೀತದಲ್ಲಿ ವಿಶೇಷ ಸುಧಾರಣೆಮಾಡಿ ರಾಗ ಮೇಳಗಳ ವ್ಯವಸ್ಥೆಮಾಡಿ ಸಂಗೀತವು ಸುಗಮವಾಗುವಂತೆ ಮಾಡಿದ್ದಾನೆ. ಸಂಗೀತದ ಜಾತಿಗಳು ಭರತಮುನಿಯಿಂದ ನಿರ್ಣೀತವಾಗಿದ್ದರೂ ಅವುಗಳ ಸ್ವರ ಪದ್ಧತಿಯನ್ನು ಪರಿಷ್ಕರಿಸಿದ್ದಾನೆ. ಮೇಳ ಪ್ರಸ್ತಾರವೆಂಬ ಹೊಸ ಶೋಧನೆ ನಡೆಸಿ ಗಣಿತ ಶಾಸ್ತ್ರದ ಸಹಾಯದಿಂದ ಮೇಳಗಳ ಸಂಖ್ಯೆಯನ್ನು ಕ್ಲಿಪ್ತಮಾಡಿದ್ದಾನೆ. ಸ್ವರ ನಿರ್ದೇಶ ಮಾಡುವುದರ ಕ್ಲಿಷ್ಟತೆಯನ್ನು ಕಳೆದು ಹೊಸ ಪರಿಭಾಷೆಯನ್ನು ರಚಿಸಿದ್ದಾನೆ. ಇದರಿಂದ ಸ್ವರಗಳು ನಾದಶಾಸ್ತ್ರ ಲಕ್ಷಣಕ್ಕೆ ಕೇವಲ ಲಕ್ಷಿತವಾಗಿರದೆ ಗಣಿತ ಶಾಸ್ತ್ರ ತತ್ವವನುಸರಿಸಿ ಕ್ರಮಾಂಕ ಗೃಹೀತವಾಗಿವೆ. ಇವನ ಅಭಿಪ್ರಾಯದಂತೆ ಸ್ವರ ಮೇಳಗಳ ಸಂಖ್ಯೆ ತೊಂಭತ್ತು. ಒಟ್ಟಿನಲ್ಲಿ ವಿಚಾರಿಸಿದರೆ ಕರ್ಣಾಟಕ ಸಂಗೀತಕ್ಕೆ ಈತನು ಆಚಾರ್ಯ ಪುರುಷನಂತಿದ್ದಾನೆ. ಇವನ ಸಂಗೀತವು—ದೇಶ, ಭಾಷಾ, ಆಹಾರ, ಆಚಾರ, ಇವನೇ ರಚಿಸಿದ ಶಾಸ್ತ್ರ, ಇವೆಲ್ಲದರ ಪ್ರಭಾವದಿಂದ, ಉತ್ತರ ದೇಶದಲ್ಲಿ ಅದು ಅದರಂತೆ ಮೂರು ಶತಮಾನ ಕಾಲ ಬೆಳೆದ ಹಿಂದುಸ್ತಾನಿ ಸಂಗೀತದಿಂದ ವ್ಯತ್ಯಾಸವಾಗಿ ಕಂಡು ಬಂದಿದ್ದರೂ, ಅಲ್ಲಿನ ರಾಜಾಧಿರಾಜರಿಂದೆಲ್ಲ ವಿಶೇಷ ಮನ್ನಣೆಯನ್ನು ಪಡೆದಿವೆ. ಇವನ ಸಂಪ್ರದಾಯದಂತೆ ಹಾಡಿದ ಜನಾರ್ದನಭಟ್ಟ, ಭಾನುಭಟ್ಟ ಎಂಬ ವಾಗ್ಗೇಯಕಾರರು ಷಹಜಹಾನನ ಆಸ್ಥಾನದಲ್ಲಿ ಮನ್ನಣೆ ಪಡೆದು ಕರ್ಣಾಟಕಕ್ಕೆ ಕೀರ್ತಿ ತಂದಿರುತ್ತಾರೆ.

ಪುಂಡರೀಕನ ನಂತರ ದಕ್ಷಿಣ ಭಾರತದಲ್ಲಿ ಬಂದ ವಾಗ್ಗೇಯಕಾರರು ಇವನ ಗ್ರಂಥಗಳನ್ನು ನೋಡದಿದ್ದ ಕಾರಣ, ಮತ್ತೆ ತಮ್ಮದೇ ಆದ ಶೋಧನೆಗಳಿಂದ ಸ್ವತಂತ್ರ ಮಾರ್ಗವನ್ನು ಕಂಡುಹಿಡಿದಿದ್ದಾರೆ. ಹಾಡಲು ಸಾಧ್ಯವಲ್ಲದ ರಾಗಗಳನ್ನು ಹಿಂದಿನವರಂತೆ ದೇಷಗಮ್ಯವೆಂದು ಗಂಟು ಕಟ್ಟಿ ಮುದ್ರೆಯೊತ್ತಿದ್ದಾರೆ. ಮೂರು ನಾಲ್ಕು ಸ್ವರಗಳಿಂದೆಲ್ಲಾ ರಾಗವನ್ನು ನಿರ್ಮಿಸಿ ಹೊಸ ಹೊಸ ಹೆಸರುಗಳನ್ನು ಕೊಟ್ಟಿದ್ದಾರೆ. ದಕ್ಷಿಣೋತ್ತರ ದೇಶಗಳಲ್ಲಿ ಒಂದೇ ಆಗಿದ್ದ ರಾಗಗಳ ಹೆಸರುಗಳನ್ನು ಬದಲಾಯಿಸಿದ್ದಾರೆ.

## ರಾಮಾಮಾತ್ಯ

ಈ ಅಮಾತ್ಯನು ಆಂಧ್ರದೇಶದ ನಿಯೋಗಿ ಬ್ರಾಹ್ಮಣ. ರಾಜಾತೋದರಮಲ್ಲನ ವಂಶಕ್ಕೆ ಸೇರಿದವ. ಕರ್ಣಾಟಕದ ಪ್ರಸಿದ್ಧ ಚಕ್ರವರ್ತಿ ಕೃಷ್ಣದೇವರಾಯನ ಆಶ್ರಯದಲ್ಲಿದ್ದು ರಾಜಬಾಂಧವ್ಯವನ್ನು ಸಂಪಾದಿಸಿದವ. (?) ಅಳಿಯ ರಾಮರಾಜನ ಕಾಲದಲ್ಲಿ ರಾಜನ ತಮ್ಮ ವೆಂಕಟಾದ್ರಿ ರಾಜನಿಂದ ಪ್ರೇರಿತನಾಗಿ–ರಾಗ ಕದಂಬ, ಗದ್ಯಪ್ರಬಂಧ, ಪಂಚತಾಳೇಶ್ವರ, ಸ್ವರಾಂಕ, ಶ್ರೀರಂಗ ವಿಲಾಸ ಮೊದಲಾದ ಕಾವ್ಯ ಗ್ರಂಥಗಳನ್ನು ರಚಿಸಿ ರಾಜಮನ್ನಣೆಯನ್ನು ಪಡೆದವ. ಅಭಿನವ ಭರತಾಚಾರ್ಯನೆಂದು ಪ್ರಖ್ಯಾತ. ಈತನನ್ನು ಕುರಿತು ರಾಮರಾಜನು—

ಸಂಗೀತ ಶಾಸ್ತ್ರೇ ಬಹುಧಾ ವಿರೋಧಾಸ್ಸಂತ್ಯೇವ ಲಕ್ಷ್ಯೇಷುಚ ಲಕ್ಷಣೇಷು
ಸರ್ವಂ ಸಮೀಕೃತ್ಯ ಸರಾಮಮಂತ್ರೀ ತನೋತು ಶಾಸ್ತ್ರಂ ವಚಸಾ ತವೇತಿ ॥

ಎಂಬದಾಗಿ ವೆಂಕಟಾದ್ರಿ ರಾಜನನ್ನು ಪ್ರೇರಿಸಿದನಂತೆ ! ಅಮಾತ್ಯನು "ಸಂಗೀತ ಕಳಾನಿಧಿ" ಎಂಬ ಗ್ರಂಥವನ್ನು ಬರೆದನಂತೆ ! ಆದರೆ ಈತನ ಗ್ರಂಥಗಳೊಂದೂ ಉಪಲಬ್ಧವಿಲ್ಲ. ಈತನ ಸ್ವರಶಾಸ್ತ್ರ ಗ್ರಂಥವನ್ನು ಮುಂದೆ ವೆಂಕಟಮಖಿಯು ಕೆಲವಂಶಗಳಲ್ಲಿ ಖಂಡಿಸಿರುವುದು ಗೊತ್ತಾಗುತ್ತದೆ.

## ವೆಂಕಟಮಖಿ

ಹೊಯ್ಸಳ ಕರ್ಣಾಟಕ ವಂಶೋದ್ಭವನಾದ ವೆಂಕಟಮಖಿಯು ವಂಶೋನ್ನತಿಯಲ್ಲಿ ನೋಡಿದರೆ ಮಧುರೆಯ ನಾಯಕರಾಜರ ಮಂತ್ರಿಯಾಗಿದ್ದ ಗೋವಿಂದ ದೀಕ್ಷಿತರ ದ್ವಿತೀಯ ಕುಮಾರನು. ಗೋವಿಂದ ದೀಕ್ಷಿತರು ರಾಜಕಾರ್ಯ ಧುರಂಧರರಾಗಿದ್ದಂತೆ ವೈದಿಕ ವಿದ್ಯೆಯಲ್ಲಿ ಅಪ್ಪಯ್ಯ ದೀಕ್ಷಿತರ ಸರಿಸಮಾನರಾಗಿ ಖ್ಯಾತಿಪಡೆದವರು. "ಸಂಗೀತ ಸುಧಾನಿಧಿ" ಎಂಬ ಲಕ್ಷಣ ಗ್ರಂಥವನ್ನು ಬರೆದವರು. ನಾಯಕ ವಂಶದ ಅಚ್ಯುತ ರಾಜನನ್ನೂ ದೀಕ್ಷಿತರನ್ನೂ ಓರ್ವ ಕವಿಯು

"ತ್ರಿನಾಮಾದ್ಯಂತ ನಾಮಾನೌ ಮಹೀಭೃದ್ದೀಕ್ಷಿತಾವುಭೌ
ಶಸ್ತ್ರೇ ಶಾಸ್ತ್ರೇಚ ಕುಶಲೌ ಆಹವೇಷು ಹವೇಷುಚ ॥"

ಎಂದು ವರ್ಣಿಸಿರುವನು. ಅಚ್ಯುತ, ಅನಂತ, ಗೋವಿಂದ ಎಂಬುವು ತ್ರಿನಾಮಗಳು. ಇವುಗಳ ಆದ್ಯಂತ ನಾಮಗಳುಳ್ಳವರು ಅಚ್ಯುತರಾಜ ಗೋವಿಂದ ದೀಕ್ಷಿತ ಎಂಬುವರು. ಅಚ್ಯುತನು ಶಸ್ತ್ರದಲ್ಲಿ-ಆಹವದಲ್ಲಿ (ಯುದ್ಧ) ಕುಶಲನಾದರೆ ದೀಕ್ಷಿತರು ಶಾಸ್ತ್ರದಲ್ಲಿ - ಯಜ್ಞದಲ್ಲಿ (ಹವೇಷು) ಕುಶಲರು. ಇಷ್ಟು ದೊಡ್ಡಸ್ತಿಕೆಯುಳ್ಳ ದೀಕ್ಷಿತರ ಪುತ್ರ ವೆಂಕಟಮಖಿ. ಮಖಿಯು "ಚತುರ್ದಂಡೀ ಪ್ರಕಾಶ" ವೆಂಬ ಲಕ್ಷಣ ಗ್ರಂಥವನ್ನು ಬರೆದಿರುತ್ತಾನೆ. ಗ್ರಂಥದಲ್ಲಿ ತನ್ನ ತಂದೆ "ಸಂಗೀತ ಸುಧಾನಿಧಿ"ಯಲ್ಲಿ ಬರೆದಿರುವುದನ್ನು ತಾನು ಬರೆಯುತ್ತೇನೆಂದು ತಿಳಿಸುತ್ತಾನೆ. ಈತನು ಉತ್ತರ ದೇಶದ ಪ್ರಸಿದ್ಧ ತಾನಪ್ಪಾಚಾರ್ಯನಲ್ಲಿ ಸಂಗೀತ ವಿದ್ಯೆಯನ್ನು ಲಕ್ಷ್ಯ ಲಕ್ಷಣ ಸಹಿತವಾಗಿ ಅಭ್ಯಾಸಮಾಡಿ "ಗಂಧರ್ವ ಜನತಾ ಖರ್ವ ದುರ್ವಾರ ಗರ್ವ ಭಂಜನುರೇ" ಎಂಬ ಕೀರ್ತನೆಮಾಡಿ ಹಾಡಿದನೆಂಬ ಪ್ರಸಿದ್ಧಿಯಿದೆ. ತಾನಪ್ಪಾಚಾರ್ಯನು ಅಕ್ಬರನ ಆಶ್ರಯದಲ್ಲಿದ್ದ ತಾನಸೇನನೋ ಅದೇ ಹೆಸರಿನ ಮತ್ತೊಬ್ಬನೋ ಗೊತ್ತಾಗುವಂತಿಲ್ಲ. ಅಕ್ಬರನ ಆಶ್ರಿತನಾಗಿದ್ದರೆ ಅವನ ಕಾಲ ೧೫೫೬ ರಿಂದ ೧೬೦೫ ವೆಂಕಟಮಖಿ ವಿಜಯ ರಾಘವನಾಯಕನ ಕಾಲದವ. ವಿಜಯ ರಾಘವನಾಯಕನ ಪ್ರೇರಣೆಯಿಂದ "ಚತುರ್ದಂಡೀ ಪ್ರಕಾಶ" ವನ್ನು ರಚಿಸಿದವ. ವಿಜಯ ರಾಘವನಾಯಕನ ತಂದೆ ರಘುನಾಥ ಭೂಪಾಲನ ಪಟ್ಟಾಭಿಷೇಕವಾದ್ದು ೧೬೧೪ರಲ್ಲಿ. ತಂದೆಯ ರಾಜ್ಯಭಾರದ ಕಾಲವೆಷ್ಟು ? ಮಗನಿಗೆ ರಾಜ್ಯಾಭಿಷೇಕವಾದ್ದು ಯಾವಾಗ ? ೧೬೬೦ರಲ್ಲಿ ಡಚ್ಚರಿಗೆ ವಿಜಯ ರಾಘವನಾಯಕನು ನಾಗಪಟ್ಟಣವನ್ನು ಕೊಟ್ಟನೆಂದು ಶಾಸನ ಲಿಖಿತವಾಗಿದೆ. ಈ ಮಿತಿಗೆ ೨೦–೩೦ ವರ್ಷಗಳ ಹಿಂದೆ ತಾನಸೇನನು ದಕ್ಷಿಣಯಾತ್ರೆಗೆ ಬಂದು ಮಧುರೆಯಲ್ಲಿ ನೆಲೆಸಿ ವೆಂಕಟಮಖಿಗೆ ವಿದ್ಯಾಭ್ಯಾಸ ಮಾಡಿಸಿರಲು ಸಾಧ್ಯವೇ ? ತಾನಸೇನನ ಜೀವಿತ ಕಾಲವೆಷ್ಟು ? ಇವೆಲ್ಲಾ ಬಗೆಹರಿಯದ ಸಮಸ್ಯೆಗಳಾಗಿವೆ.

ಕಾಲಜಿಜ್ಞಾಸ ಹೇಗಾದರಿರಲಿ, ವೆಂಕಟಮಖಿಯ "ಚತುರ್ದಂಡೀ ಪ್ರಕಾಶ"ವು ದಕ್ಷಿಣ ಭಾರತಕ್ಕೆಲ್ಲಾ ಪ್ರಸಿದ್ಧ ಲಕ್ಷಣ ಗ್ರಂಥವಾಗಿದೆ. ವೆಂಕಟಮಖಿಯು ಎಷ್ಟೋ ಶಾಸ್ತ್ರ ಗ್ರಂಥಗಳನ್ನು ವಿಚಾರಿಸಿ ಸ್ವತಂತ್ರ ಗ್ರಂಥ ಬರೆದಿದ್ದರೂ ಪುಂಡರೀಕವಿಠಲನ ಗ್ರಂಥಗಳು ಅವನಿಗೆ ದೊರೆತಿಲ್ಲ.

ಕನ್ನಡಿಗನಾದರೂ ವಿಠಲನು ಉತ್ತರ ಭಾರತದಲ್ಲಿ ನೆಲೆಸಿ ಎಂದೋ ಎಲ್ಲೋ ಅದೃಶ್ಯನಾದ್ದರಿಂದ ಅವನ ಗ್ರಂಥ ಪ್ರಚಾರ ತಮಿಳುನಾಡಿನಲ್ಲಿ ಆಗಿರಲಿಕ್ಕಿಲ್ಲ. ವೆಂಕಟಮುಖಿಗೇ ಏಕೆ ? ರಾಮಾಮಾತ್ಯನಿಗೂ ಪುಂಡರೀಕನ ಗ್ರಂಥಗಳು ದೊರೆತಿಲ್ಲ. ದೊರೆತಿದ್ದರೆ ರಾಜಸಭೆಯಲ್ಲಿ ಸಂಗೀತ ಲಕ್ಷ್ಯಲಕ್ಷಣಗಳ ವಿರೋಧ ಪ್ರಶ್ನೆ ಹುಟ್ಟುತ್ತಿರಲಿಲ್ಲ.

ವೆಂಕಟಮುಖಿಯು ರಾಗ ಮೇಳಗಳ ಸಂಖ್ಯೆ ೭೨ ಎಂದು ನಿಶ್ಚೈಸಿದ್ದಾನೆ. ಪುಂಡರೀಕನ "ಸದ್ರಾಗ ಚಂದ್ರೋದಯ"ದ ಹೆಸರು ಬಹು ಜನರಿಗೆ ತಿಳಿದಿಲ್ಲವಾದ್ದರಿಂದ ಅವನ ತೊಂಭತ್ತು ಮೇಳಗಳ ಪ್ರಸ್ತಾಪ ಜನರಿಗೆ ರುಚಿಸುವದಿಲ್ಲ. ಆದರೂ ಒಂದು ಶತಮಾನದ ನಂತರ ವೆಂಕಟಮುಖಿಯ ರಾಗ ಮೇಳಗಳಿಗೆ ಸಾಲದಿದ್ದುದನ್ನು ತುಳಾಜಿ ಮಹಾರಾಜನು ಪೂರವಿಸಿ "ಸಂಗೀತ ಸಾರಾಮೃತೋದ್ಧಾರ"ವೆಂಬ ಗ್ರಂಥ ಬರೆದು ಪರಿಷ್ಕರಿಸಿದ್ದಾನೆ.

ಇವರ ನಂತರ ಇವರಷ್ಟು ಪ್ರಸಿದ್ಧ ಶಾಸ್ತ್ರಕರ್ತರು ಬರಲಿಲ್ಲ. ಲಕ್ಷ್ಯದಲ್ಲಿ ದೃಷ್ಟಿಯಿಟ್ಟ ವಾಗ್ಗೇಯಕಾರರು ಗಣಿತ ಶಾಸ್ತ್ರ ಬಲದಿಂದ ರಾಗಗಳ ಸಂಖ್ಯೆಯನ್ನು ಬೆಳೆಸಿದ್ದಾರೆ. ಇವುಗಳಲ್ಲಿ ಸುಶ್ರಾವ್ಯ ರಾಗಗಳೆಷ್ಟೆಂಬುದು ದೊಡ್ಡ ಪ್ರಶ್ನೆಯಾಗಿದೆ.

## ತ್ಯಾಗರಾಜರು

ಪುರಂದರ ದಾಸರಂತೆ ತ್ಯಾಗರಾಜರು ಸತ್ಪುರುಷ ವರ್ಗಕ್ಕೆ ಸೇರಿದವರು. ಜಾತ್ಯಾ ಆಂಧ್ರ ಬ್ರಾಹ್ಮಣರು. ತಮಿಳುನಾಡಿನ ತಿರುವೆಯಾರಿನಂಥ ಕೇಂದ್ರದಲ್ಲಿ ನೆಲೆಸಿದ್ದರೂ, ಮಾತೃಭಾಷೆಯಾದ ತೆಲುಗಿನಲ್ಲಿ ಸಹಸ್ರಾವಧಿ ಕೀರ್ತನೆಗಳನ್ನು ರಚಿಸಿ, ಕರ್ಣಾಟಕ ಸಂಗೀತವನ್ನು ಪ್ರಚಾರಮಾಡಿದವರು. ದಕ್ಷಿಣ ಭಾರತದಲ್ಲಿ ತ್ಯಾಗರಾಜರ ಕೃತಿಗಳಿಗೆ ದೊರೆತಿರುವ ಸ್ಥಾನ ಮತ್ಯಾರಿಗೂ ದೊರೆತಿಲ್ಲ. ತೆಲುಗು ಭಾಷೆಯಲ್ಲಿ ಶಬ್ದಾಡಂಬರವಿಲ್ಲದ ಲಲಿತ ಸಾಹಿತ್ಯವನ್ನು ಕಂಡುಹಿಡಿದ ಕೀರ್ತಿ ಇವರದು. ಆಂಧ್ರ ಸಾಹಿತಿಗಳು ತ್ಯಾಗರಾಜರ ಭಾಷೆಗೆ ಸಾಹಿತ್ಯದ ಸ್ಥಾನ ಕೊಡುವುದಿಲ್ಲ. ರಾಜರ ಭಾಷೆಯಂತೆ ಸಂಗೀತ ಭಾಷೆಯನ್ನು ನಿರ್ಮಿಸಲು ಅವರು ಸಮರ್ಥರಾಗಿಲ್ಲ. ಇವರ ಕೃತಿಗಳೂ ಜಯದೇವನ ಗೀತೆಗಳಂತೆ, ದಾಸರ ಪದಗಳಂತೆ, ಹಾಡುವವರ

ಪಾಲಾಗಿ ಬಿಟ್ಟಿವೆ. ನೂರು ವರ್ಷಕ್ಕೆ ಸ್ವಲ್ಪ ಹಿಂದಿನ ಕಾಲವಲ್ಲಿದ್ದ ಇವರ ಕೀರ್ತನೆಗಳನ್ನು ಇವರೇ ಹಾಡಿದ್ದಂತೆ ಹಾಡುವ ಪದ್ಧತಿ ನೂರರಲ್ಲಿ ಹತ್ತಕ್ಕಾದರೂ ಇದೆಯೇ ಎಂಬುವುದು ದೊಡ್ಡ ಪ್ರಶ್ನೆಯಾಗಿದೆ. ಇವರ ವಹಿಗಳಿಂದ ಆರಿಸಿ ಹಾಡುವೆವೆಂಬ ಕೀರ್ತನೆಗಳು ಸಹ ರೀತಿ ಗೊತ್ತಿಲ್ಲದ ಕಾರಣ ಮೊದಲು ಆರಿಸಿಕೊಂಡವರು ಹಾಡಿದ ರಾಗ ತಾಳಗಳಲ್ಲಿ ಪ್ರಚಾರ ವಾಗುತ್ತಿವೆ. ತ್ಯಾಗರಾಜರ ಕಾಲದಲ್ಲಿ ದಕ್ಷಿಣ ಭಾರತದಲ್ಲೆಲ್ಲಾ ಪುರಂದರ ದಾಸರ ಕೀರ್ತನೆಗಳನ್ನು ಹಾಡುವ ವಾಡಿಕೆಯಿತ್ತಂತೆ. ತ್ಯಾಗರಾಜರ ತಾಯಿ ಅನೇಕ ಭಕ್ತಿಪರ ರಾಮಕೀರ್ತನೆಗಳನ್ನು ಹಾಡುತ್ತಿದ್ದರಂತೆ. ತಾಯಿಯ ಹಾಡುಗಳನ್ನು ಕೇಳಿ ತ್ಯಾಗರಾಜರಿಗೂ ಪುರಂದರ ದಾಸರಂತೆ ತಾನಾಗಬೇಕು, ಅವರಂತೆ ತಾನೂ ಹಾಡಬೇಕು, ಎಂಬ ಭಾವೋದ್ರೇಕವುಂಟಾಯಿತಂತೆ. ಆ ಉದ್ರೇಕವೇ ತ್ಯಾಗರಾಜರು ಇಷ್ಟು ದೊಡ್ಡ ವಾಗ್ಗೇಯಕಾರರಾಗಲು ಕಾರಣ ವಾಯಿತಂತೆ. ತ್ಯಾಗರಾಜರ ಜೀವನ ಚರಿತ್ರೆಯು ಇದಕ್ಕೆ ತಕ್ಕಂತೆ ಮಾರ್ಪಟ್ಟಿರುವುದು ಕಂಡುಬರುತ್ತದೆ. ಪುರಂದರ ದಾಸರಿಗೂ ತ್ಯಾಗರಾಜರಿಗೂ ಇದ್ದ ವ್ಯತ್ಯಾಸವೆಂದರೆ—ಒಬ್ಬರು ಮಹದೈಶ್ವರ್ಯವನ್ನು ತ್ಯಜಿಸಿ ಭಕ್ತ ರಾದವರು, ಮತ್ತೊಬ್ಬರು ಮಹದೈಶ್ವರ್ಯ ಬಂದರೂ ತಿರಸ್ಕರಿಸಿದವರು, ಇಷ್ಟೇ! ಪುರಂದರ ದಾಸರ ದೇವರನಾಮಗಳಂತೆ ತ್ಯಾಗರಾಜರು ಪಲ್ಲವಿ ಅನುಪಲ್ಲವಿ ಒಂದರಿಂದ ಅನೇಕ ಚರಣಗಳುಳ್ಳ ಕೀರ್ತನೆಗಳನ್ನು ರಚಿಸಿರುತ್ತಾರೆ. ಅದೇ ರಾಗ ತಾಳಗಳಲ್ಲಿ ಅದೇ ವರ್ಣ ಮಟ್ಟುಗಳಲ್ಲಿ ಅದೇ ಭಾವನೆಯಿಂದ ರಚಿಸಿದ ಕೀರ್ತನಗಳಿಗೆ ಕಡಮೆಯಿಲ್ಲ. ಪುರಂದರ ದಾಸರಂತೆ ತ್ಯಾಗರಾಜರೂ ಹರಿಕಥೆಗೆ ಅನುಕೂಲವಾಗುವಂತೆ ಪ್ರಹ್ಲಾದ ಭಕ್ತಿ ವಿಜಯ ನೌಕಾ ಚರಿತ್ರೆಗಳೆಂಬ ಕಥೆಗಳನ್ನು ರಚಿಸಿರುತ್ತಾರೆ. ಉಭಯರೂ ಗಾನ ಕೀರ್ತನೆಗಳಿಂದ ಹಣವನ್ನು ಗಳಿಸಲಿಲ್ಲ. ಉಭಯರೂ ರಾಜಾಧಿರಾಜರು ಬಂದು ಕೇಳಿಕೊಂಡರೂ ನರಸ್ತುತಿ ಮಾಡಲಿಲ್ಲ. ಇಂಥ ತ್ಯಾಗಶೀಲ ತ್ಯಾಗರಾಜರನ್ನು ಸಂಗೀತಗಾರರೆಂದು ಕರೆಯುವುದಕ್ಕೆ ಬದಲಾಗಿ ಹರಿದಾಸ ರೆಂದು ಕರೆಯುವುದು ಯೋಗ್ಯವಾಗಿದೆ. ತ್ಯಾಗರಾಜರು ಪುರಂದರ ದಾಸರನ್ನು ತಮ್ಮ ಆದರ್ಶ ಗುರುಗಳೆಂದು ಭಾವಿಸುತ್ತಿದ್ದರೆಂಬುದಕ್ಕೆ ಅವರೇ ರಚಿಸಿದ ಪ್ರಹ್ಲಾದ ಭಕ್ತಿ ವಿಜಯದಲ್ಲಿ ಪ್ರಾರಂಭದಲ್ಲೇ—

ದುರಿತವ್ರಾತಮುಲೆಲ್ಲನು । ಪರಿಮಾರ್ಚೆಡಿ ಹರಿಗುಣಮುಲ ಬಾಡು
ಮಹಿತ ಸುಲಸ ಚುನೆಪುರ್ಡು
ಪರವಶುಡೈವೆಲಯು ಪುರಂ । ದರ ದಾಸುನ್ನಿದ್ದಲಚೆದನುದಿಲೋ ॥೧॥

ಎಂದು ಹಾಡಿದ ಕಂದ ಪದ್ಯಕ್ಕಿಂತ ಮತ್ತೊಂದು ಪ್ರಮಾಣ ಬೇಕಾಗಿಲ್ಲ.

ಇವರ ಸಂಗೀತಕ್ಕೆ ಸ್ವಪ್ನಲಬ್ಧನಾದ "ಸ್ವರಾರ್ಣವ"ವೆಂಬ ನಾರದರ ಗ್ರಂಥ ಸಂಪ್ರದಾಯವಾಯಿತೆಂದು ಹೇಳುತ್ತಾರೆ. ಹಾಡಿದ್ದೇ ರಾಗ ಹೇಳಿದ್ದೇ ಶಾಸ್ತ್ರವೆಂಬಷ್ಟು ಗೌರವ ಸಂಪಾದನೆ ಮಾಡಿದ ಋಷಿತುಲ್ಯರಾದ ತ್ಯಾಗರಾಜರ ಕೀರ್ತನೆಗಳು ಲಕ್ಷಣ ಲಕ್ಷಿತವಾಗಿವೆಯೇ ಎಂಬುದಕ್ಕೆ ಯಾರಿಗೂ ಅಧಿಕಾರವಿಲ್ಲ.

ಇವರ ನಂತರ ೧೭೬೨ ರಿಂದ ೧೮೨೭ ರವರೆಗಿದ್ದ ಶಾಮ ಶಾಸ್ತ್ರಿಗಳೂ ೧೭೭೫ ರಿಂದ ೧೮೩೫ ರವರೆಗಿದ್ದ ಮುತ್ತುಸ್ವಾಮಿ ದೀಕ್ಷಿತರೂ ಪ್ರಸಿದ್ಧ ಗಾಯಕರಾಗಿ ಸಂಸ್ಕೃತ ಆಂಧ್ರ ಭಾಷೆಗಳಲ್ಲಿ ಅನೇಕ ಕೀರ್ತನೆಗಳನ್ನು ಮಾಡಿರುತ್ತಾರೆ. ಮುತ್ತುಸ್ವಾಮಿ ದೀಕ್ಷಿತರಂತು ಹೆಜ್ಜೆಹೆಜ್ಜೆಗೆ ಪುರಂದರ ದಾಸರ ದಾರಿಯನ್ನು ಅನುಸರಿಸಿರುವುದು ಕಂಡುಬರುತ್ತದೆ.

## ಶ್ರೀಪಾದರಾಜರು

ಲಕ್ಷಣ ಶಾಸ್ತ್ರಕರ್ತರ ಸರಣಿಯನ್ನನುಸರಿಸಿ ತತ್ತತ್ಕಾಲದ ಪ್ರಮುಖ ವಾಗ್ಗೇಯಕಾರರ ನಾಮಸ್ಮರಣೆ ಮಾಡಿದ ನಂತರ ಪುನಃ ಮೂರು ಶತಮಾನಗಳಷ್ಟು ಕಾಲ ಹಿಂತಿರುಗಿದರೆ, ಪ್ರಸಕ್ತ ವಿಷಯಕ್ಕೆ ಬೇಕಾದ ಸಂಗತಿಗಳೊಂದೊಂದೂ ಹೊಂದಿಕೆಯಾಗಿ ಬರುತ್ತದೆ.

ವಿಜಯದಾಸರು ಒಂದು ಸುಳಾದಿಯಲ್ಲಿ ಅಚಲಾನಂದರಿಂದ ಹಿಡಿದು ಪುರಂದರ ದಾಸರವರೆಗೆ, ಪುರಂದರ ದಾಸರಿಂದ ಹಿಡಿದು ತಮ್ಮ ಕಾಲದವರೆಗೆ ಎಷ್ಟೋ ಮಂದಿ ಹರಿದಾಸರು ಗಾನರೂಪದಿಂದ ಭಾಗವತ ಧರ್ಮ ಪ್ರಚಾರ ಮಾಡಿದರೆಂದು ಉಲ್ಲೇಖಿಸಿರುವರು. ಅಚಲಾನಂದರು ರಾಮಾನುಜ ಮಧ್ವಾಚಾರ್ಯರುಗಳಿಗಿಂತ ಮೂರು ಶತಮಾನ ಹಿಂದಿನ ಕಾಲದವರು.

ಅಚಲಾನಂದರ ಹಿಂದೆ ಯಾರಿದ್ದರೆಂಬುವುದು ಗೊತ್ತಾಗುವುದಿಲ್ಲ. ಇತಿಹಾಸ ಕಾಲವನ್ನು ಬಿಟ್ಟು ಪುರಾಣ ಕಾಲಕ್ಕೆ ಇಳಿದರೆ ಐದು ಸಾವಿರ ವರ್ಷಗಳಿಗಿಂತ ಮುಂಚೆ ವ್ಯಾಸಪುತ್ರರಾದ್ದ ಶುಕಾಚಾರ್ಯರು ಕೀರ್ತನದಿಂದ ಭಾಗವತ ಧರ್ಮವನ್ನು ಪ್ರಚಾರ ಮಾಡಿದರೆಂಬ ಉಲ್ಲೇಖ ಪದ್ಮ ಪುರಾಣದಲ್ಲಿ ದೊರೆಯುತ್ತದೆ. ನಮ್ಮ ಇತಿಹಾಸ ಪಾಶ್ಚಾತ್ಯರ ಇತಿಹಾಸದಂತೆ ಕ್ರಿಸ್ತ ಪೂರ್ವ ಕೆಲವು ಶತಮಾನಗಳಿಂದ ಆರಂಭವಾಗಿಲ್ಲ. ಐದು ಸಾವಿರ ವರ್ಷಗಳ ಹಿಂದೆ ಬದುಕಿ ಬಾಳಿದ "ಮಾಹೇಂಜಾದಾರೋ" ಶೋಧನವು ದ್ರಾವಿಡ ಜನರ ನಾಗರಿಕತೆ ಹೇಗಿತ್ತೆಂಬುದನ್ನು ತೋರಿಸಿಕೊಟ್ಟಿದೆ. ನಮ್ಮ ಪುರಾಣಗಳು ಪಾಶ್ಚಾತ್ಯರ ಮೈಥಾಲಜಿಯಂತೆ ಕಟ್ಟುಕಥೆಗಳಲ್ಲ. ಪುರಾಣಗಳು ನಮ್ಮ ಪೂರ್ವಿಕರ ಇತಿಹಾಸಗಳು. ಆದ್ದರಿಂದ ಅಚಲಾನಂದರು ಪರಂಪರೆಯಿಂದ ಶುಕಾಚಾರ್ಯರು ಉಪದೇಶಿಸಿದ ಭಾಗವತ ಧರ್ಮಾವಲಂಬಿಗಳು. ಬುದ್ಧದೇವ ಶಂಕರಾಚಾರ್ಯರುಗಳ ಕಾಲಕ್ಕಿಂತ ಹಿಂದೆ ಇದ್ದುದು ಆ ಧರ್ಮ. ಆ ಧರ್ಮವು ಸರ್ವ ಧರ್ಮಗಳಿಗೂ ಆದಿ ಮಧ್ಯ ಅಂತ್ಯಗಳಲ್ಲಿ ಕಳೆಯನ್ನಿತ್ತಿರುವುದು. ಅದನ್ನೇ ಧರ್ಮ ಪ್ರಚಾರಕ್ಕಾಗಿ ನರಹರಿತೀರ್ಥರು ಅನುಸರಿಸಿದರು ; ಶ್ರೀಪಾದರಾಜರು ಬೆಳೆಸಿದರು.

ಶ್ರೀಪಾದರಾಜರು ಶ್ರೀರಂಗ ಕ್ಷೇತ್ರದಲ್ಲಿ ಬಹುಕಾಲ ವಾಸಮಾಡಿದ ಕಾರಣ, ಅಲ್ಲಿ ದ್ರಾವಿಡ ಪ್ರಬಂಧಗಳಿಂದ ಹರಿಭಕ್ತಿ ಮಾರ್ಗ ಪ್ರಚಾರವಾಗುತ್ತಿದ್ದುದನ್ನು ಕಣ್ಣಾರೆ ನೋಡಿದರು. ಕನ್ನಡನಾಡಿನಲ್ಲಿ ವಚನ ಶಾಸ್ತ್ರದಿಂದ ಏನು ಕಾರ್ಯವಾಗುತ್ತಿದೆಯೆಂಬುದನ್ನು ಪರಿಶೀಲಿಸಿದರು. ತಮ್ಮ ಪೂರ್ವಿಕರಾದ ನರಹರಿತೀರ್ಥರ ಗಾನ ಪ್ರಬಂಧಗಳನ್ನು ಸ್ವಯಂ ಕಲಿತಿದ್ದರು. ಗದ್ಯ ಪದ್ಯಗಳ ಸರಣಿಯಿಂದ ಧರ್ಮಪ್ರಚಾರ ಮಾಡುವುದಕ್ಕಿಂತ, ಗಾನ ಪ್ರಬಂಧ ರೂಪವಾಗಿ ಧರ್ಮಪ್ರಚಾರ ಮಾಡುವುದು ಅವರಿಗೆ ರುಚಿಸಿತು. ಭರತ ಶಾರ್ಙದೇವಾದಿಗಳ ಶಾಸ್ತ್ರ ಗ್ರಂಥಗಳನ್ನು ಪರಿಶೀಲಿಸಿದರು. ಶಾರ್ಙದೇವನ ಪಂಚಧಾತುಕ ಉಗಾಭೋಗದಲ್ಲಿ ಹೆಚ್ಚು ಸಾಹಿತ್ಯ ಸೇರಿಸಲು ಅವಕಾಶವಿದ್ದುದರಿಂದ ಅದನ್ನೇ ರಚಿಸಿ ಹಾಡಿ ಹಾಡಿಸಿದರು. ಗೀತ ಗೋವಿಂದದ ಶ್ಲೋಕ ಸಂಗೀತದಂತೆ ಕನ್ನಡದಲ್ಲಿ ವೃತ್ತ ನಾಮಗಳನ್ನು ಬರೆದರು. ಪಲ್ಲವಿ ಅನುಪಲ್ಲವಿ ಚರಣಗಳಿಂದ ಕೂಡಿದ ಅನೇಕ ದೇವರ ನಾಮಗಳನ್ನು ವಿವಿಧ

ರಾಗಗಳಲ್ಲಿ ರಚನೆ ಮಾಡಿದರು. ಸ್ವಯಂ ನರ್ತನ ಸೇವೆಮಾಡುತ್ತಿದ್ದುದರಿಂದ ನರ್ತನಕ್ಕಾಗಿ ಪ್ರತ್ಯೇಕ ಸಾಹಿತ್ಯವನ್ನು ನಿರ್ಮಿಸಿದರು. ರಾತ್ರಿ ಭಜನೆಗಾಗಿ ರಚಿಸಿದ ಭ್ರಮರ ಗೀತೆಯು ಜಾತಿ ನಡೆಗಳ ದೃಷ್ಟಿಯಿಂದ ನೋಡಿದರೆ ಸಂಗೀತವೇ ಸಾಹಿತ್ಯವೋ ಸಾಹಿತ್ಯವೇ ಸಂಗೀತವೋ ಎಂಬಷ್ಟು ಭ್ರಮೆಯನ್ನುಂಟುಮಾಡಿತು. ಎಲ್ಲಕ್ಕಿಂತ ಹೆಚ್ಚಾಗಿ ಸಪ್ತ ತಾಳಗಳಲ್ಲಿ ಒಂದಾಗುತ್ತಲೊಂದರಲ್ಲಿ ಹಾಡಲು ಅನುಕೂಲವಾಗಿರುವಂತೆ "ಸುಳಾದಿ" ಯೆಂಬ ಪರಿಭಾಷೆಯಿಂದ ಹೊಸದೊಂದು ಮಾರ್ಗವನ್ನೇ ಕಲ್ಪಿಸಿ ಹಾಡಿ ಹಾಡಿಸಿದರು. ಶ್ರೀಪಾದರಾಯರು ಕರ್ಣಾಟಕ ಗಾಯನಕ್ಕೆ ಮಾಡಿದ ಸೇವೆ ಒಂದಲ್ಲ ಎರಡಲ್ಲ. ಆದ್ದರಿಂದ ಭಜನ ಕೀರ್ತನಗಳಲ್ಲಿ "ನಮಃ ಶ್ರೀಪಾದರಾಜಾಯ" ಎಂದು ಅವರ ಹೆಸರಿನಿಂದಲೇ ಪರಂಪರೆಯನ್ನು ಕಥನ ಮಾಡಲು ಪ್ರಾರಂಭವಾಯಿತು. ಶ್ರೀಪಾದರಾಜರ ಮಾರ್ಗವನ್ನು ವ್ಯಾಸರಾಯರು ಅನುಸರಿಸಿದರು. ವ್ಯಾಸರಾಯರಿಗೆ ಪುರಂದರದಾಸರು ಶಿಷ್ಯರಾದರು. ಹೀಗೆ ಬೆಳೆಯಿತು ಗಾನ ಪರಂಪರೆ.

## ಪುರಂದರದಾಸರು

ಪುರಂದರ ದಾಸರ ಹೆಸರೆತ್ತಿದರೆ—ಕರ್ಣಾಟಕ ಸಂಗೀತಕ್ಕೆ ಆಚಾರ್ಯ ಪುರುಷರು, ಅವರ ಮಾರ್ಗವನ್ನು ತ್ಯಾಗರಾಜರು, ಮುತ್ತುಸ್ವಾಮಿ ದೀಕ್ಷಿತರು, ಕ್ಷೇತ್ರಜ್ಞ, ತುಳಾಜಿಮಹಾರಾಜ ಮೊದಲಾದವರು ಅನುಸರಿಸಿದರು ; ಅವರ ಪ್ರಸಾದವೇ ಈಗ ಬೆಳೆದು ಬೆಳಗುತ್ತಿರುವ ಕರ್ಣಾಟಕ ಸಂಗೀತ ಎಂದು ಕನ್ನಡ ತೆಲುಗು ತಮಿಳು ನಾಡುಗಳಲ್ಲಿ ಒಮ್ಮತದಿಂದ ಸಮ್ಮತಿಸಿ ಸನ್ಮಾನಿಸುವರು. ಮದ್ರಾಸ್ ಮ್ಯೂಸಿಕ್ ಅಕ್ಯಾಡೆಮಿಯವರು ತಮ್ಮ ತ್ರೈಮಾಸಿಕ ಪತ್ರಿಕೆಯ ೧೯೪೨ರ Vol XIII Parts I-IV ರಲ್ಲಿ ಬರೆದಿರುವುದನ್ನು ಕನ್ನಡ ವಾಚಕರಿಗೆ ಅಂಶತ್ವೇನ ಕೊಟ್ಟರೆ ಪ್ರಸಕ್ತ ವಿಷಯಕ್ಕೆ ಹೊಂದಿಕೆಯಾಗುತ್ತದೆ. ಬರೆದಿರುವ ಮಾತು ಇಂಗ್ಲಿಷಿನಲ್ಲಾದ್ದರಿಂದ ಕನ್ನಡ ಓದಿಗೆ ಮೇಲೋಗರವೆನಿಸುತ್ತದೆ.

## SRI PURANDARADAS

The personality of Sri Purandaradas is the greatest that a combination of spirituality art and culture has

produced. In renouncing the world for dedicating himself to God he made the heaviest sacrifice by giving up his untold wealth for which he was known as Navakoti Narayana. In music his achievements are so vast and magnificent that the results of the efforts of all other composers put together cannot equal a fraction of his work. His compositions number 4,75,000 and more, each with numerous charanas and would in all be many times the length of the Ramayana and Mahabharata put together and would fill the pages of a thousand volumes. In the realm of music his services are precious beyond estimate. He is the father of the Karnatic system of music which stands unparalelled as the most evolved system of music in the world. His compositions range from the simplest svaravalis and gitas to the elaborate and complex Suladis. His synthesis of Sahityakshara and svara raga laya is the very acme of perfection. His language is poetic beyond description adorned with rich imagery and pithy sayings. His parables and allegorical utterances have all the fascination and depth of the scriptures. As a teacher of mankind inculcating the greatest truths of Hindu Dharma he is second to none. He pursued his gentle methods of instruction through the most attractive and congenial channels of music. India, nay the world has not produced a greater composer than Purandaradas. His eminence was so undisputed that all his contemporaries not excluding his own guru Sri Vyasaraya, have given him the highest praise and homage. Dasas who came after him have done nothing less than deify him as the special incarnation of Sri Narada. It is no disparagement even to Tyagaraja to say that his composi-

tions in the main furnished the inspiration for the latter's outpourings. It is learned on good authority that the mother of Tyagaraja was familiar with a large number of the kirtanas of Purandaradas and her frequent singing of them left such lasting impression on young Tyagaraja that in later life he found their influence irresistible in shaping his style in sangita and sahitya. Muthuswami Dikshitar though a composer with a distinctive original style of his own, was yet a faithful adherent to the tradition of Purandardas in the frequent use he has made of the Suladi sapta talas and in the shaping of melodic forms of antique ragas embodied in the devarnamas. A comparison of the archaic sancharas in familiar ragas of Dikshitar's compositions with corresponding pharses in the kirtanas of Purandaradas will reveal a remarkable identity. An examination of certain padas of Purandaradas side by side with those of Kshetragna will establish the closest affinity between them. Sri Vyasaraya the preceptor of Purandaradas was profoundly impressed with the greatness of his Sishya in so much that he paid his tribute in a kirtana in Kambhoji raga, Jampha tala beginning with "ದಾಸರೆಂದರೆ ಪುರಂದರ ದಾಸರಯ್ಯಾ..................." He discusses therein who is and who is not a dasa and concludes that only Purandaradas can be called a dasa.

Purandaradas has been justly termed the father of Carnatic music. He was not merely a composer, but a lakshanakara of the highest calibre. The system of South Indian Music as we now have it is entirely his gift. The separation of the northern from the southern system is more than a thousand years old. Without the

basis of regularised Lakshana both the phases continued nebulous for several centuries. It was the work of Purandaradas that imparted a distinct individuality to South Indian Music, which after labours of Venkatamakhi became even more pronounced. The North Indian phase not having had the benefit of any great master who combined in himself mastery of both science and art, has developed loosely unrelated to systematised basis, the continuity of tradition from Bharata having been lost. It is however just possible that the very absence of new systematic basis has enabled the northern system to retain some old melodic forms now lost to South Indian Music.

The first great change effected by Purandaradas was to introduce the Malavagaula scale as the basic scale for music instruction. The ancient suddha scale was Kharaharapriya. It was derived by the application of a Chatusruti interval to Shadja panchama and madhyama. Later the sruti values of the notes of the resultant scale were enumerated. In northern India as well as in South India the tradition of Bharata's system was forgotten. Ignoring that Bharata's scale started form shadja, the pandits of northern India treatted the note with reference to which the strutis of shadja were given, as the initial and basic note and arrived at the Sankarabharana or Bilaval scale. Purandaradas, however, adopted the Malavagaula scale as its derivation from Shadja panchama and madhyama was based on a process identical with the derivation of the ancient classic scale with this significant difference that in the derivation of a Dvisruti instead of a chatusruti interval was used. A Dvisruti interval is

beyond question easier to negotiate than a chatusruti interval. And that is the reason which underlies the selection of Malavagaula scale.

Not content with prescribing the scale, he framed a graded series of lessons which even today prevails in the teaching of music. The svaravalis, junte varisais, alankaras and gitas form the surest road to the mastery of Carnatic music with all its intricacies of svara and tala prastharas.

In the number of compositional types he created, he has no equal. In every one of them the same perfect commingling of sense, word and music is noticeable. He was a renowned composer of both lakshya and Lakshana gitas. It is unfortunate, however, that only a few lakshya gitas have been handed down to us. All his Lakshana gitas have to be unearthed. What a flood of light will they when made available throw on those problems that vex our conferences to-day ! It is learnt on good authority that he was a prolific composer of Tana varnas and Tillanas. It is stated that Adippa Iyah modelled his Tana varnas on those of Purandaradas. It is however the kirtana that forms the largest class of the compositions of Purandardas. The lakshanas of the kirtana its origin and development have already been referred to. The terms pada and devarnama used in the description of his compositions mean only kirtana. A great number of his kirtanas is in Madhyamakala. All the varieties of tala are used though chapu and jhampa talas are more favoured. It is significant, however, that as compared with his predecessors he employed the Adi tala in a

greater proportion. In this respect too Tyagaraja's affinity to Purandaradas is closer. The father of Carnatic music was equally facile in composing Chauka tala kirtanas. Some of his compositions contains the Nayaka-nayikabhava and but for the language they are quite apt to be fancied as Kshetragna's. There is no doubt that they served to inspire the compositions of the latter. In bhava, raga and tala they are the prototype for all Pada composers.

The type of composition which exhibits his extraordinary mastery of the technique of music is the Suladi. As to the exact meaning of the word "Suladi" authorities differ. But one interpretation not ordinarily familiar to the students of music treats the word as a corruption of "Sulu Hadi" meaning easy path which is as relevant to the attainment of bliss as proficiency in sangita. In the Suladi the theme is the same as in the Kirtana, but it has usually seven or eight distinct divisions with elaborate sahitya each of which is set to one of the classical talas. Some Suladis have different ragas for the different divisions, and in some others the raga is the same for all the divisions. The Suladi is a learned, elaborate and difficult piece giving a most comprehensive view of all the important raga sancharas. Sangita Saramrita of Tulajendra cites numerous prayogas from Suladis of Purandaradas as classic authority for lakshana of ragas described in the work. It is regretable that the tradition of rendering the Suladis is fast disappearing. A revival of interest in them would be of no small value for the future of the science and art of Karnatic music.

There is yet another type of composition of his known as Ugabhoga. The meaning of this term is again obscure. If an alternative to the classical interpretation may be offered the following may be considered viz; that the word is symbolical implying "conducive to the attainment of heavenly bliss." Ugabhoga is an extremely simple type of song undefined into parts and almost nebulous in structure. The tala is merely the sarva laghu and the simplest phases of the raga go to make up its music. It is as a musical form even more elementary than the gita. From the point of view of Bhava it is supposed to be a direct translation of the thoughts of the composer in the ecstasy of inspiration.

Purandaradas like his guru also composed what is known as Vritta nama. It is a composition in which padya and kirtana occur alternately. In other respects the kirtana part conforms to the common type.

It is usual to estimate a composer's contribution to Carnatic music; but what words can adequately convey the magnitude of the achievement of him who was the author and founder of that very system of which we are proud inheritors; who endowed and enriched it with hundreds of thousands of compositions;who nener sang but composed and never composed but sang; whose creations bearing the sad touch of humanity are of perenial interest to mankind. His place as Vaggeyakara and Lakshnakara is unique. He is to Carnatic music what Valmiki is for Sanskrit literature. He is a mighty personality the like of whom it takes the world a millennium to produce.

ತಾತ್ಪರ್ಯ:—ದೈವೀ ಸಂಪತ್ತು, ಕಲೆ, ಸಂಸ್ಕೃತಿ ಇವುಗಳೇ ಮೂರ್ತೀಭವಿಸಿಬಂತೆಂಬ ದೊಡ್ಡಸ್ತಿಕೆ ಪಡೆದವರಲ್ಲಿ ಅತ್ಯಂತ ದೊಡ್ಡವರೆನಿಸಿದವರು ಶ್ರೀ ಪುರಂದರ ದಾಸರು. ಅಗಣಿತೈಶ್ವರ್ಯದಿಂದ ನವಕೋಟಿ ನಾರಾಯಣನೆಂದು ಹೊಗಳಿಸಿಕೊಳ್ಳುತ್ತಿದ್ದ ಇವರು ಎಲ್ಲವನ್ನೂ ತ್ಯಜಿಸಿ ಹರಿದಾಸರಾಗಿ ಮಾಡಿದ ತ್ಯಾಗವು ಅಸಾಧಾರಣವಾದದ್ದು. ಸಂಗೀತ ಶಾಸ್ತ್ರಕ್ಕೆ ಇವರು ಮಾಡಿದ ಅಪಾರ ಸೇವೆ ಅಮೋಘವಾಗಿರುವುದು. ಸಂಖ್ಯಾ ದೃಷ್ಟಿಯಿಂದ ಇತರ ಎಲ್ಲಾ ವಾಗ್ಗೇಯಕಾರರ ಕೃತಿಗಳನ್ನೂ ಕೂಡಿಸಿ ಹೋಲಿಸಿದರೆ ಪುರಂದರ ದಾಸರ ಕೃತಿಗಳ ಏಕಾಂಶ ಸಹ ಆಗುತ್ತಿಲ್ಲ. ಸರಳ ಸ್ವರಾವಳಿ, ಉಕಾಭೋಗ, ಗೀತೆಗಳಿಂದ ಅನೇಕ ಚರಣಗಳುಳ್ಳ ದೇವರ ನಾಮ ಸುಳಾದಿಗಳ ತನಕ ಗಣಿಸಿದರೆ ದಾಸರ ಕೃತಿಗಳ ಸಂಖ್ಯೆ ನಾಲ್ಕೂ ಮುಕ್ಕಾಲು ಲಕ್ಷವೆಂದು ಅವರ ಮಕ್ಕಳೇ ಒಂದು ದೇವರ ನಾಮದಲ್ಲಿ ಹಾಡಿರುತ್ತಾರೆ. (ದುರ್ದೈವದಿಂದ ಇವೆಲ್ಲವೂ ವಿಜಯನಗರ ಸಾಮ್ರಾಜ್ಯದ ಜೊತೆಯಲ್ಲಿ ನಾಶವಾಗಿ ಈಗ ೨-೩ ಸಾವಿರದಷ್ಟು ಮಾತ್ರವಿದ್ದು ಅಷ್ಟು ಮಾತ್ರವೇ ಇಂದೂ ಆಶ್ಚರ್ಯವನ್ನುಂಟು ಮಾಡುತ್ತಿವೆ. ಗ್ರಂ.ಕ.) ಪುರಂದರ ದಾಸರ ಕೃತಿಗಳೆಲ್ಲಾ ಉಪಲಬ್ಧವಿದ್ದರೆ ಆ ಗ್ರಂಥ ರಾಶಿ ರಾಮಾಯಣ ಮಹಾಭಾರತಗಳಿಗಿಂತ ದೊಡ್ಡದಾಗಿ ಅನೇಕ ಪುಸ್ತಕಗಳಲ್ಲಿ ಬರೆದಿಡಬೇಕಾಗುತ್ತಿತ್ತು. ಪ್ರಪಂಚದ ವಿವಿಧ ಸಂಪ್ರದಾಯಗಳಲ್ಲಿ ಪರಿಪೂರ್ಣತೆಯ ಪರಮಾವಧಿಯನ್ನು ಪಡೆದಿರುವ ಕರ್ಣಾಟಕ ಸಂಗೀತ ಪದ್ಧತಿಗೆ ಜನ್ಮದಾತರೇ ಪುರಂದರ ದಾಸರು. ಸ್ವರ, ರಾಗ, ಲಯಗಳಿಗೆ ತಕ್ಕಂತೆ ಸಾಹಿತ್ಯಾಕ್ಷರಗಳನ್ನು ಜೋಡಿಸಿದ ಇವರ ಭಾಷೆ ವರ್ಣನಾತೀತವಾದ ಅಲಂಕಾರ ಮೊದಲಾದ ಕಾವ್ಯ ಸಂಪತ್ತಿನಿಂದ ಕೂಡಿ ಮನಮೋಹಕವಾಗಿರುತ್ತದೆ. ಹಿಂದೂ ಧರ್ಮದ ನಿತ್ಯ ತತ್ವಗಳನ್ನು ಉಪದೇಶಿಸುವುದರಲ್ಲಿ ಪುರಂದರ ದಾಸರು ಅದ್ವಿತೀಯರು. ದಾಸರು ತಮ್ಮ ಉಪದೇಶವನ್ನು ಚಿತ್ತಾಕರ್ಷಕವಾದ ಆಪ್ಯಾಯಮಾನವಾದ ಮಧುರ ಸಂಗೀತದ ಮೂಲಕ ಜನತೆಯಲ್ಲಿ ಹರಡಿದರು. ಪುರಂದರ ದಾಸರನ್ನು ಮೀರಿಸುವ ಅಥವಾ ಸರಿಗಟ್ಟುವ ವಾಗ್ಗೇಯಕಾರರು ಭರತಖಂಡದಲ್ಲಾಗಲಿ, ಇಡೀ ಪ್ರಪಂಚದಲ್ಲಾಗಲಿ, ಮತ್ತೊಬ್ಬರಾಗಲಿಲ್ಲ. ಪುರಂದರ ದಾಸರ ಸಮಕಾಲಿಕರಾಗಲಿ, ಅವರ ಗುರುಗಳಾದ ವ್ಯಾಸರಾಯರೇ ಆಗಲಿ, ಅನಂತರ

ಬಂದ ಹರಿದಾಸರಾಗಲಿ ಇವರನ್ನು ಏಕವಾಕ್ಯತೆಯಿಂದ ಕೊಂಡಾಡಿದರು ಮತ್ತು ದಾಸರನ್ನು ನಾರದ ಮಹರ್ಷಿಗಳ ಅವತಾರವೆಂದೇ ಸಾರಿದರು. ದಾಸರ ಕೃತಿಗಳನ್ನು ಕೇಳಿ ತಮ್ಮ ಮನಸ್ಸಿನ ಮೇಲಾದ ಪರಿಣಾಮದಿಂದ ವ್ಯಾಸರಾಯರಂಥಾ ದಾಸರ ಗುರುಗಳು "ದಾ ಸ ರೆ ೦ ದ ರೆ ಪುರಂದರ ದಾಸರಯ್ಯಾ" ಎಂದು ಹಾಡಿಬಿಟ್ಟರು. ತಾಯಿಯು ಹಾಡುತ್ತಿದ್ದ ಪುರಂದರ ದಾಸರ ದೇವರ ನಾಮಗಳನ್ನು ಕೇಳಿ ಕೇಳಿ ತ್ಯಾಗರಾಜರ ಮನಸ್ಸಿನ ಮೇಲಾದ ಪರಿಣಾಮವು ಅವರು ಅಷ್ಟು ದೊಡ್ಡ ವಾಗ್ಗೇಯಕಾರರಾಗಲು ಕಾರಣವಾಯಿತೆಂಬುವುದಕ್ಕೆ ಬಲವತ್ತರ ಪ್ರಮಾಣಗಳಿವೆ. ತಮ್ಮದೇ ಆದ ಹೊಸ ರೀತಿಯಲ್ಲಿ ಹಾಡಿದ ಮುತ್ತುಸ್ವಾಮಿ ದೀಕ್ಷಿತರು ಪುರಂದರ ದಾಸರ ಸುಳಾದಿಗಳ ತಾಳ ಕ್ರಮವನ್ನೂ ಕೀರ್ತನೆಗಳ ಶೈಲಿಯನ್ನೂ ಅನುಸರಿಸಿರುವುದು ಕಂಡುಬರುತ್ತದೆ. ಪದಗಳನ್ನು ಹಾಡುವುದರಲ್ಲಿ ಪ್ರಖ್ಯಾತನಾದ ಕ್ಷೇತ್ರಜ್ಞನು ಸಹ ಪು ರ ಂ ದ ರ ದಾಸರ ಪದಗಳ ಮಾದರಿಯನ್ನನುಸರಿಸಿ ಹಾಡಿರುವುದು ಕಂಡುಬರುತ್ತದೆ.

ಕರ್ಣಾಟಕ ಸಂಗೀತಕ್ಕೆ ಪುರಂದರ ದಾಸರು ತಂದೆಯ ಸ್ಥಾನದಲ್ಲಿರುವರೆಂಬುವುದು ಒಪ್ಪತಕ್ಕ ಮಾತು. ದಾಸರು ಪದಗಳನ್ನು ರಚಿಸಿ ಹಾಡಿದ ಕವಿಗಳು ಮಾತ್ರವಲ್ಲ. ಅವರು ಉತ್ತಮ ವರ್ಗದ ಲಕ್ಷಣಕಾರರು. ಈಗ ನಮ್ಮದೆಂದು ಹೆಸರಾಗಿರುವ ದಾಕ್ಷಿಣಾತ್ಯ ಸಂಗೀತ ಪದ್ಧತಿಯು ಸಂಪೂರ್ಣವಾಗಿ ಅವರ ಪ್ರಸಾದವಾಗಿರುತ್ತದೆ. ಉತ್ತರ ಭಾರತದ ಸಂಗೀತವು ದಕ್ಷಿಣ ಭಾರತದ ಸಂಗೀತದಿಂದ ಪ್ರತ್ಯೇಕವಾಗಿ ಒಂದು ಸಾವಿರ ವರ್ಷಗಳ ಮೇಲಾದವು. (?) ಕ್ರಮವಾದ ಲಕ್ಷಣ ಶಾಸ್ತ್ರದ ಸಂಸ್ಕಾರ ಸಹಾಯಗಳಿಲ್ಲದೆ ಎರಡು ಪದ್ಧತಿಗಳೂ ಅನೇಕ ಶತಮಾನಗಳ ಕಾಲ ಸರಿಯಾದ ರೂಪ ಪಡೆಯಲಾರದೆ ಅವ್ಯಕ್ತಾವಸ್ಥೆಯಲ್ಲಿದ್ದವು. ಹಾಗಿದ್ದ ದಾಕ್ಷಿಣಾತ್ಯ ಸಂಗೀತಕ್ಕೆ ಒಂದು ರೂಪ ಕೊಟ್ಟು ಪ್ರತಿಷ್ಠಿಸಿದವರು ಪುರಂದರ ದಾಸರು. ಅನಂತರ ವೆಂಕಟಮಖಿಯ ಪ್ರಯತ್ನದ ಫಲವಾಗಿ ಕರ್ಣಾಟಕ ಸಂಗೀತವು ಮತ್ತಷ್ಟು ಮುಂದುವರಿದು ಬೆಳಗುವಂತಾಯಿತು. ಹೀಗೆ ವಿಜ್ಞಾನ, ಕಲೆ ಈ ಎರಡರಲ್ಲಾ ನಿಪುಣರಾದ ಮಹಾತ್ಮರ ಸೇವಾ ಸುಯೋಗವು ಉತ್ತರ ಭಾರತಕ್ಕೆ ದೊರೆಯದಿದ್ದುದರಿಂದ, ಅಲ್ಲಿನ ಸಂಗೀತದ ಬೆಳವಣಿಗೆ ಸಡಿಲವಾಗಿ ಬಿಡಿಯಾಗಿ

ಆಯಿತು. ಭರತನ ಸಂಪ್ರದಾಯಕ್ಕೆ ವಿಚ್ಛಿತ್ತಿ ಬಂದಿತು. ಆದರೂ ಕೆಲವು ಹಳೆಯ ರಾಗಗಳ ರೀತಿಯು ದಾಕ್ಷಿಣಾತ್ಯ ಸಂಗೀತದಲ್ಲಿ ಉಳಿಯದೆ ಉತ್ತರ ಭಾರತದ ಸಂಗೀತದಲ್ಲುಳಿದು ಅದು ಕೆಲವಂಶದಿಂದ ಮಧುರವೆನಿಸಿತು.

ಪುರಂದರ ದಾಸರು ಸಂಗೀತದ ಅಭ್ಯಾಸ ಕ್ರಮವನ್ನು ಬದಲಾಯಿಸಿ ಮಾಳವ ಗೌಳದ ಮೇಳದಿಂದ ಪ್ರಾರಂಭಿಸಿದರು. ಷಡ್ಜ, ಮಧ್ಯಮ, ಪಂಚಮಗಳಿಗೆ ನಾಲ್ಕು ನಾಲ್ಕು ಶೃತಿಗಳ ಅಂತರವಿರುವ ಖರಹರ ಪ್ರಿಯ ರಾಗದಿಂದ ಅಭ್ಯಾಸ ಮಾಡುವುದು ಪೂರ್ವಪದ್ಧತಿಯಾಗಿತ್ತು. ಭರತನ ಮೂರ್ಛನೆಯ ನಿಯತ ಷಡ್ಜ ಶೃತಿಯಿಂದ ಅಭ್ಯಾಸದ ಪ್ರಾರಂಭವನ್ನು ಮಾಡುವುದನ್ನು ಮರೆತು ಉತ್ತರ ಭಾರತೀಯರು ಷಡ್ಜ ಸ್ವರವನ್ನು ಮೊದಲ ಶೃತಿಯಿಂದ ಗುಣಿಸಿ ಷಡ್ಜ, ಮಧ್ಯಮ, ಪಂಚಮಗಳಿಗೆ ನಾಲ್ಕು ನಾಲ್ಕು ಶೃತಿಗಳ ಅಂತರವಿಟ್ಟು ಅಭ್ಯಾಸ ಮಾಡಿದ ಕ್ರಮವು ಶಂಕರಾಭರಣ ಅಥವಾ ಬಿಲವಲ ರಾಗವಾಗಿಬಿಟ್ಟಿತು. ಪುರಂದರ ದಾಸರಾದರೋ—ಭರತನ ಧ್ಯೇಯ ದಲ್ಲಿ ದೃಷ್ಟಿಯಿಟ್ಟು ಅದೇ ಕ್ರಮದಲ್ಲಿ ಶೃತಿಗಳಿಗೆ ಸ್ವರಗಳನ್ನಿಟ್ಟು ಚತುಃ ಶ್ರುತಿಗೆ ಬದಲಾಗಿ ದ್ವಿಶೃತಿಗಳ ಅಂತರವಿರುವ ಸೌಲಭ್ಯವನ್ನು ಕಲ್ಪಿಸಿ ಮಾಳವ ಗೌಳದಿಂದ ಪಾಠಕ್ರಮವನ್ನು ಪ್ರಾರಂಭಿಸಿದರು. ಎಲ್ಲ ಬಗೆಯ ತೊಡಕು ಗಳಲ್ಲೂ ಜ್ಞಾನವನ್ನುಂಟು ಮಾಡುವ ಸ್ವರ, ತಾಳ ಪ್ರಸ್ತಾರಗಳನ್ನೊಳ ಗೊಂಡ—ಕರ್ಣಾಟಕ ಸಂಗೀತದಲ್ಲಿ ನೈಪುಣ್ಯವನ್ನು ಪಡೆಯಲು ಕಾರಣ ವಾಗಿರುವ—ಸ್ವರಾವಳಿಗಳು, ಜಂಟಿ ಸ್ವರಗಳು, ಅಲಂಕಾರಗಳು, ಗೀತೆ ಮೊದಲಾದವುಗಳೇ ಈ ಪಾಠ ಪದ್ಧತಿಯ ಕ್ರಮವು.

ದಾಸರು ರಚಿಸಿದ ಕೀರ್ತನೆಗಳೊಂದೊಂದರಲ್ಲೂ ಶಬ್ದ, ಅರ್ಥ, ಸಂಗೀತ ಈ ಮೂರೂ ಸಮರಸವಾಗಿ ಹೊಂದಿಕೊಂಡಿರುವ ಕೌಶಲ್ಯವು ಅಸಾಧಾರಣವಾಗಿರುವುದು. ದಾಸರು ರಚಿಸಿದ ಲಕ್ಷ್ಯ ಗೀತೆಗಳು ಕೆಲವು ಮಾತ್ರ ನಮಗೆ ದೊರೆತು ಲಕ್ಷಣ ಗೀತೆಗಳು ಇನ್ನೂ ದೊರೆಯದಿರುವುದು ದುರ್ದೈವದ ಸಂಗತಿಯಾಗಿರುವುದು. ಲಕ್ಷಣ ಗೀತೆಗಳು ನಮಗೆ ಇನ್ನಾದರೂ ದೊರೆತಲ್ಲಿ ನಮ್ಮ ಸಮ್ಮೇಲನಗಳಲ್ಲಿ ವಿವಾದಾಸ್ಪದವಾಗಿ ಕ್ಲೇಶವನ್ನುಂಟು ಮಾಡುತ್ತಿರುವ ಜಟಿಲ ಸಮಸ್ಯೆಗಳು ಪರಿಹಾರವಾಗಿ ನಮ್ಮ ತಿಳಿವಳಿಕೆಯು

ಉತ್ತಮಗೊಳ್ಳಬಹುದು. ತಾನವರ್ಣಗಳನ್ನೂ ತಿಲ್ಲಾನಗಳನ್ನೂ ದಾಸರು ರಚಿಸಿರುವುದು ಪ್ರಸಿದ್ಧವಾಗಿದ್ದರೂ, ಆದಿಯಪ್ಪ ಅಯ್ಯನು ತನ್ನ ತಾನವರ್ಣಗಳನ್ನು ಪುರಂದರ ದಾಸರ ಮಾದರಿಯನುಸರಿಸಿ ರಚಿಸಿರುವನೆಂಬುದಕ್ಕಿಂತ ಹೆಚ್ಚಿನ ಸಂಗತಿಗಳಾಗಲಿ ದಾಸರ ತಾನವರ್ಣ ತಿಲ್ಲಾನಗಳಾಗಲಿ ಈ ಕಾಲದಲ್ಲಿ ಉಪಲಬ್ಧವಿಲ್ಲ. ಪುರಂದರ ದಾಸರ ಕವಿತೆಗಳಲ್ಲಿ ಎಲ್ಲಕ್ಕಿಂತ ಕೀರ್ತನೆಗಳೇ ಬಹಳ. ಪದವೆಂದರೂ ದೇವರ ನಾಮವೆಂದರೂ ಕೀರ್ತನೆಗಳೆಂದೇ ಅರ್ಥ. ದಾಸರ ಬಹು ಭಾಗ ಕೀರ್ತನೆಗಳು ಮಧ್ಯಮ ಕಾಲದಲ್ಲಿವೆ. ಎಲ್ಲ ಬಗೆಯ ತಾಳಗಳಿದ್ದರೂ ಛಾಪು ಜಂಪತಾಳಗಳೇ ದಾಸರಿಗೆ ಪ್ರಿಯವಾಗಿದ್ದ ತಾಳಗಳೆಂದು ಕಂಡುಬರುತ್ತದೆ. ಪುರಂದರ ದಾಸರು ಹಿಂದಿನವರಿಗಿಂತ ಆದಿತಾಳವನ್ನು ಹೆಚ್ಚಾಗಿ ಉಪಯೋಗಿಸಿರುತ್ತಾರೆ. ಈ ಭಾಗದಲ್ಲಿಯೂ ಪುರಂದರ ದಾಸರ ಮಾರ್ಗವನ್ನು ತ್ಯಾಗರಾಜರು ಅನುಸರಿಸಿರುತ್ತಾರೆ. ಚೌಕ ತಾಳ ಕೀರ್ತನೆಗಳನ್ನು ರಚಿಸುವುದರಲ್ಲಿ ದಾಸರು ನಿಪುಣರಾಗಿದ್ದರು. ನಾಯಕ ನಾಯಕೀ ಭಾವವನ್ನು ತೋರಿಸುವುದರಲ್ಲಿ ಭಾಷೆಯೊಂದರ ವಿನಾ ದಾಸರಿಗೂ ಕ್ಷೇತ್ರಜ್ಞನಿಗೂ ವ್ಯತ್ಯಾಸ ಕಂಡುಬರುವದಿಲ್ಲ. ದಾಸರ ನಾಯಕ ನಾಯಕೀ ಭಾವದ ಕೀರ್ತನೆಗಳು ಕ್ಷೇತ್ರಜ್ಞನಿಗೆ ಮಾದರಿಯಾಗಿದ್ದಂತೆ ಎಲ್ಲ ವಾಗ್ಗೇಯಕಾರರಿಗೂ ಮಾದರಿಯಾಗಿವೆ.

ಪುರಂದರ ದಾಸರ ಸಂಗೀತ ವಿದ್ಯಾ ಪ್ರೌಢಿಮೆಯನ್ನು ಪ್ರಕಟಿಸುವ ಕವಿತೆಗಳೆಂದರೆ ಸುಳಾದಿಗಳು. ಸುಳುವಾದ ಹಾದಿ ಸುಳಾದಿಯೆಂಬುದಕ್ಕಿಂತ ಅರ್ಥದಲ್ಲಿ ಎಷ್ಟೇ ಭಿನ್ನಾಭಿಪ್ರಾಯವಿದ್ದರೂ ಬೇರೊಂದು ಸಮರ್ಪಕವಾದ ಅರ್ಥ ದೊರೆತಿಲ್ಲ. ಸಂಗೀತಕಾರರು ಈ ಅರ್ಥವನ್ನು ಅರಿತಿಲ್ಲ. ಆನಂದಾನುಭವಕ್ಕೆ ಸುಲಭ ಮಾರ್ಗವೆಂದು ಅರ್ಥಮಾಡಿಕೊಳ್ಳುವುದು ಬಹು ಸಮಂಜಸವಾಗಿದೆ. ಸುಳಾದಿಯ ನಡೆಯಾದರೂ ಕೀರ್ತಗಳ ನಡೆಯಂತೆಯೇ ಇದ್ದು ಪಲ್ಲವಿ, ಅನುಪಲ್ಲವಿಗಳಿಂದ ರಹಿತವಾಗಿರುತ್ತದೆ. ಸುಳಾದಿಯಲ್ಲಿ ಏಳೆಂಟು ಭಾಗಗಳಿದ್ದು ಪ್ರತಿ ಭಾಗಕ್ಕೂ ಪ್ರತ್ಯೇಕ ತಾಳಗಳಿರುತ್ತವೆ. ಕೆಲವು ಸುಳಾದಿಗಳ ಒಂದೊಂದು ತಾಳದ ಚರಣವನ್ನೂ ಒಂದೊಂದು ರಾಗದಲ್ಲೂ ಮಿಕ್ಕವನ್ನು ಬೇರೆಬೇರೇ ತಾಳಗಳಲ್ಲಿ ಒಂದೇ ರಾಗದಲ್ಲೂ ಹಾಡುವ ರೂಢಿಯಿದೆ.

ಸುಳಾದಿಯು ರಾಗದ ಸಂಚಾರವನ್ನು ತೋರಿಸುವ ಪ್ರೌಢವಾದ ಸಾಹಿತ್ಯವಾಗಿದೆ. ಅದರಲ್ಲಿ ಪಾಂಡಿತ್ಯವು ತುಂಬಿ ಸೂಸುತ್ತಿದೆ. ತುಳಜೇಂದ್ರ ಮಹಾರಾಜನು ತನ್ನ "ಸಂಗೀತ ಸಾರಾಮೃತೋದ್ಧಾರ" ದಲ್ಲಿ ವಿವರಿಸಿರುವ ರಾಗಗಳ ಲಕ್ಷಣಕ್ಕೆ ಪುರಂದರ ದಾಸರ ಸುಳಾದಿಗಳ ವಿವಿಧ ಪ್ರಯೋಗಗಳೇ ಆಧಾರವೆಂದು ಸ್ಪಷ್ಟವಾಗಿ ಉಲ್ಲೇಖ ಮಾಡಿರುತ್ತಾನೆ. ಸುಳಾದಿಗಳನ್ನು ಹಾಡುವ ಕ್ರಮವು ಮರೆತುಹೋಗುತ್ತಿರುವುದರಿಂದ ಅದರ ಪುನರುದ್ಧಾರ ಮಾಡುವುದರಿಂದ ಕರ್ಣಾಟಕ ಸಂಗೀತ ಶಾಸ್ತ್ರಕ್ಕೂ ಕಲೆಗೂ ಮಹೋಪಕಾರ ಮಾಡಿದಂತಾಗುತ್ತದೆ.

ಉಗಾಭೋಗವೆಂಬ ಹೆಸರಿನ ಮತ್ತೊಂದು ಬಗೆಯ ಸಂಗೀತ ಸಾಹಿತ್ಯವನ್ನು ಪುರಂದರ ದಾಸರು ರಚಿಸಿರುತ್ತಾರೆ. ಉಗಾಭೋಗ ಶಬ್ದಾರ್ಥವಾದರೂ ಸುಳಾದಿ ಶಬ್ದಾರ್ಥದಂತೆ ಚರ್ಚಾಸ್ಪದವಾಗಿರುತ್ತದೆ. "ಸ್ವರ್ಗೀಯ ಆನಂದವನ್ನು ಪಡೆಯುವುದಕ್ಕೆ ಸಹಕಾರಿ" ಎಂಬದಾಗಿ ಸಂಕೇತಾರ್ಥವನ್ನು ಸೂಚಿಸುವುದು ಎಂದರೆ ಅರ್ಥವು ಸಮಂಜಸವಾಗುತ್ತದೆ. ಉಗಾಭೋಗ ಗೀತೆಗಿಂತ ಸರಳ ತರಗತಿಯ ಸಂಗೀತ. ಹಾಡಿನಲ್ಲಿ ವೈವಿಧ್ಯವಿಲ್ಲದಂತೆ ಸರ್ವ ಲಘು ಗತಿಯಲ್ಲಿ ಯಾವ ರಾಗದಲ್ಲಿ ಬೇಕಾದರೂ ಹಾಡಬಹುದು. ಅರ್ಥದ ಭಾವವನ್ನೂ ಪರಿಶೀಲಿಸಿದರೆ ಪಾರವಶ್ಯ ಅಥವಾ ದೇವೋನ್ಮಾದ ಸ್ಥಿತಿಯಲ್ಲಿ ಹಾಡಿದ ಹಾಡೆಂದು ಗೋಚರವಾಗುತ್ತದೆ. ಪುರಂದರ ದಾಸರು ತಮ್ಮ ಗುರುಗಳಂತೆ ವೃತ್ತನಾಮಗಳನ್ನೂ ರಚಿಸಿರುತ್ತಾರೆ. ವೃತ್ತನಾಮದಲ್ಲಿ ಪಲ್ಲವಿಯನ್ನು ಹಾಡಿದನಂತರ ಒಂದು ವೃತ್ತ, ವೃತ್ತವಾಗುತ್ತಲೇ ಒಂದು ಚರಣ, ಈ ರೀತಿ ಇರುತ್ತದೆ.

ಕರ್ಣಾಟಕ ಸಂಗೀತ ಸಂಸ್ಕೃತಿಯ ಬೆಳವಣಿಗೆಗೆ ಯಾರು ಎಷ್ಟೆಷ್ಟು ಕೆಲಸ ಮಾಡಿರುವರೆಂದು ಬೆಲೆಯನ್ನು ಕಂಡುಹಿಡಿಯುವದೊಂದು ವಾಡಿಕೆ. ಆದರೆ ಯಾವ ನಿಧಿಯನ್ನು ಅನುಗ್ರಹರೂಪವಾಗಿ ನಮಗೆ ದಯಪಾಲಿಸಿರುವರೋ, ಅಂಥ ನಿಧಿಯ ನಿರ್ಮಾತರೂ, ಹಾಡಿದ್ದೇ ರಾಗ ಹೇಳಿದ್ದೇ ಕವಿತೆಯೆಂಬಂತೆ ಸಹಸ್ರಗಟ್ಟಳೆ ಕೃತಿಗಳನ್ನು ರಚಿಸಿ ಮಾನವತ್ವದ ಮುದ್ರೆಯೊತ್ತಿ ನಮಗೆ ಹೆಮ್ಮೆಯನ್ನುಂಟುಮಾಡಿಕೊಟ್ಟಿರುವರೋ ಅಂಥಾ ಪುರಂದರದಾಸರ

ಮಹೋಪಕಾರವನ್ನು ಮಾತುಗಳಿಂದ ವರ್ಣಿಸುವ ಬಗೆಹೇಗೆ? ಸಂಸ್ಕೃತ ಸಾಹಿತ್ಯಕ್ಕೆ ವಾಲ್ಮೀಕರು ಹೇಗೋ ಕರ್ಣಾಟಕ ಸಂಗೀತಕ್ಕೆ ಪುರಂದರ ದಾಸರು ಹಾಗೆ ಎಂಬ ಗೌರವವನ್ನು ಪಡೆದಿರುವವರು ಪುರಂದರ ದಾಸರು. ಇಂಥ ಮಹಾಪುರುಷರನ್ನು ಲಕ್ಷಲಕ್ಷ ವರ್ಷಗಳಿಗೊಮ್ಮೆ ಪಡೆಯುವುದು ಕಾಲದ ಭಾಗ್ಯ, ದೇಶದ ಭಾಗ್ಯ.

ಅಕ್ಯಾಡೆಮಿಯವರು ಬರೆದಿರುವ ಅನೇಕ ಸಂಗತಿಗಳು ಅಕ್ಷರಶಃ ಸತ್ಯ ವಾಗಿವೆ. ಹತ್ತು ವರ್ಷಗಳ ಹಿಂದೆ ಪ್ರಕಟವಾದ ಕರ್ಣಾಟಕ ಭಕ್ತವಿಜಯದಲ್ಲಿ ಬರೆದಿರುವುದನ್ನು ಅನುಸರಿಸಿರುವುದು ಮಾತ್ರವಲ್ಲದೆ ಸಂಗೀತ ಮೇಳ ವಿಷಯ ದಲ್ಲಿ ಮತ್ತಷ್ಟು ಶೋಧನೆಮಾಡಿ ಪುರಂದರ ದಾಸರ ಉಪಕಾರವನ್ನು ಸ್ಮರಿಸಿರು ತ್ತಾರೆ. ತುಲನಾತ್ಮಕ ದೃಷ್ಟಿಯಿಂದ ಕೆಲಕೆಲವು ಕೀರ್ತನೆಗಳ ಸಾಮ್ಯ ವೈಷಮ್ಯಗಳನ್ನು ಸ್ವರಸಹಿತ ಸಿದ್ಧಗೊಳಿಸಿದಾಗ ಮೇಲ್ಕಂಡ ಮಾಸ ಪತ್ರಿಕ ಯನ್ನು ಮಿತ್ರರು ತಂದು ತೋರಿಸಿದ್ದು, ಗ್ರಂಥವಿಸ್ತಾರ ಭಯ ಕಾಗದದ ಅಭಾವ ಭಯಗಳಿಂದ ಚಿಂತಿಸುತ್ತಿದ್ದ ನನಗೆ ಮಹೋಪಕಾರವಾಗಿದೆ. ಇಂಥ ಮಹತ್ಕಾರ್ಯವನ್ನು ಅಕ್ಯಾಡಮಿಯಂಥಾ ದೊಡ್ಡ ಸಂಸ್ಥೆಯವರು, ಮಾಡು ವುದೇ ಯೋಗ್ಯವೆಂದು ನನಗೆ ತೋರಿದೆ.

ಆದ್ದರಿಂದ ಆ ಭಾಗವನ್ನು ಅವರಿಗೆ ಬಿಡೋಣ! ಈ ಸಮಯದಲ್ಲಿ ಮತ್ತು ವರ್ತಮಾನ ಕಾಲದವರೆಗೆ ಹಿಂದುಸ್ತಾನಿ ಸಂಗೀತದ ಅಭ್ಯುದಯ ಹೇಗಾಗಿದೆ ಯೆಂಬುದನ್ನು ವಿಚಾರಿಸೋಣ!

ಕನ್ನಡ ನಾಡಿನ ಗೋಪಾಲನಾಯಕನೆಂಬ ವಾಗ್ಗೇಯಕಾರನು ಹಿಂದು ಸ್ತಾನಿ ಭಾಷೆಯಲ್ಲಿ ಕವಿತೆಮಾಡಿ ಆ ಸಂಗೀತ ಪದ್ಧತಿಗೆ ಆಚಾರ್ಯ ಪುರುಷ ನಾದನೆಂದು ಹಿಂದೆ ತಿಳಿಸಿದೆ. ತಾನಸೇನನ ಕಾಲದಲ್ಲಿ ಹಿಂದುಸ್ತಾನಿ ಸಂಗೀತವು ತನ್ನ ಪರಮಾವಧಿಯನ್ನು ಮುಟ್ಟಿತೆಂದು ಕೆಲವರು ಭಾವಿಸಿದ್ದಾರೆ. ಈ ಭಾವನೆಗೆ ಅಕ್ಬರ್ ಬಾದಷಹನ ಕಾಲದಲ್ಲಿ ನಡೆದ ರಾಗ ಪರೀಕ್ಷೆಯ ಒಂದು ಘಟನೆಯು ಕಾರಣವೆಂದು ಇತಿಹಾಸ ಲಿಖಿತ ಸಂಗತಿಯನ್ನು ತೋರಿಸುತ್ತಾರೆ. ಆ ಸಂಗತಿ "ಹಿಂದೂ ಸುಪೀರಿಯಾರಿಟಿ" ಎಂಬ ಗ್ರಂಥದಲ್ಲಿ

"It is recorded of Tansen that he was Commanded by the Emperor Akbar to sing Sree Ragam or night ragam at midday and the power of the music was such that it instantly became dark and the darkness extended in a circle round the palace as far as his Voice could be heard" ಎಂದು ವಿಟ್ಟೀ ಮಹಾಶಯನ ಮಾತನ್ನು ಉದ್ಧರಿಸಿ ಬರೆದಿದ್ದಾರೆ.

ತಾ|| ಚಕ್ರವರ್ತಿ ಅಕ್ಬರನು ತಾನಸೇನನೆಂಬ ವಾಗ್ಗೇಯಕಾರನನ್ನು ಕುರಿತು ಶ್ರೀರಾಗವನ್ನು ಹಾಡೆಂದು ಮಧ್ಯಾಹ್ನದಲ್ಲಿ ಆಜ್ಞೆ ಮಾಡಿದನು. ತಾನಸೇನನು ರಾತ್ರಿ ರಾಗವಾದ ಶ್ರೀರಾಗವನ್ನು ಮಧ್ಯಾಹ್ನದಲ್ಲಿ ಹಾಡಿದಾಗ ನಾದಪ್ರಭಾವದಿಂದ ಅರಮನೆಯಸುತ್ತಲ್ಲಿ ಅವನ ಗಾನ ಕೇಳುವವರೆಗಿನ ಪ್ರದೇಶದಲ್ಲಿ ದುಂಡಗೆ ಕತ್ತಲೆ ವ್ಯಾಪಿಸಿತು.

ಈ ಸಂಗತಿ ಇತಿಹಾಸ ಘಟಿತವಾಗಿದ್ದ ಮಾತ್ರಕ್ಕೆ ಗಾನವು ತನ್ನ ಪರಮಾವಧಿಯನ್ನು ಮುಟ್ಟಿತೆಂದು ಹೇಳಲು ಸಹಾಯಕವಾಗಿಲ್ಲ. ಕಲೆಯು ಬೆಳೆಯುವುದಕ್ಕೂ ವೈಯಕ್ತಿಕ ಸಿದ್ಧಿಗಳಿಗೂ ಸಂಬಂಧವಿರುವುದಿಲ್ಲ. ಹಿಂದುಸ್ಥಾನಿ ಗಾನ ಕಲೆಯು ವಿಕಾಸ ಹೊಂದಲು ಪ್ರಾರಂಭವಾದದ್ದು ತಾನಸೇನನ ಕಾಲದಲ್ಲಿ. ಆ ಕಾಲದಲ್ಲಿ ಉತ್ತರ ಭಾರತದಲ್ಲಿ ಧ್ರುವಪದ ಗಾಯನವು ಗಾನ ಪಾಂಡಿತ್ಯದ ಎಲ್ಲೆಯಾಗಿತ್ತು. ಸ್ಥಾಯಿಗಾನವು ಧ್ರುವಪದವನ್ನು ಮರೆಸಿತು. ಬೇಜುಬಾವರೆ ಯೆಂಬುವನು ಅನೇಕ ಲಕ್ಷಣ ಗೀತೆಗಳನ್ನು ಬರೆದು ಗಾನವನ್ನು ವಿಧಿಬದ್ಧ ಮಾಡಿದನು. ಗಾನದ ಮಾಧುರ್ಯ ವಿವಿಧ ಜಾತಿಗಳಲ್ಲಿ ದಿನದಿನಕ್ಕೆ ಬೆಳೆಯಿತು. ಬ್ರಿಜಭಾಷೆಯು ಗಾನ ಭಾಷೆಯಾಯಿತು. ಶಾಸ್ತ್ರೀಯ ಗಾನ ಬೆಳೆದಂತೆ ಅಶಾಸ್ತ್ರೀಯ ಗಜಲ್ ಕವಾಲಿಗಳೆಂಬ ವಕ್ರ ಮಾರ್ಗಗಳುದಿಸಿದವು ಪಂಡಿತರ ಮನ್ನಣೆಯಿಲ್ಲದೆ ಅದು ತಟಸ್ಥವಾಯಿತು. ಪರಂಪರೆಯಿಂದ ಬಂದ ಆರು ಪುರುಷ ರಾಗಗಳು ಮೂವತ್ತು ರಾಗಿಣಿಗಳು ಇವುಗಳಿಂದ ಜನ್ಯರಾಗಗಳ ಸಂಖ್ಯೆ ನೂರನಲವತ್ತಕ್ಕೇರಿತು. ಆಚರಣೆಯಲ್ಲಿ ಐವತ್ತು ಸಾಮಾನ್ಯ ರಾಗಗಳೂ ಐವತ್ತು ಅಪರೂಪ ರಾಗಗಳೂ ಉಳಿದುಕೊಂಡುವು. ಇವು ಪ್ರಾಚೀನ

ಕಾಲದಿಂದ ಬಂದ ಕಾರಣ-ಶ್ರವಣ ಮಧುರವಾಗಿರುವ ಕಾರಣ-ಯಾವ ದೇಶ ದಲ್ಲೂ ಮನ್ನಣೆಯನ್ನು ಪಡೆದವು. ಹಿಂದುಸ್ತಾನಿ ಗಾಯನದ ಉತ್ಕರ್ಷ ಹದಿನೆಂಟನೇ ಶತಮಾನದಿಂದ ಹತ್ತೊಂಭತ್ತರ ಪೂರ್ವಾರ್ಧದವರೆಗಾಯಿತು. ಈ ಕಾಲ ದಕ್ಷಿಣ ಭಾರತದಲ್ಲಿ ತ್ಯಾಗರಾಜರ, ಮುತ್ತುಸ್ವಾಮಿ ದೀಕ್ಷಿತರ, ಶಾಮಶಾಸ್ತ್ರಿಗಳ ಕಾಲ. ಅಂದರೆ ಒಂದೊಂದೂ ತನ್ನ ರೀತಿಯಲ್ಲಿ ಏಕಕಾಲ ದಲ್ಲಿ ಬೆಳೆದಕಾಲ.

ಸಾರಾಂಶ:—ಭರತಮುನಿಯ ಕಾಲದಿಂದ ಎರಡು ಸಾವಿರ ವರ್ಷಗಳ ಪರವಾವಧಿಯಲ್ಲಿ ಒಂದೂವರೆ ಸಾವಿರ ವರ್ಷಗಳಷ್ಟುಕಾಲ ಒಂದೇ ಸಂಪ್ರ ದಾಯದಲ್ಲಿದ್ದ ಗಾನ ಕ್ರಮವು ಕ್ರಮವಾಗಿ ಬದಲಾಗುತ್ತ ಬಂತು. ವಿವಿಧ ಶಾಸ್ತ್ರಕಾರರು ದಕ್ಷಿಣ ಭಾರತದಲ್ಲಿ ಜನಿಸಿ ಭರತನ ಹೆಸರು ಹೇಳುತ್ತಲೇ ತಮ್ಮ ತಮ್ಮ ಮತಗಳನ್ನು ಸ್ಥಾಪಿಸಿದರು. ಹದಿನೇಳನೇ ಶತಮಾನದಲ್ಲಿ ಹಿಂದುಸ್ತಾನಿ ಕರ್ಣಾಟಕಿ ಎಂಬ ದೊಡ್ಡ ಭೇದಗಳು ಎದ್ದು ಕಾಣಿಸಿದುವು. ವೆಂಕಟಮಖಿಯ ಕಾಲದಿಂದ ಬಂದ ವಾಗ್ಗೇಯಕಾರರು ರಾಗಗಳ ಸಂಖ್ಯೆಯನ್ನು ಬೆಳೆಸಿದರು. ಮೂರುನಾಲ್ಕು ಸ್ವರಗಳಿಂದ ಹುಟ್ಟಿದ ರಾಗಗಳು ರುಚಿಸದಂತಾದುವು. ಲಯ ತಾಳಗಳ ಪ್ರಾಧಾನ್ಯತೆ ಹೆಚ್ಚಿ ಸ್ವರರಾಗಗಳ ಮಾಧುರ್ಯ ಕಡಮೆಯಾಯಿತು. ಒಂದು ಕಾಲದಲ್ಲಿ ಭರತಖಂಡದ ಆದ್ಯಂತ ಅಭಿರುಚಿಯನ್ನುಂಟುಮಾಡುತ್ತಿದ್ದ ದಾಕ್ಷಿಣಾತ್ಯ ಗಾಯನವು ತುಂಗಭದ್ರೆಯನ್ನು ದಾಟದಂತಾಯಿತು. ಹಿಂದು ಸ್ತಾನಿ ಗಾಯನವು ಎಷ್ಟೆಷ್ಟು ಸಡಿಲವಾಗಿದ್ದರೂ ಎಲ್ಲಿದ್ದರೂ ಕೇಳಬೇಕೆಂಬ ಆಸೆ ಜನತೆಯಲ್ಲಿ ಬೆಳೆಯಿತು.

ಊಟದಲ್ಲಿ ಬೇಕಾಗಿರುವುದು ರುಚಿ. ಪರಿಕರಗಳ ಅಳತೆಯಲ್ಲ. ಹಾಗೆ ಗಾನದಲ್ಲಿರುವುದು ಮಾಧುರ್ಯ ; ಕಟ್ಟುಕಟ್ಟಲೆಗಳಲ್ಲ.

ದಿವಂಗತ ರವೀಂದ್ರರ ದರ್ಶನಮಾಡಿದಾಗ Have you got anything like Kabir's songs in your language?(ನಿಮ್ಮ ಭಾಷೆ ಯಲ್ಲಿ ಕಬೀರನ ಹಾಡುಗಳಂಥಾ ಹಾಡುಗಳಿವೆಯೇ?) ಎಂದು ಕೇಳಿದರು. Even better ones from Purandara (ಇನ್ನೂ ಉತ್ತಮವಾದ

ಪುರಂದರ ದಾಸರ ಕೀರ್ತನೆಗಳಿವೆ) ಎಂದು ನಾನು ಹೇಳಿದೆ. Oh why not you translate them into English ? (ಇಂಗ್ಲೀಷಿಗೇಕೆ ಭಾಷಾಂತರ ಮಾಡಬಾರದು ?) ಎಂದರು. ನಾನು ಗೌರವಪೂರ್ವಕವಾಗಿ ಇಂಗ್ಲೀಷಿಗೆ ಕಬೀರನ ಹಾಡುಗಳನ್ನು ಭಾಷಾಂತರ ಮಾಡಿರುವಿರಲ್ಲಾ ! ಆದರೆ........ಎಂದೆ. ಠಾಕೂರರು, after all it is a translation (ಏನಿದ್ದರೂ ಅದು ಭಾಷಾಂತರ) ಎಂದರು. ಸ್ವಲ್ಪ ಹೊತ್ತು ಮೌನ ! ಅನಂತರ ಸಂಗೀತ ಶಾಸ್ತ್ರದ ಮಾತು ಬಂತು. ಕರ್ಣಾಟಕ ಸಂಗೀತದ ಮಾತು ಪ್ರಧಾನವಾಯಿತು. ನಮ್ಮ ದೇಶದ ಪ್ರಸಿದ್ಧ ಗಾಯಕರ ಹೆಸರು ಹೇಳಿದೆ. ಅವರ ಸ್ವರ ಕಲ್ಪನಾ ಚಾತರ್ಯವನ್ನು ವರ್ಣಿಸಿದೆ. ಸರಿ ಸಂತೋಷ ! ಆ ಗಾಯಕರಲ್ಲಿ ಶೃತಿಗೆ ಸೇರಿ ಹಾಡುವವರೆಷ್ಟು ಜನ ? ಸ್ವರಗಳನ್ನು ಸ್ವರ ಸ್ಥಾನದಲ್ಲಿ ಉಚ್ಚರಿಸುವವರೆಷ್ಟು ಜನ ? ಅದು ತಿಳಿದಿದೆಯೆ ? ಎಂದರು. ಇವರಿಗೇಕೋ ಕರ್ಣಾಟಕ ಸಂಗೀತದಲ್ಲಿ ವಿಶ್ವಾಸವಿಲ್ಲವೆಂದುಕೊಂಡೆ. ಸಾಯಂಕಾಲ ದಿವಾನ ರಂಗಾಚಾರ್ಯರ ಸ್ಮಾರಕ ಮಂದಿರದಲ್ಲಿ ಕವೀಂದ್ರರ ವ್ಯಾಖ್ಯಾನವಾಯಿತು. ಎದುರಿಗೆ ಮೊದಲ ಸಾಲಿನಲ್ಲಿ ಕುಳಿತೆ. ಜನರು ಬಲವಂತಪಡಿಸಿದ ಮೇಲೆ ಠಾಕೂರರು ಒಂದು ಹಾಡು ಹಾಡಿದರು. ಆ ಕಂಠಮಾಧುರ್ಯ! ಆ ವೈಶಾಲ್ಯ! ಆ ಪರಿಪೂರ್ಣತೆ ! ಆ ಭಾಷಾಮಾರ್ದವ ! ಒಂದೊಂದೂ ನನ್ನ ಮನಸ್ಸನ್ನು ಬದಲಾಯಿಸಿದುವು. ನನ್ನ ಸಿಟ್ಟಿಳಿಯಿತು. ಇದ್ದರೆ ಹೀಗಿರಬೇಕು ಸಂಗೀತ ಅಂದುಕೊಂಡೆ. ವಿಶ್ವಕವಿಗಳದು ತಪ್ಪಿರಬಹುದು. ನಾನು ತಿಳಿದದ್ದೇ ಸರಿ ಇರಬಹುದು. ಆದರೆ ಪುರಂದರ ದಾಸರ, ತ್ಯಾಗರಾಜರ, ಪರಂಪರೆಯವರಿಗೆ ಇಷ್ಟು ಮಾತ್ರ ಕಳಂಕವಾದರೂ ಏಕೆ, ಎಂಬುದು ನನ್ನ ಪ್ರಶ್ನೆ.

ಪುರಂದರ ದಾಸರ ಕಾಲದಲ್ಲಿ ಸಂಗೀತ ಈ ಸ್ಥಿತಿಯಲ್ಲಿರಲಿಲ್ಲ. ಸಂಗೀತ ಪ್ರವೃತ್ತಿಯುಳ್ಳವರು ದಾಕ್ಷಿಣಾತ್ಯರೆಂದು ಭರತನು ಉಲ್ಲೇಖಿಸಿದುದಕ್ಕೆ ತಕ್ಕಂತೆ ಅವರು ಗಾನ ಪದ್ಧತಿಗೆ ಆಚಾರ್ಯರೆನಿಸಿದ್ದರು. ವಿಜಯನಗರ ಸಾಮ್ರಾಜ್ಯ ಪ್ರಭಾವದಿಂದ ಕೃಷ್ಣಾನದಿಯ ದಕ್ಷಿಣ ಪ್ರಾಂತ್ಯ ಒಟ್ಟು ಕರ್ಣಾಟಕವೆಂದೇ ಕರೆಸಿಕೊಂಡಿತ್ತು. ಉತ್ತರ ಭಾರತವನ್ನು ಜೈಸಿ ಆಳಿದ ಚಕ್ರವರ್ತಿಗಳು ಭರತಖಂಡವನ್ನು ಹಿಂದುಸ್ಥಾನ, ಕರ್ಣಾಟಕ ಎಂದು ಎರಡೇ ಭಾಗ

ಮಾಡಿ ಕರೆದಿದ್ದರು. ಕನ್ನಡ ಮಾತನ್ನಾಡುವ ಜನರ ರಾಷ್ಟ್ರ ಮಾತ್ರ ಕರ್ಣಾಟಕ ವೆಂಬ ಸಂಕುಚಿತ ಭಾವನೆಯಿರಲಿಲ್ಲ ಒಂದೇ ಕುಲದವರಾದ ಕನ್ನಡಿಗರಲ್ಲಿ ತಮಿಳರಲ್ಲಿ ತೆಲುಗರಲ್ಲಿ ಪ್ರತ್ಯೇಕತೆ ಹುಟ್ಟಿರಲಿಲ್ಲ. ಒಂದು ಭಾಷಾ ಸಂಸ್ಕೃತಿ ಮತ್ತೊಂದಕ್ಕೆ ಸಹಾಯಕವಾಗಿತ್ತು. ಬ್ರಿಜಭಾಷಾ ಸಾಹಿತ್ಯವುಳ್ಳ ಸಂಗೀತ ವನ್ನು ಪಂಜಾಬಿಗಳು, ರಾಜಸ್ಥಾನಿಗಳು, ಬಂಗಾಳಿಗಳು, ಉಪಯೋಗಿಸುತ್ತಿರು ವಂತೆ ಕನ್ನಡ ಭಾಷಾ ಸಾಹಿತ್ಯವುಳ್ಳ ಸಂಗೀತವನ್ನು ಆಂಧ್ರರೂ ತಮಿಳರೂ ಉಪಯೋಗಿಸುತ್ತಿದ್ದರು. ಸೋದರ ಭಾಷೆಗಳಾಗಿದ್ದುದರಿಂದ ಅರ್ಥಮಾಡಿ ಕೊಳ್ಳಲು ಕಷ್ಟವಾಗಿರಲಿಲ್ಲ. ವಕ್ರ ರಾಗಗಳ ಸಂಖ್ಯೆ ಬೆಳೆದಿರಲಿಲ್ಲ. ಮಾತು ಗಳಿಗಿಂತ ನಾದ ಪ್ರಧಾನವಾಗಿದ್ದುದರಿಂದ ಸಂಗೀತ ಲೋಕ ಪ್ರಿಯವಾಗಿತ್ತು. ಕರ್ಣಾಟಕ ಗಾಯನ ಹಿಂದುಸ್ಥಾನದಲ್ಲೂ ಹಿಂದುಸ್ಥಾನೀ ಗಾಯನ ಕರ್ಣಾಟಕ ದಲ್ಲೂ ಸಮಸಮವಾಗಿ ಅಭಿರುಚಿಯನ್ನುಂಟುಮಾಡುತ್ತಿದ್ದುವು. ಮಾಂಡಲಿಕ ರಾಜರೊಬ್ಬೊಬ್ಬರೂ ಸಂಗೀತ ಸಾಹಿತ್ಯ ವಿಶಾರದರಾಗಿದ್ದರು. ಲಕ್ಷಣಕ್ಕೆ ಅನು ಗುಣವಾಗಿ ಲಕ್ಷ್ಯವಿರಬೇಕೆಂಬ ಭೀತಿ ಗಾಯಕರಿಗಿತ್ತು. ಹೀಗಿದ್ದುದರಿಂದ ಪುರಂದರ ದಾಸರ ಗಾನ ಪ್ರಚಾರ ಧರ್ಮ ಪ್ರಚಾರ ಕಾರ್ಯಗಳು ಸುಗಮವಾಗಿ ನಡೆದವು. ದಕ್ಷಿಣ ಭಾರತಕ್ಕೆ ಪುರಂದರ ದಾಸರು ಪ್ರಥಮ ಗಾಯನಾಚಾರ್ಯ ರಾದರು. ದಾಸರ ಹಾಡು ಮನೆಮನೆಗಳಲ್ಲಿ ವ್ಯಾಪಿಸಿತು.

ಪುರಂದರ ದಾಸರ ಕಾಲಕ್ಕೆ ಮುಂಚೆ ಸಂಗೀತ ಶಿಕ್ಷಣ ಕ್ರಮ ವ್ಯವಸ್ಥಿತ ವಾಗಿರಲಿಲ್ಲ. ಕೀರ್ತನೆಗಳ ಜೊತೆಯಲ್ಲಾಗಲಿ ಧ್ರುವಪದದಲ್ಲಾಗಲಿ ಸ್ವರ ಕಲ್ಪನೆ ಮಾಡುವ ರೂಢಿ ಇರಲಿಲ್ಲ. ಭರತ ಶಾರ್ಙದೇವಾದಿಗಳ ಜಾತಿ ವಿನ್ಯಾಸ ವಿಧಾನವರಿತು ಆಲಾಪನೆ ಮಾಡುವುದು, ಘನವನ್ನು ಹಾಡುವುದು, ಗುಡುಗುವುದು, ಮಧ್ಯಮಕಾಲದಲ್ಲಿ ರಾಗದ ಸೌಕುಮಾರ್ಯವನ್ನು ತೋರಿಸು ವುದು, ಆಭೋಗ ಕ್ರಮದಂತೆ ರಾಗ ಸಮಾರೋಪಣೆ ಮಾಡುವುದು, ಚಿಕ್ಕ ದೊಂದು ಲಲಿತ ವಾಕ್ಯವನ್ನು ಭಾಷೆಯಿಂದಾರಿಸಿಕೊಂಡು ಒಂದರಿಂದ ಆರು ಕಾಲದವರೆಗೆ ಪಲ್ಲವಿ ಹಾಡುವುದು, ಆಕಾರದಿಂದ ತಾನ ಹೊಡೆಯುವುದು; ಇದು ಪದ್ಧತಿಯಾಗಿತ್ತು. ವೇದೋಪನಿಷತ್ತುಗಳಿಂದ ಒಂದು ವಾಕ್ಯವನ್ನಾರಿಸಿ ಪಲ್ಲವಿಯನ್ನು ಹಾಡಿಬಿಟ್ಟರೆ ವೇದವೇತ್ತರು ಅದನ್ನು ವೈದಿಕ ಗಾನವೆಂದು ಕೊಂಡಾಡುತ್ತಿದ್ದರು. ಆಗ "ತತ್ವಮಸಿ" ಯನ್ನು ಪಲ್ಲವಿಯಾಗಿ ಹಾಡುವ

ಕೊಥಿ ಎಷ್ಟು ಪ್ರಬಲವಾಗಿತ್ತೆಂಬುದಕ್ಕೆ ಶಂಕರಾಚಾರ್ಯರ ಕಾಲದಲ್ಲಿ ಪದ್ಮ ಪಾದರು ಅಮರುಕನ ರಾಜಧಾನಿಯಲ್ಲಿ "ತತ್ವಮಸಿ ತತ್ವಮಸಿ ತತ್ವಮಸಿ" ಎಂದು ಹಾಡುತ್ತ ರಾಜಸಭಾ ಪ್ರವೇಶ ಮಾಡಿದ ಐತಿಹಾಸಿಕ ಕಥೆಗಿಂತ ಹೆಚ್ಚಿನ ಪ್ರಮಾಣ ಬೇಕಾಗಿಲ್ಲ.

ದಿನದಿನಕ್ಕೆ ಸಂಗೀತ ವಿದ್ಯೆ ಬೆಳೆಯಿತು. ವಿಚಾರ ಹೆಚ್ಚಿತು. ಆಡಿದ ಮಾತಿಗೆ ಹಾಡಿದ ರಾಗಕ್ಕೆ ಹೊಡೆದ ತಾನಕ್ಕೆ ಸ್ವರಗಳನ್ನೇ ಹಾಡಿ ತೋರಿಸ ಬೇಕಾಯಿತು. ಕಾಲದ ಅವಶ್ಯಕತೆಗೆ ತಕ್ಕಂತೆ ಪುರಂದರ ದಾಸರು ಬಂದರು. ಹಳೇಮನೆಯನ್ನೊಡೆದು ಅದೇ ಸಾಮಾನುಗಳಿಂದ ಭವ್ಯ ಮಂದಿರವನ್ನು ಕಟ್ಟಿ ವಂತೆ ಮೊದಲಿನಿಂದ ಪಾಠಕ್ರಮವನ್ನು ಬದಲಾಯಿಸಿದರು. ಸ್ವರಾವಳಿ, ಜಂಟಿ ಸ್ವರ, ಅಲಂಕಾರ, ಗೀತೆ, ಉಗಾಭೋಗ, ಸ್ವರಜತಿ, ವರ್ಣ, ಕೀರ್ತನೆ, ಸುಳಾದಿಗಳೆಂಬ ಅಭ್ಯಾಸ ಕ್ರಮವನ್ನೇರ್ಪಡಿಸಿದರು. ಎಲ್ಲ ಸುಧಾರಣೆಗಿಂತ ಖರಹರಪ್ರಿಯದಲ್ಲಿದ್ದ ಪ್ರಥಮಾಭ್ಯಾಸವನ್ನು ಮಾ ಳ ವ ಗೌ ಳ ಮೇಳ ದಿಂದಾರಂಭಿಸಿದ್ದು ದೊಡ್ಡ ಸುಧಾರಣೆಯಾಯಿತು.

ದಾಸರು ಹಾಕಿಕೊಟ್ಟ ಪಾಠಕ್ರಮದಲ್ಲಿ ಸರಳೆ, ಜಂಟಿಸ್ವರ, ಅಲಂಕಾರ, ಮತ್ತು ಮಲಹರಿ ರಾಗದ ಐದು ಗೀತೆಗಳ ಅಭ್ಯಾಸ ಮಾಡುವುದರ ವಿನಾ ಮಿಕ್ಕವು ಈ ಕಾಲದಲ್ಲಿ ಮಾಯವಾಗಿವೆ. ಆಂಧ್ರ ತಮಿಳು ನಾಡುಗಳಲ್ಲಿ ಕನ್ನಡ ಸಾಹಿತ್ಯ ಅರ್ಥವಾಗಲಿಲ್ಲವೆಂದೂ ಅದರ ಸ್ಥಾನದಲ್ಲಿ ತಾವೇ ಬೇರೆಯ ದನ್ನು ಮಾಡಿಕೊಂಡೆವೆಂದೂ ಬಿಟ್ಟಿದ್ದರೆ ತಪ್ಪಲ್ಲ. ಕನ್ನಡ ರಾಜರಾಳುವ ಮೈಸೂರಿನಂಥ ಆದರ್ಶ ಸಂಸ್ಥಾನದಲ್ಲಿ ಒಂದು ಶತಮಾನದಿಂದ ದಕ್ಷಿಣ ದೇಶ ದ್ದಿಂದ ಬರುತ್ತಿರುವ ಕೀರ್ತನೆಗಳ ಅಭ್ಯಾಸ ಸಡಗರದಲ್ಲಿ ವಾಗ್ಗೇಯಕಾರರು ಲೋಕಕ್ಕೇ ಆದರ್ಶದಂತಿದ್ದ ಆ ಲಕ್ಷಣ ಗೀತೆಗಳು, ಸ್ವರಜತಿಗಳು, ತಾನ ವರ್ಣಗಳು, ತಿಲ್ಲಾನ ಮೊದಲಾದವುಗಳನ್ನು ಕಳೆದುಕೊಂಡಿರುವುದು ಅಕ್ಷಮ್ಯ ವಾದ ಅಪರಾಧವಾಗಿದೆ. ಯಾಪ ಗೊತ್ತಿಲ್ಲದ ದಿವಸದಿಂದ ಹರಿದಾಸರು ಬೇರೆ, ಸಂಗೀತಗಾರರು ಬೇರೆ, ಎಂದು ಸಂಗೀತ ಭಾಗವನ್ನು ವಾಗ್ಗೇಯಕಾರರಿಗೆ ಬಿಟ್ಟು ಸಾಹಿತ್ಯ ಭಾಗವನ್ನು ಹರಿದಾಸ ನಾಮಧೇಯರು ತೆಗೆದುಕೊಂಡು ಮಡಿಮಡಿ ಯಾಗಿ ಕುಳಿತರೋ, ಅಂದೇ ಕರ್ಣಾಟಕ ಸಂಗೀತದ ಸರ್ವನಾಶವಾಯಿತು.

ದಕ್ಷಿಣ ಭಾರತದಿಂದ ಹೊಸಹೊಸದಾಗಿ ಬರುತ್ತಿದ್ದ ತೆಲುಗು ಕೀರ್ತನೆಗಳನ್ನು ಕೇಳಿದ ಮೈಸೂರಿನ ವಾಗ್ಗೇಯಕಾರರಲ್ಲಿ ಅತಿಗಣ್ಯರಾದ ಸದಾಶಿವರಾಯರಂಥ ವರಿಗೂ ಮನೆಯ ಮಾತು ಮರಾಟಿಯಾಗಿದ್ದರೂ ದೇಶದ ಮಾತು ಕನ್ನಡ ವಾಗಿದ್ದರೂ ತೆಲುಗಿನಲ್ಲಿ ಕೀರ್ತನೆ ಮಾಡಬೇಕೆಂಬ ಮೋಹ ಬಿಡಲಿಲ್ಲ. ಇದ ರಿಂದ ಸಂಗೀತಕ್ಕೆ ತೆಲುಗು ಭಾಷೆಯೇ ಚೆಂದ, ತೆಲುಗೇ ಸಂಗೀತ, ಎಂಬ ಪರಿಣಾಮ ಸಮಾಜದ ಮೇಲಾಯಿತು. ವಾಗ್ಗೇಯಕಾರರೊಬ್ಬೊಬ್ಬರೂ ವರ್ಣಗಳನ್ನು ರಚಿಸಲಿ, ಮಹಾರಾಜರ ಮೇಲೆ ತಿಲ್ಲಾನಗಳನ್ನು ಹಾಡಲಿ, ಎಲ್ಲಕ್ಕೂ ತೆಲುಗು ಸಾಹಿತ್ಯವನ್ನೇ ತಮಗೆ ಬರದಿದ್ದರೂ ಕಂಡವರಿಂದ ಬರೆಸಿ ಹಾಡುವ ಪರಿಪಾಠವಾಯಿತು. ಕನ್ನಡ ದಾಸ ಸಾಹಿತ್ಯಕ್ಕೆ ದೊಡ್ಡ ಧಕ್ಕೆ ಬಡಿಯಿತು. ಹರಿದಾಸರು ಇವೆಲ್ಲವನ್ನೂ ನೋಡುತ್ತ ರಸಗತ ಭಗವದ್ರೂಪಗಳ ಚಿಂತನೆಯಲ್ಲಿದ್ದರು. ಸುರಪುರದ ಆನಂದ ದಾಸರಂಥ ವೈಣಿಕರೂ, ಕರ್ಣಾಟಕ ಹಿಂದುಸ್ತಾನೀ ಗಾಯನ ನಿಪುಣರೂ, ಮುಮ್ಮಡಿ ಕೃಷ್ಣರಾಜ ಪ್ರಭುಗಳಿಂದ ಕನಕಾಭಿಷೇಕ ಮಾಡಿಸಿಕೊಂಡ ಕೀರ್ತನ ಧುರೀಣರೂ, ಕನ್ನಡ ಸಂಗೀತವನ್ನು ಹಾಡಿ ಆಶ್ಚರ್ಯಪಡಿಸಿದ್ದರ ಪರಿಣಾಮ ಕಾರ್ಯರೂಪಕ್ಕೆ ಬರಲಿಲ್ಲ.

ಕಳೆದುಹೋದುದಕ್ಕಾಗಿ ವ್ಯಸನವನ್ನು ಸ್ವಲ್ಪ ಮರೆಯೋಣ! ಉಗಾ ಭೋಗ ಮತ್ತು ಸುಳಾದಿಗಳ ಅವಶಿಷ್ಟ ಮಾದರಿಗಳನ್ನು ಮುಂದಿನ ಸಾಧಕರಿ ಗಾಗಿ ಕೊಡೋಣ!

## ಉಗಾಭೋಗಗಳು

ಸ್ವರಸಹಿತ ಕೊಟ್ಟಿರುವ ಈ ಎರಡು ಉಗಾಭೋಗಗಳು ಭಜನ ಕೀರ್ತನಗಳ ಆದ್ಯಂತ ಸಮಯಗಳಲ್ಲಿ ಹಾಡತಕ್ಕವುಗಳು. ಸಂಪ್ರದಾಯಜ್ಞ ರೆಂದು ಹಾಡುವವರು ಸಹ ಸಾಹಿತ್ಯವನ್ನು ಮಾತ್ರ ತೆಗೆದುಕೊಂಡು ತಮಗೆ ತೋರಿದಂತೆ ಹಾಡುತ್ತಿರುವುದು ಎಲ್ಲೆಲ್ಲೂ ಕಂಡು ಬರುತ್ತಿದೆ. ಮಾಡಿದವರು ಯಾವ ಭಾವಾವೇಶದಿಂದ ಯಾವ ರಾಗ ತಾಳಗಳಲ್ಲಿ ಹಾಡಿದರೋ ಹಾಗೆ ಹಾಡುವುದೇ ನ್ಯಾಯ ಸಮ್ಮತ. ಪುರಂದರ ದಾಸರ ಶಿಷ್ಯರು ವಿಜಯದಾಸರ ಕಾಲದಿಂದ ವಿಚ್ಛೇದವಿಲ್ಲದೆ ಅದೇ ಪರಂಪರೆಯಲ್ಲಿ ನಾಲ್ಕು ತಲೆಮಾರು ಗಳಿಂದ ಲೇಖಕನೂ ಆಸ್ಥಾನ ವಿದ್ವಾನ್ ಸೋಸಲೆ ರಾಮದಾಸರೂ ಹಾಡಿ

ಕೊಂಡು ಬಂದಿರುವ ಕ್ರಮವಿದಾದುದರಿಂದ ಸಂಶಯಕ್ಕೆ ದಾರಿ ಇರುವುದಿಲ್ಲ. ಇತರ ಉಗಾಭೋಗಗಳ ವಿಷಯದಲ್ಲಿ ಪೂರ್ವದ ನಿಬಂಧನೆಯೇನೆಂಬುದು ಗೊತ್ತಿಲ್ಲ.

**ರಾಗ-ಮೋಹನ ತಾಳ-ಜಂಪೆ**

|| ಸರಿಗಾ ದಗ || ಗಾಗಗ || ರಿಗಪಾಪ || ಧಪಪಗ ಗರಿರಿ ||
ಕ್ಷಿತಿತ ಗಣ – ನಾಥನಿ ದ್ಧಿಯನೀವ ಕಾ · · · ರ್ಯದಲಿ ||
|| ಸರಿಗಾ ರಿಸ || ಸಾಸಧಧ || ಪಪಧ ಸಾರಿ || ಗಾಧಪಗರೀಸ ||
ವ್ಯುಕುತಿ ಪಥ ಕೀವ ಮನ - ಮಹ ರುದ್ರ ದೇವ · · ರು · ||
|| ಗಗಗಾ ಪಧ || ಸ ಸ ಸ ಸ ಸ || ಸ ರಿ ಗಾ ರಿ ಸ ಸಾ ರಿ ಸ ಧ ಪ ಧಾ ||
ಭಕುತಿ ದಾ- ೯ಕಳುನಮ್ಮ ಭಾ · ರ ತೀ · ದೇ · · ವಿ · ಯು
|| ಧಾ ಧಗರಿ ಸಾ || ಸಾ ಸ ಧ ಧಪಗಪ ಪಧಾ || ಸಾ ಪಧಾಸಧಪ ||
ಯುಕುತಿ ಶಾ ಸ್ತ್ರ · ಗ ಳ · · · ಲ್ಲಿ · · ವನಜಸಂ
ಪಗಗಾ ಪಗಧಪಗರಿ ||
ಭ · ವ ನ · ರ·ಸಿ · ||
|| ಸಾಗಗಾಗ || ಗಗಗಗಗ || ಗಾಪಧಾಸಾಸಾ || ಸಧಧಪ ಪಗಗರಿರೀ ||
· ಸತ್ಕರ್ಮ ಗಳನಡೆಸಿ ಸು · ಜ್ಞಾ · ನ ಮ · ತಿ · ಯಿ · · · ತ್ತು ||
|| ಗಪಗಾರಿಸ || ಸಸಸ ಧಧಧಪಾಧಾ || ೯ ಸರಿಗಾಗಾ ಧಪ || ಗರೀಸ · · · ||
ಫಣಿಪಾ · ಲಿ ಸುವನ · · · · ಮ್ಮ ಪವಮಾ · ನ · ನು · · · · · ||
|| ಧಧಧಧ || ಧಾಧಪಪಗಗಾ ೯ ಗಪಾಧಸಾ || ಸ ಸ ರಿ ಗ ರಿ ಸ ಸ ಧಾ
ಚಿತ್ತದಲಿ ಆನಂ · · ದ ಸುಖವನೀ ವ ಳು ರ · ಮಾ · · ·
|| ೯ ಸ ರೀ ಗಾ ಗಾ ಗ || ಗಾ ಗ ರಿ ರಿ ಸ ಸ ರಿ ಗ ಪ || ಗ ರಿ ಸರೀಗ ಸಾಸಾ||
ಭ ಕ ತ ಜ ನ ರೊ · ಡೆ · ಯ ಶ್ರೀ · · · · · ಪುರಂ · ದ ರ
ರಿ ಸ ಸ ಧಾ ಧ ಪಾ ಧಾ
ವಿ · · · ಠ ಲ ನು

|| ಧ ಧಾ ರಿ ಸ ಸ || ಸ ಧಾ ಧಾ ಧ ಪ ಪ ಗ ಪ ಧ || ಸಾ ಧ ಧಾ ಸ ಧ ಪ ||
ಸ ತ ತ ಇ ವ ರೊ· ಳು ನಿಂ· · · ತು· · ಕೃ ತಿ ಯ ನ ಡೆ
ಪ ಗ ಗಾ ಗ ಪ ಧ ಪ ಗ ರಿ || ಸ ಧ ||
ಸು · ವ ನು · · · · · · · ·

——o——

**ರಾಗ, ಸುರಟಿ ತಾಳ, ಆದಿ.**

|| × ಸನಿಧಪ ಪಪಮಮಾ || ೯ ಮಗಾ ಪಮಾ || ರೀ ರಿಗರಿಮ ||
ಇಂದಿನ ದಿ ನವೇ· · ಶುಭ ದಿನ ವೂ· · · ·
|| ಪನಿ ಸನಿಧ ಪಪ ಮಮಾವ || ೯ ಮಗಾಪಮಾ ರಿಮರಿಮ ಗರೀಸ ||
· · ಇಂದಿನ ದಿನ ವೇ · · ೯ ಶು ಭ ದಿ ನ ವೂ· · · · · · ||
|| ೯ ರಿಪಾ ರಿಸಾ ರೀಪಮ ಪಾ || ೯ ನಿದಾನೀ ೯ ಸಾ · · · · · · · ||
ಇ ಂ ದಿ ನ ವಾ· · ರ ಶುಭವಾ · ರಾ · · · ||
|| ೯ ನಿ ಸಾ ರಿ ಸಾ ಸಾನಿಧಪಾ || ೯ ಮಪಾಮಾಗ ಮಮರಿಸ ರಿಮಪನಿ ||
ಇಂ· ದಿ ನ ತಾ· · ರೇ ಶು ಭ ತಾ · ರೇ · · · · · · ||
|| ಧಸಿ ಸನಿಧ ಪಪಪಮಮಾ || ೯ ಮಗಾಸಮಾ ರಿಮರಿಗ ಗರೀಸ ||
ಇಂದಿನ ದಿನವೇ· · ಶು ಭ ದಿ ನ ವೂ· · · · · · ||
|| ಮಾಮಮಾ ಮಾಮಮ || ಮಮಾಮಮಾ ಮಗಪಮ ರೀ ||
ಇಂ ದಿ ನ ಯೋ · ಗ ಶುಭಯೋ · · · · · · ಗ
|| ೯ ರಿಮಾರಿಸಾ ರಿಸ ಸನಿ ನೀ || ಧ ನಿಸಾರಿಮಾ ಮಗ ಮಮರೀ ||
ಇಂ · ದಿನ ಕರ ಣ · · · ಶುಭ ಕ ರ ಣ· · · · ·
|| ೯ ನಿಸಾ ನಿಧಾ ಪಾ ನಿಮಪಾ || ೯ ಮಪಾನಿಧನಿ || ಸಾ ಸಸ ||
ಇ ಂ ದುಪು ರಂ ದ · ರ · ವಿ · ಠಲ · ರಾ ಯನ
|| ೯ ನೀನಿನೀ ನಿನಿ ಧನಿಸರಿ | ಸಾ ನಿಧಾ ಪಾ ೯ ಮಮಮಗ ರಿಮಪನಿ ||
ಸಂ ದರು ಶನ ಫ ·ಲ · · ವೆನ ಗಾ ಯ್ತು · · · · · · ·

॥ ಧನಿ ಸನಿ ಧ ಪಪ ಪಮಮಾ ॥ ; ಮಗಾಪಮಾ ರಿಮರಿಮ ॥
ಇಂ ದಿ ನ ದಿನ ವೇ ಶು ಭ ದಿ ನ ವೂ . . .

—o—

ಈ ಸುರಟಿ ರಾಗದ ಉಗಾಭೋಗ ಮಹಿಮಾ ದೃಷ್ಟಿಯಿಂದ ಮಹತ್ತರವಾದದ್ದು. ಪುರಂದರ ದಾಸರಿಗೆ ವ್ಯಾಸರಾಯರಿಂದ ಅಂಕಿತೋಪದೇಶವಾಗಿ ಆತ್ಮಸಾಕ್ಷಾತ್ಕಾರವಾದ ಆನಂದದಲ್ಲಿ ಹಾಡಿದ್ದು. ದಾಸರು ಜೀವನ್ಮುಕ್ತ ಸ್ಥಿತಿಗೆ ಬಂದ ಮಂಗಳ ಮಹೋತ್ಸವದ ಮೊದಲ ಉದ್ಗಾರವಿದು. ಪರಮ ಮಂಗಳಗಳಿಗೆ ಮಂಗಳವು.

## ಸುಳಾದಿ

ಸುಳಾದಿಯ ಆದ್ಯಪ್ರವರ್ತಕರು ಶ್ರೀಪಾದರಾಯರೆಂಬುದನ್ನು ಹಿಂದೆ ತಿಳಿಸಿದೆ. ಇವರು ರಚಿಸಿದ ಸುಳಾದಿಗಳ ಸಂಖ್ಯೆ ಎಷ್ಟೆಂಬ ವಿವರ ತಿಳಿಯಲು ಸಾಧ್ಯವಿಲ್ಲ. ನಮ್ಮಲ್ಲಿ ಉಪಲಬ್ಧವಿರುವುದು ಒಂದೇ ಒಂದಾದ ಇವರ ಮೊದಲ ಸುಳಾದಿ ಇದು. ಇವರಾಗಲಿ ಪುರಂದರ ದಾಸರಾಗಲಿ ರಚಿಸಿದ ಸುಳಾದಿಗಳಲ್ಲಿ ದೀರ್ಘವಾದ ಸಾಹಿತ್ಯ ಸರಣಿಯಿರುವುದಿಲ್ಲ. ಸಂಗೀತ ಪ್ರಧಾನವಾದ ಸುಳಾದಿಯಲ್ಲಿ ಸಾಹಿತ್ಯ ಹೆಚ್ಚಾಗಿರಬೇಕಾಗಿಲ್ಲ. ಶ್ರೀಪಾದರಾಯರು ಪ್ರತ್ಯೇಕ ತಾಳಕ್ಕೆ ಪ್ರತ್ಯೇಕ ರಾಗವಿರಬೇಕೆಂದು ನಿಬಂಧನೆಮಾಡಿದರು. ಪುರಂದರ ದಾಸರು ಇವರನ್ನು ಅನುಸರಿಸಿದರು. ಕೆಳಗೆ ಕೊಟ್ಟಿರುವ ಉಭಯರ ಸುಳಾದಿಗಳು ಅವರವರು ಹಾಡಿದ ಕ್ರಮದಂತೆ ಪರಂಪರೆಯಾಗಿ ಬಂದಿವೆ. ಸುಳಾದಿಗಳ ಮತ್ತೊಂದು ವೈಶಿಷ್ಟ್ಯವೆಂದರೆ ಯಾವ ತಾಳದ ಸಾಹಿತ್ಯವನ್ನು ಮತ್ಯಾವ ತಾಳದಲ್ಲಿ ಬೇಕಾದರೂ ಹಾಡಲನುಕೂಲವಾಗಿರುವುದು. ಶಬ್ದಗಳು ಅಪಾರ್ಥವಾಗುವದಿಲ್ಲ. ಶುದ್ಧ ಪ್ರತಿಯಾಗಿದ್ದರೆ ಒಟ್ಟಿನಲ್ಲಿ ಹರಿದಾಸ ಸಾಹಿತ್ಯವೇ ಈ ರೀತಿ ಇದೆ. ಅಕ್ಷರಗಳನ್ನು ಸೇರಿಸದೆ ಇದ್ದದ್ದನ್ನು ತೆಗೆಯದೆ ಹಾಡಲನುಕೂಲವಾದ ಸೌಲಭ್ಯ ಮತ್ತೆ ಯಾವ ಸಾಹಿತ್ಯದಲ್ಲೂ ಕಂಡು ಬರುವುದಿಲ್ಲ. ಸಂಗೀತ ಸಾಹಿತ್ಯಗಳ ಮೇಲೆ ಈ ಮಹನೀಯರಿಗೆ ಎಂಥಾ ಕಳಕಳಿಯಿತ್ತೆಂಬುದನ್ನು ಶಬ್ದದಿಂದ ವರ್ಣಿಸಲು ಶಕ್ಯವಿಲ್ಲ.

## ಶ್ರೀಪಾದರಾಯರ ಸುಳಾದಿ

ರಾಗ, ನಾಟಿ. ತಾಳ, ಧ್ರುವ.

|| ಪಪ ಪಮರೀ | ಮಾಮರಿ | ರೀ | ಸರಿಗಾಮಾ | ಮರಿರೀ ರಿಸಸಾ ||
ನಿನ್ನಾಧೀ · ನ ಶ ರೀ · ರ ಕರಣ ಚೇ ಷ್ಟೆ · ಗ ಳೆ · ಲ್ಲ
|| ಸನಿಸಾ ಸನಿ ಸ | ರಿ ಗ | ಮ ಪಾಪಾ, ನಿಪ | ಪಮಮರಿ ರಿರಿ ||
ನಿ · ನ್ನಾಧೀ · ನ · ಬಂ ಧ ಮೋಕ್ಷ ನಿ · ಯ · ತಿ · ಗಳು
|| ಗಮ ಮಮ ಮರಿರೀ ರಿಸಸನಿ | ನೀ ಸಾ ಸರಿಗಾ | ಮ ಪ ಪ ಪ ||
ನಿ · ನ್ನಾ · ಧೀ · ನ ಯೋಗ್ಯ · ತೆ ಸಾ ಧ · ನ ಸಾಧ್ಯಂಗಳು
|| ಪನಿಸನಿ ನಿಪಪಮ | ಮರಿ ಮರಿ | ರೀ ರಿಗಮ ಪಧಧಧ ||
ನಿ · ನ್ನಾ · ಧೀ · ನ · ಸು · ಕೃ · ತ ದುಷ್ಕೃತಫಲಗಳು
|| ಸಾಸನಿನಿಪ ಪ | ಮಗ | ಮಾ ಪ ಧ ನಿ | ಸಾ ಸನಿ ರಿ ರಿ ||
ನಿನ್ನಾ · ಧೀ · ನ ವಿ · · ಷ ಯಾತ್ಮಕ ಬುದ್ಧಿ · ಗಳು
|| ಸ ನಿ ರೀ ರೀ ಗ | ಮಾ | ಮ ರಿ ರಿ ಸ ಸಾ ಸಾ | ರೀ ರಿ ಸ ಸ ಸ ||
ನಿ · ನ್ನಾಧೀ ನ ಚ ರಾ · ಚ ರ ವೆಂ ದು ಶೃ ತಿ · ವಾಕ್ಯ
|| ಸಾ ಸ ನಿ ಪಾ ಪಾ | ಪ ಮ ಮ ಗ | ಮಾ ಪ ಧ ನಿ | ಸಾ ರಿ ಸ ರೀ ||
ಪು ಣ್ಯ · ಪಾ ಪ ಗ · ಳೆಂ ತು ನಿನ್ನ ವ್ಯಾ ಪಿ ಸ · ವ್ವೋ
|| ಗಮಪಮ ಮರಿರೀ | ರಿಸಸಸ | ನೀ ಸಾಸನಿ ನಿಪ | ಪಮ ಮರಿರಿರೀ · ಸ ||
ಉ · ಣ್ಣಿ · ಸು · ವೆ ಜೀ · ವರಿ ಗೆ ಪಾಪಂ ಗ · ಳ · ನೆಂತೋ · ·
|| ಪಾಪಮಗಮ ಪಾ | ಧನಿಸಾ | ಸಾ ಸಾ ರಿ ಸ ಸ ನಿ | ಸಾಗಮಪಾಪಾ ||
ನಿನ್ನ · ಮಹಿ ಮೆ ಗೆ · ನ ಮೊ ಅಂತರಾ · · · ತ್ಮ · ಕ ನೆ
|| ಗಮಪಮಮರಿ ರಿಸ | ಸಸಿ ಸರಿ | ರೀ ಪಸಸಸನಿಪ | ಪಮಮರಿ ರಿರಿಸಾ ||
ಎ · ನ್ನ · ಪಾ · ಲಿ · ಪ · ಭಾ · ರ ನಿ · · ನ್ನದೊ · ರ ಂ ಗ · ವಿಠಲ ||

ರಾಗ, ಗೌಳ ತಾಳ, ಮಠ್ಯ

|| ಪಾಮಪ | ೯ ಪಮ | ಮಾ ರಿಗಮಾರೀ | ಸಸಸನಿಪಾ | ಪಾಪ | ರಿರಿರೀ ||
ಮುನ್ನನಿ · ನ್ನ· · ಚ · ರ‍ಣ ಕಮಲ· · ವ ನೆ ನೇಯದೇ
|| ಸರಿಪಮ | ೯ ಪನಿ | ಸನಿಪಾ ಮಮಮಾ | ನಿಪಪನಿ ನಿಸಾ | ಸನಿ ರಿಸ ||
ಪ · ನ್ನಗ ಶ · ಯ · ನ ನೇ · · ಭವದ · ಲ್ಲಿಬಂ · · ದೆನೊ
|| ರಿ ರಿ ರಿ ರಿ | ೯ ಸನಿ | ಪಾ ನಿಸರಿಸರೀ | ಗಮರಿಸ | ಸಸನಿ|ಪಾಪಾಸನಿಸಾ||
ಎ · ನ್ನಯ ಗು · ಣ ದೋ· · · ಷ ಎಣಿಸದ ಲೆ ಬಂ · · · · ದು
|| ನಿಸರೀಸಾ ಸ | ಸ ಸನಿ | ಪಾ ಮಪನೀನೀ | ಪಾಸಾಸನಿ ಪ | ಮಪ |
ಘ· · ನ್ನ ಮ ಹಿಮ · · ಕಾ · · ಯೊ ರಂ · ಗ · ವಿ · ಠ
ಮರಿಗಮರಿಸ ||
ಲ ಸ್ವಾ· ·ಮಿ·

ರಾಗ ವರಾಳಿ ತಾಳ ತ್ರಿಪುಟಿ

|| X ಸ ಸ | ಸ ನಿ ಧಾ ಪಾ | ಮ ಪ ಧ ಪ ಪ ಮ | ರಿ ಗಾ ರಿ ಸಾ |
ಕರ ಣ ಂ · ಗ ಳು · · · · · · · · ತ
|| ಸ ಸ ರಿ | ಗಾ ರಿ ಸ | ಸಾ ರಿ ನೀ ೯ | ಸಾ ಸಾ |
ಮ್ಮ ವಿ ಷ ಯ ಕೆ · ಳೆ ಯು ತಿ ವೆ
|| ೯ ಸಾ ಸರಿ | ಗಾ ಗಾ || ಗಾಗಮಮಾ | ಮಪಧಪ ದಾ ||
ಹ ·ರ ಣ ನಿ ನ್ನದು · · ಕಾ · · · ಯೋ
|| ನಿ ಸ ರಿ ಸ ರಿ | ಸನಿದಾ ಪಾಪಮ | ರಿಗಾರಿಸಸ | ಸರಿಗಮ ಪಧನೀ |
ಕ· · ರು · ಣಾ· · · ಕ · ರಾ · · · · · · · · · · · ·
|| ೯ ಗಮ | ಪಾ ಧಾಧನಿ | ಸನಿಧಧನೀ | ಸಾಸನಿ ಸ ರಿ ಗಾ ||
ಶರ ಣು ಎ ಂ ಂ ಬೆ · · ನಿ · ನ · · ಗೇ
|| ೯ ರಿ ಸ | ಸ ರಿ ಗಾ ರಿ ಸ || ಸಾ ಗ ರಿ ಸ ನಿ | ಸಾ ಸಾ ||
ನಿ · ನ್ನ ಭ · · · ಕ್ತ · · ರೀ ಗೇ ||

|| ೯ ಧಪದಾ | ಧನಿಸಾ | ನಿ ಸ ನಿ ಸ ರಿ ಸ | ಸನಿದಾ ಪಮಪಮ ||
ಬಿ · ರು ದು · ನಿ ನ್ನ · · ದ · · ಲ್ಲ · · ವೇ · · ·
|| ಪಮಪಸ | ಸನಿದಾ ಪಾಪಮ | ಪಮ ಗಾ | ರಿಸ ರಿಗಮಪ | ಧನಿ ||
ರಂ ಗ · · ವಿ · · ಠ · ಲ ರೇ · ಯ · · · ·

ರಾಗ, ಅರಭಿ ತಾಳ, ಅಟ್ಟ

|| ಧ ರಿ ಸಾ ಸಾ ಸನಿದಾ | ಧಪ ಮಪಧಾಪಾ | ಪಮ ಮಗ ರಿರಿ ||
ಬಂದು ಬಂ ದು · · ನಾನಾ ಭವದಲಿ ನೊಂ · · ದೆನೊ
|| ರಿಪಮಗರೀ ಸರಿಮಗ | ರಿಸನಿಧ ಸರಿರಿಮ ಪಧ | ಧರಿಸನಿ ದಾ ೯ ಪ ||
ನಂದ · ನ ಕಂ · · ದ · · · ಇಂದಿ · ರಾ · ನಂ · · ದಾ · ·
|| ಪಮಪಾಧಾ ಸಾ | ರಿ ರಿ ಸ ರಿ ಮ ಗ ರಿ ರಿ | ಸ ಸ ಸ ನಿ ಧಾ ಧಾ ||
ಕುಂ · ದ ದಂ ತೆ ಶುದ್ಧ ಧ ವ ಳ · ಮ ಂ · · ದ · ಹಾ ಸ
|| ಸ ನಿ ಧ ರಿ ಸಾ ಸನಿದಾ | ಧಪ ಮಪಧಾಪಾ | ಮಗರೀ ರಿಮಪಧ ||
ಸು ಂ ದ · ರ ಮೂ · · ರುತಿ ರ ಂ ಗ ವಿ ಠ · ಲ ರೇ · ಯ ·

ರಾಗ ಕೇದಾರ, ತಾಳ ಆದಿ

|| ×× ಸ ಸಾ ನಿ ಪಾ | ಪಮಗಾ | ಗರಿಸಾ || ಸಸಾನಿಸಾಸಾ |
ಹ ರಿ ಯೆ ನಿ · · ನ್ನ ಒ · ಮ್ಮೆ ನೆನೆ ದ ಗೆ ನ
ಗರಿಮಗ | ರಿಸಸಾ ||
ರ · ಕ · · ವಿ ಲ್ಲ
|| ೯ ೯ ಸಮಾಗಮಾ | ಪಾಪನಿ | ಸಾಸಾ || ಸ ಮ ಗ ರಿ ಸ ರಿ ಸ ನಿ |
ಮೊರೆಹೊ · ಕ್ಕೆನೊ · ಇ ಮ್ಮೆ ಪೊ · ರೆ · ಯೊ · ರ ಂ
ಪಾಪಮ | ಗಾಗಮ | ಪನಿ ||
ಗ · ವಿ ಠ ಲ ·

### ಜತೆ॥ ಶ್ರೀರಾಗ, ತ್ರಿಪುಟ ತಾಳ

॥ × × ಸಾ । ಸ ನಿ ಪಾ ಪ ಮ ರೀ ॥ ರಿ ಗಾ । ರೀ ರಿ ಸ ॥
ಮಂ ಗ · · ಳ · · ಮ ಹಿ ಮ · ಭು
॥ ರೀ ೕ ೕ । ರೀ ಪ ಮ ಪಾ ॥ ನೀ ಮಾ ಪಾ ಪ ಮ ಪ ಮ ಪ ನಿ ॥
ಜಂ · · ಗ · · ಶ ಯ · ನ ನ · · · ಮೊ ·
॥ ೕ ನಿ ಸ । ರೀ ರಿ ಗ ॥ ರಿ ಸಾ । ಸ ನಿ ಪಾ ನಿ ಸ ರೀ ॥
ಜಂಗು ಳಿ ದೈ · ವ ದ ಗಂ · · ಡ · ·
॥ ಪ ಸಾ । ಸ ನಿ ಪಾ ಧ ನಿ ॥ ಪಾ ಮಾ ೕ ರಿ । ರಿ ಗ ರಿ ಸ
ರಂ · ಗ · · ವಿ · ಠ ಲ · ನ · ಮೊ ·

—o—

ಕೆಳಕಂಡ ಪುರಂದರ ದಾಸರ ಸುಳಾದಿಯು ತಿರುಪತಿ ಶ್ರೀನಿವಾಸನ ಸನ್ನಿಧಿಯಲ್ಲಿ ನಿಂತಾಗ "ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ" ಎಂಬ ಶೃತಿವಾಕ್ಯದಂತೆ ಅಂತರಂಗದಲ್ಲಿ ತೇಜೋದರ್ಶನ, ಬಹಿರಂಗ ದಲ್ಲಿ ಸಗುಣ ಸಾಕ್ಷಾತ್ಕಾರಗಳಾದ ಮಹಾ ಸಂಭ್ರಮದಲ್ಲಿ ಭಾವೋದ್ರೇಕ ದಿಂದ ಹಾಡಿದುದಾಗಿರುತ್ತದೆ. ಹಾಡಲು ತಕ್ಕ ವಾತಾವರಣ ತಕ್ಕ ಸನ್ನಿವೇಶ ಗಳನ್ನು ಕಲ್ಪಿಸಿಕೊಂಡು ಹಾಡಿದರೆ ಉಂಟಾಗುವ ಆನಂದವು ಅವರ್ಣನೀಯ ವಾದುದು. ಹಾಡಬೇಕೆಂಬುವರು ತಕ್ಕ ವಾತಾವರಣವಿದ್ದಾಗ ಮಾತ್ರ ಹಾಡ ಬೇಕೆಂದೂ ತುಂಬಿದ ನಾದದಲ್ಲಿ ಲೇಶವೂ ಅಪಸ್ವರ ಬರದಂತೆ ಹಾಡ ಬೇಕೆಂದೂ ಸೂಚಿಸುತ್ತೇವೆ.

### ಬ್ರಹ್ಮಾನಂದ ಸುಳಾದಿ

### ಕೇದಾರ ಗೌಳ ಧ್ರುವತಾಳ

॥ ಮ ಪ ಧಾ ಪಾ ಪ । ೕ ಪ । ಪ ಮ ಪ ಧಾ ಪಾ । ಧ ಪ ಮ ಗ ರಿ ರಿ ॥
ಆ · ಪಾ ದ ಆ · ನಂ ದ ಆ · ನ ಖ ಆ · · · ನಂದ
॥ ರಿಪ ಮಗರೀ ರಿಮ । ಗರಿಸಾ । ಸಾನಿಸರೀ ರೀ । ರಿಪಮಗ ರಿ ರಿ ॥
ಆ · ಜಾ · ನು ಆ · · · ನಂ ದ ಆ · ಜಂಘೆ ಆ · · · ನಂದ

|| ರೀರಿ ಮಪಾ ಪಾ | ಸ ನಿ ಸಾ | ಸಾ ನಿ ಸ ರೀ ಸಾ | ಸನಿನಿಧ ಪಪ ||
ಆಊ • ರು ಆ • ನಂ ದ • ಆ • ಕ ಟಿ ಆ • • • ನಂದ

|| ಮಪಸಾಸಾ ಸನಿ | ನಿಧಧಪ | ಪಾ ಮಪಧಾಪಾ | ಪಮಮಗ ರಿರಿ
ಆ • ನಾ ಭಿ ಆ • • • ಕುಕ್ಷಿ • ಆ • ನಂದ ಮ • ಯ • • ವಯ್ಯ

|| ಪಾಮಗಸಾ ರೀ | ಪಮಪಾ | ಪಾ ಪಾಸನಿಧಮ | ಪಾಸನಿ ಸ ಸ ||
ಆ ಭು • ಜ ಆ • ನಂ • ದ ಆ ಕಂಬು• ಗ್ರೀ•ವಾ ನಂದ

|| ನಿ ಸ ರೀ ಸಾ ಸನಿ | ಧಾ ಧಪ | ಪಾ ಮಪಸನಿಸಾ | ರಿ ಗ ಸಾ ಸ ಸ ||
ಆ • ನಂ ದ ಮ • ಯ ವ • ಯ್ಯ ಆ • ಶಿ • ರೋ ರು • ಹ ಗ ಳು

|| ನಿ ಸ ರೀ ರೀ ರೀ | ರಿ ಪ ಮ ಗ | ರೀ ರಿ ಗ ಗ ರಿ ಸಾ | ಸಾನಿಧ ಧಪಪಾ
ಆ • ನಂ ದ ವಾ • • ಸ • ರ್ವಾಂ ಗ ದ ವೈ • ಭ ವ ಗ • ಳೆ • ಲ್ಲ

|| ನಿ ಸ ರೀ ಸಾ ನಿಸ | ನಿಧ ಪಾ | ಪಾ ಮಪಧಾಪಾ ಪಮಮಗ ರಿ ರಿ
ಆ • ಸಂ ಖ್ಯಾತಾ • • ನಂ ದ ಪುರಂದರ ವಿ • • • ಠ ಲ

## ಮೋಹನ–ಮಠ್ಯತಾಳ

|| ಪ ದ ಸ ಸ | ರಿ ಸ ಸ ಧ | ಧಾಧಧಧ || ಪ ಧ ಸ ರಿ ಸ | ಸಧಪಾ |
ಪಾ • ವ ಕ ಕೋ • • • ಟಿ ಸೂ • ರ್ಯ ಪ್ರಭೆಯು ಸೋ • • • ಲಿ

ಧ ಪ ಪ ಗ ಗಾ ||
ಸು • • • ವ

|| ಗಗಧಪ | ೯ ಪಗ | ಪಾ ಧಪ ಪಗರೀ || ಗಪಧಸ | ಸ ಸಪ | ಧಾ ಸಾಸಾ ||
ದೇ ವನಂ ಗ • ದ ಕಾಂ • • ತಿ ಆ • ನಂ ದ ಮ • ಯ ವ ಯ್ಯ

|| ಪಗಗಪ | ೯ ಧ | ಸಾ ಸ ರಿ || ಗ ರಿ ಸ ಸ | ೯ ಸಾ | ಸ ಧ ಧ ಪ ಪ ||
ಹಾ•ವಭಾ • ವ ಭ್ರೂ ವಿ • ಭ್ರಮವಿಲಾ • ಸ ಗ • ಳೆ • ಲ್ಲ

|| ಧಧರಿಸ | ೯ ಸ | ಧಧಪಪ || ಪದಸಾ ಧಧ | ಪಪಗ | ಧಪ ಗಾಗರಿರೀ
ದೇ•ವನ ೦ ಗ •ಕಾಂ•ತಿ ಆ • • ನಂ ದಮ• ಯ • ವ • ಯ್ಯ•

|| ಗಗಗಗ | ಗರಿ | ಗಪಾಪ || ಸಗಪಾ ಧಧ | ಧಪ | ಧ ಸ ಸ ಸ ||
ದೇ·ವಾ· ದಿದೇ · · ವ ಪು·ರಂ ದರ · ವಿ · ಠಲ ನ
|| ಧಧಧಾಗರಿ | ಸಾ ಸ | ೯ ರಿಸಧಾಪಾ || ಧ ಸಸಧ| ಪ ಪಗ | ಧಪ ಗರಿಸ||
ಪಾ · ವ· · ನ ರೂ · · · · ಪ ಆ · ನಂದ · ವ · ಯ· ಮ·ಯ್ಯ

## ಭೈರವಿ ರೂಪಕತಾಳ

|| ನಿ ಸ ರೀ | ಸ ಸ ಸ ಸ || ನಿ ಸ ರೀ | ಸಾ ಸ ನಿ ಧಾ ಪಾ ||
·ಬೊ · ಮ್ಮ ಬೊಮ್ಮ ಬೊಮ್ಮ ಬೊ ··ಮ್ಮ ಶ್ರೀ ಹ · ರಿ ಯ .
|| ಪಮಪಾ | ಧನಿಸಾ ಸನಿಧಪ || ಮಪಸನಿ | ಧಪ ಮಪಮಗರಿಸ ||
ಕ · ರ್ಮ ವಾ · · ನಂ · ದ ಕುರುಹ· ಗ · ಳಾ · · ನಂದ
|| ರಿಗಮಾ | ಮಗ ರಿಗ ಗರಿಸಾ || ರಿರಿಗಾ | ಮಾ,ಪಾಧನಿಸಾ
ಕು · ಮ್ಮಾ ನ · ವಾ· ನಂದ ಸುಳಿವು ಗ ·ಳಾ ನಂ ದ·
|| ರಿ ಗ ಮ ಗ | ರೀ ಸ ರಿ ಸ ನಿ ಧ ಪ || ಮಪಸನಿ | ಧಪ ಮಗರೀಗಾ
ನ · ಮ್ಮ · ಶ್ರೀ ಪು ಗಂ · ದ · ರ ವಿ · ಠ· ಲ · ರಾ · ಯನ
|| ಗರಿಗಾ | ಮಪಧಪ || ಮಪಸನಿ | ಧಪ ಮಗಗಮ ಪಾ ||
ಕರುಣ ವಾ · ನಂದ ಕೋ· · · ಪ · ವಾ · · ನಂ ·

ಪಮಗಾ | ರೀ ೯ ಸಾ ೯
ದ · · . .

## ಮಲಯಮಾರುತ ಅಟ್ಟತಾಳ

|| ದನೀಸಾ | ಸಾನಿಧಾ | ಪಾಪಗ || ಗಪಾಧನಿ | ಧಪ ಗಾಗಧಪಾ | ಗರಿಸಾ||
ದ ಶ ಮಾ · ರು ತ ಗ · ಳು ಆ · ನಂ ದ · ಮ · ಯ · ವ ಯ್ಯ
|| ಸರೀಗಾ | ಗಾಗರೀಗಾ ೯ | ಪಾಪಾ || ಧನೀಸಾ | ಸನಿಧಾ
ಹೃಷೀಕೇ · ಶ · ನ · ಏ ಕಾ ದ,ಶ ವಾ ದ · ·

ಧಾ ೯ ನಿ ಧಾ | ಪಾ ೯ ೯ ||
ಹೃ ಷೀ ೯ ಕ · ·

|| ನಿಧನಿಸಾ | ಸಾ ಸಾಸನಿಧಾ | ನಿ ಸ ರಿ ಸ ರೀ || ॥ ಸ ರಿ ಸ ರಿ ಗಾ |
ಆ · · ನಂ ದ ಮಯ· · ವ · · · ಯ್ಯ ಆ · ನ ೦ ·
ರೀ ಸಾ ಧ ನಿ ಸಾ ನಿ ಸ ನಿ ಧ || ಪಾ ||
· ಪ ಮ · ಯ ವ · · ಯ್ಯಾ ·

|| ದನೀ ಸಾ | ಸಾ ನಿಸನಿಧಾ ॥ | ಧಪಪಗ || ಗಪಾ ಧಾನಿ | ಧಪಗಗಾ |
ಅಸಂಖ್ಯಾ · ತಾ· · · · ನಂದ· ಪುರಂದ · ರ · ವಿ ಠ
ಗ ಪ ಧ ಪ ಗ ರಿ ಸ
ಲ · · · · · ·

ಮಧ್ಯಮಾವತಿ ಆದಿತಾಳ

|| ಪಪಾ ಪಮ ಪಾಸನಿ ನಿ ನಿ | ಪಸಸ ನಿಪಾ ಪಮ | ಮರಿ ರಿ ರಿ ರಿ
ಆ ನಂ ದ · ಳ · · ಧ್ರ್ಯಾಂಗಿ ಆ · · ನ ೦ ದ · ನಾ · ಕುಮಾರ
|| ರಿಮಪನಿಪಮ ಮರಿರೀ ರಿ ಸ ಸ | ರಿ ಮ ರಿ ಮ | ಪ ಪ ಪ ಪ ||
ಆ · ನಂ · · ದ ·ನಾ ವಾಹನ ಆ ನ ೦ ದ ಆ ಶ ಯ ನ
|| ಪಾನಿಮಪಾ ಪಾಸನಿ ಸ ಸ ಸ | ರಿ ಮ ರೀ ಸಾ ಸ ನಿ | ಪಾ ಪನಿಸಾಸಾ
ಆ ನ ೦ ದ ಆ · · ಗ ಮ ನ ಆ ನ ೦ ದ ವಿ · ಹಾ · · · ರ
|| ರಿ ಮ ರೀ ಸಾ ಸನಿಪಾಪಮ ಪಾಪನಿ | ಸ ರಿ ಸ ನಿ ಪಾಪಮ |
ಆ · ನಂ ದ ಆ · ನ ೦ ದ ಮ · ತ್ರಿ ಪ · ರ · ಮಾ · ·
ರಿಮಪಮ ರೀ ॥ ಸ
ನ ೦ · · ದ · ·

|| × ನಿ ಸ ರೀ ಸಾ ರೀ ರಿ ರಿ | ಸ ನಿ ಸ ರೀ ಸಾ | ಸನಿಪಾ ಪನಿಸಾ ||
ಆ · ನಂ ದ ಮೂರುತಿ · ಪು ರಂ ದ ರ ವಿ · · ಠ · ಲ
|| ನಿ ಸ ರೀ ಸಾ ಸಾಸನಿಪಮ ಪನಿ | ಪರಿಸನಿ ಪಾಪಮ | ರಿಮಪಮ ರೀ ॥ ಸ
ಆ · ನಂ ದ ನ ೦ ದ ನ · ತಾ · ನಾ·ದ · ನೀ · ಪ ರಿ · ಯ · ಲಿ

### ಸುರಟಿ ಜತಿ ತ್ರಿಪುಟತಾಳ

|| ನಿಸನಿಧ । ಪಾ ಪಧನಿಧ || ಪಮಮಾ ೯ ಗ ರಿಮರಿಮ ಸರೀಸ ||
ಜ್ಞಾ · · · ನಾ · · · · · ನಂ ದ · · ಮ · · · ಯ · ·
|| ಸಾ ಸನಿಸಾ । ರಿಮಮಾ || ಮಮಾ । ಮಗಪಮ ರೀ ||
ಜ್ಞಾನಿ ದ · · ರ ಧಿ ತ ಳ · · · ನ
|| ೯ ೯ರೀ । ಶ್ರೀ ಪ ಪು ಪಾ || ನಿ ಧಾ । ನಿ ನಿ ಸಾ
ನಾ ನಾ · · ರೂ ಪ ಗ ಳ · ಲ್ಲಾ
|| ೯ ೯ ಸಾ । ಸನಿನಿಧಪಾ || ಪಪಮಾ೯ಗ ರಿ ಮ ಪ ನಿ ||
· · ಆ ನಂ · · ದ ಮ · ಯ · ವ · ಖ್ಯ ·
|| ೯ ನಿಸನಿಧ । ಪಾ ಪದನಿಧ || ಪಮ ಮಾ೯ಗ । ರಿಮರಿಮ ಸರೀಸ
ಜ್ಞಾ · · · ನಾ · · · · ನಂ ದ · ಮ · · · ಯ

ಇದರಂತೆ ನರ್ತನಕ್ಕೆ ಹೊಂದಿಕೆಯಾಗುವ ನಾಯಕ ನಾಯಕೀ ಭಾವದಿಂದ ಕೂಡಿದ ಪುರಂದರ ದಾಸರ ಪದಗಳನ್ನು ಕೊಡಬೇಕಾದದು ಅಗತ್ಯವಾದರೂ ಕಾಗದದ ಅಭಾವ ಗ್ರಂಥ ವಿಸ್ತಾರ ಭಯ ಕಾರಣಗಳಿಂದ ಕೊಟ್ಟಿಲ್ಲ. ನವರತ್ನಗಳೆಂದು ಪ್ರಖ್ಯಾತವಾಗಿರುವ ಆನಂದ ದಾಸರ ಒಂಭತ್ತು ಕೀರ್ತನೆಗಳ ಪೈಕಿ ಒಂದನ್ನು ಮಾದರಿಗಾಗಿ ಕೆಳಗೆ ಕೊಟ್ಟಿದೆ.

### ಆಠಭಿ ಆದಿತಾಳ

|| ಪಾ ೯ ೯ ೯ ೯ ಪಾ । ಮ ಪ ಧ ಪ । ಧಾ ಧಾ ||
ಪಾ · · · · ದ ದ · ರು · ಶ ನ
|| ಧಸಧರಿ ಸಾನಿಧಾ ಧಧಪಾ । ಪಾ ಪಮಮಾ ಮಗರೀ ರೀ
ಪಾ · · · · · · ಮ · ರ ಜ ನ · · ರಿ · · ಗೆ
|| ರಿ ಮ ರಿ ಮ ಪಾ ಪಮಮಾ ಮಗರೀ । ರಿಸ ಸನಿಧಾ । ೯ ಜ ರಿ ಸಾ ||
ಆ · · · · ಗು · · ವ · · ದೇ · · · · · ವ · · ·

|| ರೀ ೯ ೯ ೯ ೯ ೯ ಸ | ನಿ ಧ ಪ ಮ | ಗ ರೀ ಮಾ ಪ ಧ || || ಪ ||
ಯ್ಯಾ · · · · · ಜ ಗ ದೊ ಳು ನ ರ ಹ ರಿ ಯ · || ಪ ||

|| ಪಾ ಧಪಪಮ ಪಾ ಧ ಸ ಧ ಸ | ಸನಿಧಾ ಸಾ | ೯ ಸ ಸಾ ||
ವೇ · · · · ದ ಮಾ · · · · · · ನಿ · ಮೊದ

|| ಸಾ ರಿ ಸ ರೀ ರೀ | ಮ ಗ ರೀ ಸಾ | ಸ ನಿ ಧಾ ಧಾ ||
ಲಾ · · ದ ಅ ಮ · · ರ ರಿ · · ಗ

|| ಧ ಸ ಧ ರಿ ಸಾ ಸ ನಿ ಧಾ | ಧಧಪಾ | ಮಪಧಸ ||
ಗಾ · · · ಧ ವಾ · · · · ದ ಶ್ರೀ · · ·

|| ಸ ನಿ ಧಾ ಧ ಧ ಪಾ ಪಾ | ಮ ಪ ಮ ಗ | ರಿ ಮ ಪ ದ || ಅ ||
ದೇ · · · · ವಿ ಭ ಜಿ · ಸು · ವ · · · || ಅ ||

|| ಧ ಧ ಸಾ ಸಾ ಸ ನಿ ದಾ ಧ | ಧಧಪಾ | ಮಮಗರೀರೀ ||
ಶ್ರೀ · ಘೂ ರ ಮ · ಣಿ ಯ ರ ಕ ರಾ ಬ್ಜ ಗ · ಳಿ ಗೆ

|| ರಿ ರಿ ಧ ಧ ಪ ಪ ಪ ಪ | ಮಮಪ ಮಾ | ಮಗರೀಮಪದಾ || ೧ ||
ವೈ · · ಭ ವ ಗ ಳ ವ ಮೆ ರೆ ವ ಸು · ರ ತ · ರು ವ || ೧ ||

|| ಧ ಸಾ ಸ ನಿ ಧಾ ಪಾ ಮ ಪ ಧ ಪ | ಧಾ ೯ ಸನಿ | ಧಾಧಾ ಧ ಸ ರಿ ಸ
ಪ್ರ · ಹ್ಲಾ · · ದ ವ · ರ · ದಾ ನೆಂ · ದು ಕ · ಣ ·

|| ರೀ ೯ ೯ ಸ ರಿ ಮ ಮ ಗ ರಿ ೯| ಸಾ ಸನಿಧಾಪಾ | ಮಗ ರಿಮ ಪಾಧಾ ||೨||
ದಾ · · ಕ್ಷ ಣ ದಿ ದ್ವಿ · ರ ದ · ರಾ · · ಜ ನ · ಪೊ · ರೆ ದ ||೨||

|| ಸನಿಧಾಸಾ ಸನಿಧಾಪಾಮಪ | ಧ ಪಾ ಮ | ಗ ರಿ ರೀ ||
ಕಾ · · · ಳಿಂ · · ದಿ ನ ದಿ ಯ ನೀ ರ ಡಿ ಸಿ ಗೋ

|| ಧ ಧ ಪ ಪಾ ಪ ಮ ಗ ರೀ | ಮ ಪ ಧ ಸ ನಿ | ಧಾ ಧಾ ಸ ಸ ||
ಗ ಣ ವ ನೀ ಂ ಟೆ ಮ್ಮೆ · · ಮ ರೆ ಯ ಲಾ · · · ಕ್ಷ ಣ

|| ಸನಿಧಾಧಾ ಧ ಸ ರೀ ರೀ ಸ ರಿ | ಮ ಮ ಗ ರೀ ಸಾ | ಸ ನಿ ಧ ಧ ||
ವ್ಯಾ · · ಳಾ · · · ಳ ಯ ವ ಪೊ · · ಕ್ಕು ಕ ರ ಪಿ ಡಿ

|| ಧಾ ರಿ ಸ ಸಾ ಸ ನಿ ಧಾ ಧ ಸ ರಿ ಸ | ರೀ ೕ ೕ ೕ | ರೀ ೕ ೕ ೕ ||
ದ ಳಿದು ತ ರ · ಲು ಆ · · · ಗ · · · · · · · ||

|| ರೀ ಮ ಮ ಗ ರೀ ರೀ ರಿ ರಿ | ರೀ ಮ ಗ ರೀ | ರೀ ಸಾ ಸ ನಿ ಧಾ ||
ತಾ ಳ ವೋ · · ಳ ಗ ಳಿಂ ತ ಥೈಥಲ · · · ಯ ನ · ಲಿ

|| ಧ ರಿ ಸ ಸ ಸ ಸ ನಿ ಧಾ ಧಾ | ಧಾ ರಿ ಸ | ರೀ ರಿ ರಿ ||
ತಾ ಂ ಡ ವ ದ ಲೀ · · ಶೆ ಯಾ ಟದ ಲೀ · ·

|| ರೀ ಮ ಗ ಗ ರಿ ರಿ ಪ ಮ ಪ | ೕ ೕ ಮಾಮಗರೀ | ರಿ ರಿ ಸ ನಿ ಧಾ ||
ಅಂ ಬ ರ ದ ಲಿ ಪೂ · · · · · ಮ ಳೆ · ಯ ಗ ರೆ ಯು · ಲು

|| ಸ ರಿ ಮ ಗ ರೀ ಸ ನಿ ಧಾ ಧ ಧ ಧ ರಿ | ಸ ನಿ ಧಾ ಪಾ ಪಾ | ಮ ಗ
ಉ · ರ · ಗ ರಾ · · ಜ ನ ಪ · ಣಾ · · ಗ್ರ ದ ಲಿ ·

ರಿ ಮ ಪಾ ದಾ || ೩ ||
ನ · ಲಿ ವ || ೩ ||

|| ಧ ಧ ಪ ಪ ಪಾ ಪ ಮ | ಪಾ ಪ ಮಾ | ಮ ಗ [illegible] ಸ ರಿ
ಅ ಂ ಡ ಜ ರಾ ಜ ಪ್ರ ಕಾಂ ಡ ರ ಥ · ದೊ ಳ ಖಿ

|| ರಿ ಮ ಮ ಮ ಗ ರೀ ರೀ ಸ ರಿ | ಮ ಗ ರೀ ಸಾ ಸ ನಿ | ಧಾ ಸ ಸ ಸ ||
· ಳಾ ಂ ಡ ಕೋ ೕ · ಟಿ ಬ್ರಂ ಹ್ಮಾಂ · ಡ ನಾ · · ಯ ಕ ನು

|| ಧಾ ಪ ಧಾ ರಿ ಸ ರಿ | ಮ ಗ ರಿ ರಿ | ಪ ಮ ಪಾ ||
ಹೆಂ ಡ ರಂ ಧ ರಿ ಸಿ ಕೊ ಂ ಡಿ ರ ಲೂ · ರು

|| ಧ ಧ ಪ ಪಾ ಪ ಮ ಪಾ ಮ ಪ | ಧ ಸ ಸ ನಿ ಧಾ | ಸಾ ಸಾ ||
ದ್ದ ಂ ಡ ಮ ದ · ದ ವೇ · ತಂ ಡ · ದ ಶುಂ ಡಾ

|| ಸ ನಿ ಧಾ ಧಾ ಧ ರಿ ರಿ ಸ ರಿ | ಮ ಗ ರೀ ಸಾ ಸ ನಿ | ಧಾ ಧ ಧ ಧ ||
ದ ಂ · ಡ ಪ್ರೋ ೕ ಲ್ಲ ಪ ದ ಪು ಂ · ಡ ರೀ · · ಕ ಗ ಳ

|| ಧ ಸ ಧ ರಿ ರೀ ಸಾ ಸಾ ಸ ನಿ ಧ ಧ | ಧ ಧ ರಿ ಸ | ರಿ ರಿ ರಿ ಸ ||
ಮ ಂ · · ಡಿ ತ ಕ ರ · ತ ಳ ಮ ಂ ಡ ಲ ದೊ ಳ ಗೆ ಅ

|| ರೀ ರೀ ಮ ಗ ರೀ ರಿ ರಿ ಸ | ಧ ರಿ ಸ ಸ | ಸ ನಿ ಧಾ ಧ ಧ ||
ಖಂ ಡ ವಾ · · ಗಿ ರಿ ಸಿ ಕೊ ಂ ಡ ಡಿ ದಾ · · ವ ರೆ
|| ಧಸಧರಿಸಾ ಸನಿಧಾ ಧಪಾ ಮಪಧಸಸನಿ | ಧಪಮಗರಿಮಪದ || ೪ ||
ಬಂ · · ಡು ಕ · · ಣ್ಣಳಿಂ ದುಂಡು'ಸು· ಖ · ಸು · ರಿ · ವ · || ೪ ||
|| ರೀ ಸ ಸ ರಿ ರಿ ಸಾ | ರಿ ಸಾ ಸ ನಿ ಸ ನಿ ಧಾ ಧಾ ಧ ||
ಶ್ರೀ ಸು ರ ಪು ರ ರಾ ಜ ಧಾ ನಿ · ಯೊ · ಳ ಗೆ ನಿ
|| ರೀ ಸ ಸ ನಿ ಧಾ ಧಾ ಧ ಧ | ಧ ರಿ ರಿ ಸ ಸಾ ರಿ ರಿ ರಿ ರಿ ||
ವಾ ಸವಾ · · ಗಿ ಸ ಕ ಲಾ · ಭೀ · · ಷ್ಟೆಯ ತ ನ್ನ
|| ರೀ ಪ ಪಾ ಮ ಗ ರಿ ರಿ ರಿ | ಧಾ ಗ ರಿ ಸಾ ಸಾ ಸ ನಿ ಧಾ ಧ ಧ ||
ದಾ ಸ ರ · ವ ಸ ರ ಕೆ ಸ · ಲಿ ಸು ವ ಶ್ರೀ · · ಕ ಮ
|| ಧ ಸ ಧ ರಿ ಸಾ ಸ ನಿ ಧಾ ಧ ಪ ಪ | ಮ ಪ ಪ ಮ ಗ | ರಿ ಸ
ಲೇ · · · ಶ ವಿ · · · ಠ ಲ ನಾ · ದ ನ · ರ ·
ರಿ ಮ ಪಾ ಧಾ || ೫ ||
ಹ · ರಿ ಯ || ೫ ||

—o—

ಈ ಕೀರ್ತನೆ ನರ್ತನಕ್ಕೆ ಎಷ್ಟು ಹೊಂದಿಕೆಯಾಗಿದೆ. ಚರಣಗಳ ಕೊನೆಯಲ್ಲಿ ತ್ರ್ಯಶ್ರ ಮಿಶ್ರ ಖಂಡ ಸಂಕೀರ್ಣ ತಾಳಜಾತಿಗಳನ್ನು ಸಾಹಿತ್ಯಾಕ್ಷರದಲ್ಲಿ ಹೇಗೆ ಹುದುಗಿಸಿದ್ದಾರೆ, ಎಂಬುದನ್ನು ಗಾನ ಪಾರಂಗತರು ಪರಿಶೀಲಿಸಬೇಕು.

ವರ್ತಮಾನ ಕಾಲದಲ್ಲಿ ಪುರಂದರ ದಾಸರ ಕನ್ನಡ ಕೃತಿಗಳಿಗೆ ಪ್ರಾಪ್ತವಾದ ಗತಿ ತ್ಯಾಗರಾಜ ಪ್ರಭೃತಿಗಳ ತೆಲುಗು ಕೀರ್ತನೆಗಳಿಗೆ ಪ್ರಾಪ್ತವಾದೀತೆಂಬ ಭಯ ತಲೆದೋರುತ್ತಲಿದೆ. ತಮಿಳು ನಾಡಿನ ಜನರಿಗೆ ತೆಲುಗು ಕೀರ್ತನೆಗಳು ಬೇಕಾಗಿಲ್ಲ. ಸಂಗೀತವೆಲ್ಲಾ ತಮಿಳಾಗಬೇಕೆಂಬ ಚಳವಳಿ ಬಲಿಷ್ಠವಾಗಿದೆ. ವಿಶಾಲ ಮನಸ್ಕರು ಕಟ್ಟಿದ ತಡೆಯು ಗುಪ್ತ ಚಳವಳಿಗೆ ಬಾಧಕ

ವಾಗಿಲ್ಲ. ಸಂಗೀತ ದೃಷ್ಟಿಯಿಂದ ಅವಶಿಷ್ಟ ಮೈಸೂರು ಕನ್ನಡ ನಾಡಿನಲ್ಲಿ ಭಾಷೆಯ ಮತ್ತು ಗಾನ ಸಂಸ್ಕೃತಿಯ ಹೆಸರಿನಿಂದ ಬಿಸಿ ಹುಟ್ಟಿಲ್ಲ. ಬಿಸಿ ಹುಟ್ಟಲು ಮೈಸೂರಿನ ವಾತಾವರಣ ಅನುಕೂಲವಾಗಿಲ್ಲ. ಒಂದು ವೇಳೆ ತಮಿಳು ನಾಡಿನ ಸಂಗೀತ ತಮಿಳಾದರೆ ಕನ್ನಡ ನಾಡಿನ ಸಂಗೀತ ಕನ್ನಡವಾಗ ಬೇಕೆಂಬ ಬೇಡಿಕೆ ಬರಬಹುದು. ಅಷ್ಟು ಮಾತ್ರಕ್ಕಾದರೂ ಈಗಿನಿಂದ ಸಿದ್ಧತೆ ಯಿರಬೇಕು. ಬರಿಗೈಯಿಂದ ಬಾಯಿ ಭಾಗವತ ಹೇಳದರೆ ಮಾತಿಗೆ ಬೆಲೆ ಬರುವುದಿಲ್ಲ. ಅಂದ ಮಾತ್ರಕ್ಕೆ ಪ್ರಚಾರದಲ್ಲಿರುವ ತ್ಯಾಗರಾಜ ಪ್ರಭೃತಿಗಳ ದಿವ್ಯ ಕೀರ್ತನೆಗಳನ್ನು ಬಿಡಬೇಕೆಂದಲ್ಲ. ಕರ್ಣಾಟಕ ಸಂಸ್ಕೃತಿಯೆಂಬ ಹೆಸರಿಗಾದರೂ ಮಾನ ಕೊಡಲು ಸರಿಗರ್ಥ ಕನ್ನಡ ಗಾಯನವಿರಬೇಕು. ಹೀಗೆ ಮಾಡುವುದರಿಂದ ಗಾಯನದ ಸಂಪತ್ತು ಬೆಳೆಯುತ್ತದೆ ; ಸ್ವತ್ವವನ್ನು ಉಳಿಸಿಕೊಂಡಂತಾಗುತ್ತದೆ. ತ್ಯಾಗರಾಜರಂಥ ಮಹಾಪುರುಷರಿಗೆ ಭಾವೋ ದ್ರೇಕವನ್ನುಂಟುಮಾಡಿದ ಪುರಂದರ ದಾಸರ ಕೀರ್ತನೆಗಳು ಕಾಲಕ್ಕೆ ಮಾದರಿ ಯಾಗಲಾರವೆಂಬ ಭಯವಿಲ್ಲ. ಕಳೆದುಕೊಂಡ ನಾಡನ್ನೂ ಸಂಸ್ಕೃತಿಯನ್ನೂ ಮತ್ತೆ ಗಳಿಸುವ ಶಕ್ತಿ ಕನ್ನಡ ಜನಕ್ಕಿಗಿಲ್ಲ. ಇದ್ದಷ್ಟನ್ನು ಉಳಿಸಿಕೊಂಡರೆ ಅದು ದೊಡ್ಡ ಸಂಪತ್ತು. ಅಚ್ಚ ಕನ್ನಡ ನಾಡಿನಲ್ಲಿ ನೆರೆಯುವ ಗಾನಗೋಷ್ಠಿ ಗಳಲ್ಲಿ ಕುಳಿತರೆ–ಗಾಯಕರು ಕನ್ನಡಿಗರಾದರೂ ಕನ್ನಡ ತನದ ಕುರುಹಿಗಾಗಿ ಕನ್ನಡ ನಾಂದೀಪ್ರಬಂಧವೊಂದನ್ನು ಸಹ ಆರಂಭದಲ್ಲಿ ಹಾಡುವುದಿಲ್ಲ ಕಡೆಯ ತನಕ ಕಾದರೆ–ಜನರ ಬೇಡಿಕೆ ಬಂದರೆ–ಕೇಳುವುದಕ್ಕೆ ಸಿಗುವುದ. ಒಂದೋ ಎರಡೋ ದೇವರನಾಮ. ಇದು ಕಾರಣ ಉತ್ತರ ಕರ್ಣಾಟಕ ದವರು ಕರ್ಣಾಟಕ ಗಾಯನವೆಂದರೆ ಮೂಗು ಮುರಿಯುತ್ತಾರೆ. ನಮ್ಮ ಕಾಲದ ಕನ್ನಡ ವಾಗ್ಗೇಯಕಾರರಿಗೆ ಸ್ವರ ಚಿಟ್ಟೆಗಳನ್ನು ಬರೆದುಕೊಂಡು ತೆಲುಗು ಸಾಹಿತ್ಯವನ್ನು ಬಲ್ಲವರಿಂದ ಬರೆಸಿ ಹಾಡಿ ಹೆಸರು ಪಡೆಯಬೇಕಾದ ಅವಶ್ಯಕತೆ ಈಗ ಇರುವುದಿಲ್ಲ. ಅದೇ ಚಿಟ್ಟೆಗೆ ಕನ್ನಡ ಸಾಹಿತ್ಯ ಬರೆದು ಹಾಡಿ ದರೆ ರಸ ಕಸವಾಗುವುದಿಲ್ಲ. ಹೊರಗಿನವರಿಗೆ ಅರ್ಥವಾಗುವುದಿಲ್ಲವೆನ್ನಲು ಆ ನಾಡುಗಳಿಂದ ಬರುವ ಗಾಯನ ಬೇಡಿಕೆಗಳು ಕನ್ನಡ ಗಾಯಕರಿಗೆ ಆಶಾಜನಕವಾಗಿಲ್ಲ. ಕಲಾಭಿಮಾನಿಗಳಾದ ಮೈಸೂರರಸರ ಆಶ್ರಯವಿರ ದಿದ್ದರೆ ಕನ್ನಡ ಗಾಯಕರಿಗೆ ತಮ್ಮ ಸಂಸ್ಕೃತಿಯನ್ನು ಕಾದಿಟ್ಟುಕೊಳ್ಳಲು

ಸಾಧ್ಯವಾಗುತ್ತಿರಲಿಲ್ಲ. ಇವೆಲ್ಲವನ್ನೂ ಸಮಾಜದ ಗಾನ ಪ್ರೇಮಿಗಳೂ ಗಾಯಕರೂ ಯೋಚಿಸಬೇಕು.

ಎಷ್ಟು ಬಗೆಯಿಂದ ವಿಚಾರಿಸಿದರೂ ದೇವತಾ ವಿದ್ಯ ಸಂಗೀತ. ವಿವಿಧ ಸಂಪ್ರದಾಯಗಳಿದ್ದರೂ ಪರಿಪೂರ್ಣತೆಯ ಪರಮಾವಧಿಯನ್ನು ಮುಟ್ಟಿರುವುದು ಕರ್ಣಾಟಕ ಸಂಗೀತ. ಇಂತಹ ಕಲೆಯು ಶಾಸ್ತ್ರಮಾರ್ಗ ಬಿಟ್ಟು ಸ್ವಚ್ಛಂದವಾಗಿ ಹರಿದು ಹೋಗುತ್ತಿದೆಯೇ, ಶಾಸ್ತ್ರಮಾರ್ಗದಲ್ಲಿದೆಯೇ, ಇದ್ದರೆ ತುಂಗಭದ್ರೆಯನ್ನೇಕೆ ದಾಟುತ್ತಿಲ್ಲ, ಎಂಬ ಎಲ್ಲದರ ಪರಿಶೀಲನೆಯಾಗಬೇಕು. ಭರತಮುನಿ, ಶಾರ್ಙ್ಗದೇವ, ಪುಂಡರೀಕ ವಿಠಲ, ವೆಂಕಟಮಖಿ, ತುಳಾಜ ಮಹಾರಾಜ, ಇವರೆಲ್ಲರ ಲಕ್ಷಣ ಗ್ರಂಥಗಳನ್ನೂ ವಿಮರ್ಶೆಗೆ ತೆಗೆದುಕೊಳ್ಳಬೇಕು. ಲಕ್ಷಣವು ಪ್ರಯೋಗಕ್ಕೆ ಯೋಗ್ಯವಾಗದಿದ್ದರೆ ಲಕ್ಷ್ಯವನ್ನೇ ಲಕ್ಷಣವೆಂದು ಶಾಸ್ತ್ರಬದ್ಧಮಾಡಬೇಕು. ಎರಡು ಶತಮಾನಗಳ ಹಿಂದೆ ಕರ್ಣಾಟಕ ಸಂಗೀತ ಉತ್ತರ ಭಾರತದಲ್ಲಿ ಹಿರಿದಾಗಿ ಅಭಿರುಚಿ ಹುಟ್ಟಿಸಿರಲು ಕಾರಣವೇನು, ಪ್ರಯಾಣ ಸೌಕರ್ಯ ಹೆಚ್ಚಿ ಎಲ್ಲವೂ ಸಮರಸವಾಗಿರಬೇಕಾದ ಈ ಕಾಲದಲ್ಲಿ ಹುಟ್ಟಿಸದಿರಲು ಕಾರಣವೇನು, ಎಂಬ ದೊಡ್ಡ ಸಮಸ್ಯೆ ಪರಿಹಾರವಾಗಬೇಕು. ಅದು ಬಿಟ್ಟು ದಿನದಿನಕ್ಕೆ ಪ್ರಾಂತ್ಯ ಪ್ರಾಂತ್ಯಕ್ಕೆ ಸಂಗೀತ ಪದ್ಧತಿ ಬೇರೆಯಾಗುತ್ತ ಬಂದರೆ, ಭರತಖಂಡವನ್ನು ಹರಿದು ಹಂಚಲು ಹೊರಟಿರುವ ಪಾಕಿಸ್ಥಾನ ದ್ರವಿಡಸ್ಥಾನ ಸಿಕ್ಕಿಸ್ಥಾನ ಆ ಸ್ಥಾನ ಈ ಸ್ಥಾನ ಮೊದಲಾದ ಅರ್ಥವಿಲ್ಲದ ಸ್ಥಾನಗಳಂತೆ ಅಪಹಾಸ್ಯಕ್ಕೆ ಗುರಿಯಾಗಿಬಿಡುವುದು. ಎಲ್ಲ ಅವ್ಯವಸ್ಥೆಗಳಿಗೆ ಶಾಸ್ತ್ರೀಯ ಶಿಕ್ಷಣವಿಲ್ಲದಿರುವುದು ಕಾರಣ. ರಾಜ್ಯಾಂಗದ ವೈದ್ಯ ವಿದ್ಯೆಗೆ ಶಿಲ್ಪವಿದ್ಯೆಗೆ ವಿಜ್ಞಾನ ವಿದ್ಯೆಗೆ ಕಲಾಶಾಲೆಗಳಿರುವಂತೆ ಸಂಗೀತಕ್ಕೆ ಕಲಾಶಾಲೆಯಾಗಬೇಕು. ಪ್ರಯೋಗ ಪರೀಕ್ಷಣಗಳಿಂದ ಕಲೆಯು ವೃದ್ಧಿ ಹೊಂದಬೇಕು. ಲಕ್ಷಣ ಗ್ರಂಥಗಳು ಸಂಸ್ಕೃತದಲ್ಲಿರುವ ಕಾರಣ ಸಂಗೀತ ಕಲಿಯುವವನು ಮೊದಲಿನಿಂದ ಸಾಹಿತ್ಯವನ್ನು ಕಲಿಯಬೇಕು. ಶಾಸ್ತ್ರಸಹಿತ ಸಂಗೀತವನ್ನು ಅಭ್ಯಾಸ ಮಾಡಬೇಕು. ಅಕ್ಷರ ವಿದ್ಯೆಗಳನ್ನು ಕಲಿಸುವ ಶಾಲೆಗಳಲ್ಲಿ ಗುಂಪು ಸೇರಿಸುವಂತೆ ಸಂಗೀತ ಶಾಲೆಯಲ್ಲಿ ಸೇರಿಸುವುದು ಸಾಧ್ಯವಲ್ಲ. ಹಾಳೆಗಳನ್ನು ಮಗುಚಿ ಟಿಪ್ಪಣಿ ಬರೆಸುವ ವಿದ್ಯೆ ಸಂಗೀತವಲ್ಲ. ಪ್ರತಿ ವಿದ್ಯಾರ್ಥಿಗೆ ಸ್ವರರಾಗ ಭಾವಗಳು ಕುದುರುವವರೆಗೆ ಪ್ರತ್ಯೇಕವಾದ ಅಭ್ಯಾಸವಾಗಬೇಕು.

ವಿವಿಧ ತರಗತಿಗಳನ್ನೇರ್ಪಡಿಸಿ ಪರಮಾವಧಿಯ ತರಗತಿಯಿಂದ ವರ್ಷಕ್ಕೆ ನಾಲ್ಕಾರು ಜನರು ಉತ್ತೀರ್ಣರಾಗುವಂತೆ ಮಾಡಿದರೆ ಇಷ್ಟೊಂದು ಪರಿಶ್ರಮಕ್ಕೆ ಫಲ ದೊರಕುವುದು. ಅವರಿಂದ ಗಾನ ಸಂತತಿ ಬೆಳೆಯುವುದು. ಕೋಟಿ ಕೋಟಿ ಜನಸಂಖ್ಯೆಯುಳ್ಳ ಭರತಖಂಡದಲ್ಲಿ ಇಂಥದೊಂದು ಶಾಲೆಯಿರದಿರುವುದು ದೇಶಕ್ಕೆ ದೊಡ್ಡ ಅಪಮಾನ. ಕರ್ಣಾಟಕ ಸಂಗೀತವೆಂದು ಹೆಸರು ಪಡೆದು–ಕನ್ನಡ ಲಕ್ಷಣಕಾರರಿಂದ ಶಾಸ್ತ್ರಬದ್ಧವಾದ ಸಂಸ್ಕೃತಿ ಯಿದಾಗಿರುವುದರಿಂದ–ಕರ್ಣಾಟಕಕ್ಕೆ ಕೇಂದ್ರವಾಗಿರುವ ಮೈಸೂರಿನಲ್ಲಿ ಇಂಥದೊಂದು ಕಲಾಶಾಲೆಯಾಗುವುದು ಕನ್ನಡ ನಾಡಿಗೆ, ರಾಜರಿಗೆ, ಪ್ರಜೆಗಳಿಗೆ, ಎಲ್ಲರಿಗೆ ಭೂಷಣ.

ಸಂಗೀತ ಯಾರಿಗೆ ಬೇಡ ? ಅಳುವ ಮಕ್ಕಳನ್ನು ನಗಿಸುವುದು ಸಂಗೀತ. ಮದುವೆ ಮುಂಜಿಗಳಲ್ಲಿ ಮಂಗಳ ಮಂಟಪಗಳನ್ನು ಬೆಳಗಿಸುವುದು ಸಂಗೀತ. ರಾಜ ದರ್ಬಾರುಗಳನ್ನು ಕಳೆಕಟ್ಟಿಸುವುದು ಸಂಗೀತ. ರಣರಂಗದಲ್ಲಿ ವೀರರನ್ನು ಹುರಿಗೊಳಿಸುವುದು ಸಂಗೀತ. ಮಾನವನ ಬಾಳಿನ ಆದಿಯಿಂದ ಅಂತ್ಯದವರೆಗೆ ಸಂಗೀತ. ಜೀವನಕ್ಕೆ ಇಷ್ಟೊಂದು ಹೊಂದಿರುವುದರಿಂದ ದೇವತಾವಿದ್ಯವೆನಿಸಿತು ಸಂಗೀತ. ಶಾಸ್ತ್ರಗಳು ಸ್ವಾಮಿಯನ್ನು ಸಾಮಗಾನ ಪ್ರಿಯನೆಂದು ಹೊಗಳಿದವು. ಪುರಾಣಗಳು ಪರಮ ಪುರುಷನ ಸಭೆಯನ್ನು ಗಂಧರ್ವರ ಗಾನದಿಂದ ಅಪ್ಸರೆಯರ ನರ್ತನದಿಂದ ಕಳೆಗಟ್ಟಿಸಿದವು. ಯಾಜ್ಞವಲ್ಕ್ಯನಾರದ ತುಂಬುರರು ಸಂಗೀತದಿಂದ ಪರಮಾರ್ಥನೆಯಿದೆಯೆಂದರುಹಿದರು. ಆಚಾರ್ಯರುಗಳಲ್ಲಿ ಶುಕರು ಕೀರ್ತನಕ್ಕೆ ಆದ್ಯಪ್ರವರ್ತಕರಾದರು. ಆ ಪರಂಪರೆಯನ್ನು ಕರ್ಣಾಟಕದ ಹರಿದಾಸರು ಅನುಸರಿಸಿದರು. ಅವರಲ್ಲಿ ಪುರಂದರ ದಾಸರು ಅತ್ಯಂತ ಪ್ರಖ್ಯಾತರಾದರು. ಹುಟ್ಟಿದ ಮಕ್ಕಳ ಜೋಗುಳದಿಂದ ಕುಟ್ಟಿ ಬೀಸಿ ಹೊರುವ ಕಾಯಕಗಳಲ್ಲೆಲ್ಲಾ ಮನಸ್ಸಿನ ಹೊರೆಯನ್ನಿಳಿಸುವ ದೇವತಾ ಕಥೆಗಳುಳ್ಳ ಹಾಡುಗಳಿಂದ ನೀತಿಯನ್ನು ಬೋಧಿಸಿ ಜೀವನವನ್ನು ರಸಮಯವಾಗುವಂತೆ ಮಾಡಿದರು.

ಈ ಪೈಕಿ ಏಕಾಂಶ ಕಾರ್ಯ ಮಾಡಿದ್ದರೂ ಪಾಶ್ಚಾತ್ಯರು ನೂರಾಗಿ ಹೊಗಳಿ ಸಾವಿರವಾಗಿ ಪ್ರಚಾರ ಮಾಡಿ ಲಕ್ಷವಾಗಿ ಶೇಖರಿಸಿ ಸ್ಮಾರಕ ಮಂದಿರಗಳನ್ನು ಕಟ್ಟುತ್ತಾರೆ. ಅಧೀನ ಜನಾಂಗಗಳ ತನುಮನಗಳನ್ನು ವಿದ್ಯಾಭ್ಯಾಸದ

ನೆಪದಿಂದ ತಮ್ಮದನ್ನಾಗಿ ಮಾಡಿಕೊಳ್ಳುತ್ತಾರೆ. ಅಧೀನರು ತಮ್ಮನ್ನು ತಾವು ಮರೆಯುತ್ತಾರೆ. ಅದರ ಪರಿಣಾಮವಾಗಿ ನಮ್ಮ ಕಾಲೇಜುಗಳ ಹಳೆಯ ಹುಡುಗರೆನಿಸಿದ ಮುದುಕರಿಂದ ಇಂದಿನ ಹುಡುಗರ ತನಕ ಕೇಳಿದರೂ ಷೇಕ್ಸ್ ಫಿಯರನ ನೂರಾರು ನಾಟಕ ವಾಕ್ಯಗಳನ್ನು ದಹರಿಸುತ್ತಾರೆ. ಅವನಿಗೆ ಸಮಾನ ಕಾಳಿದಾಸನ ಹೆಸರೆತ್ತುವುದಿಲ್ಲ. ಅವನ ಒಂದು ಶ್ಲೋಕವನ್ನು ಕಲಿಯುವುದಿಲ್ಲ. ವ್ಯಾಸ ವಾಲ್ಮೀಕರ ಹೆಸರಿರಲಿ, ದಾಸರ ಹೆಸರೇ ಪಠ್ಯ ಪುಸ್ತಕದಲ್ಲಿ ಬರೆದಿರುವ ನಾಲ್ಕು ಪಙ್ತಿಗಳಿಗಿಂತ ಹೆಚ್ಚಾಗಿ ಗೊತ್ತಾಗಿಲ್ಲ. ನಮ್ಮ ಗಾಯಕರನ್ನು ಕೇಳಿದರೆ "ಲಂಬೋದರ" ಹೇಳುತ್ತಾರೆ. ಯಾರಿಗಾದರೂ ಸ್ವಾಭಿಮಾನ ಹುಟ್ಟುವ ಕಾಲವಿದು. ಸ್ವಾತಂತ್ರ್ಯ ಹೋರಾಟದ ಬಿಸಿ ಭಾರತಕ್ಕೆ ಬಹುವಾಗಿ ಬಡಿದಿದೆ. ಯುದ್ಧರಂಗವಾಗಿರದಿದ್ದರೂ ಅನ್ನವಸ್ತ್ರಗಳ ಯುದ್ಧರಂಗವಿದಾಗಿದೆ. ಲಂಡನ್ ಪಟ್ಟಣದ ಪುನರ್‌ರಚನೆಯು ಐವತ್ತು ವರ್ಷಗಳೊಳಗಾಗಬೇಕೆಂಬುದನ್ನು ಆಳರಸರು ಆಗಲೇ ಬರೆದಿಟ್ಟುಕೊಂಡಿದ್ದಾರೆ. ಆ ಶ್ರೀಮಂತಿಕೆ ನಮಗಿಲ್ಲ. ನಮ್ಮ ಸಂಸ್ಕೃತಿಯ ಪುನರ್‌ರಚನೆಯನ್ನಾದರೂ ನಾವು ಮಾಡಿಕೊಳ್ಳಬೇಕು. ಆಳರಸರ ಮಾತಿನಂತೆ ಭಾರತವು ಸ್ವತಂತ್ರ ರಾಷ್ಟ್ರವಾದರೆ ಭರಣವಿಲ್ಲದ ಬರಿಮನೆಯಲ್ಲಿ ಬಾಳುವೆ ಮಾಡಲು ಬರುವುದಿಲ್ಲ. ರಾಷ್ಟ್ರವೆಂದರೆ ಬರೀ ಕಲ್ಲುಮಣ್ಣುಗಳಲ್ಲ. ಸಂಗೀತ ಸಾಹಿತ್ಯ ಕಲೆ ತತ್ವ ಶಾಸ್ತ್ರ ಮೊದಲಾದವುಗಳಿಂದ ಜನಾಂಗವು ನಾಗರೀಕವಾಗಿದ್ದರೆ ಅದು ರಾಷ್ಟ್ರವೆನಿಸುತ್ತದೆ. ಅದು ಸ್ವತಂತ್ರವಾಗಿ ಬಾಳಲು ಸಮರ್ಥವಾಗುತ್ತದೆ. ಹಿಂದೂ ರಾಷ್ಟ್ರದ ಹಿಂದುಗಳು ಜಾಗ್ರತರಾಗಬೇಕು. ಸಂಘಟಿತರಾಗಬೇಕು. ಜಾತಿ ಮತ ಭಾಷೆಗಳ ಸಂಕುಚಿತ ಭಾವನೆ ಬಿಡಬೇಕು. ಸಂಸ್ಕೃತಿಗಾಗಿ ಸಂಸ್ಕೃತಿಯನ್ನು ಬೆಳೆಸಿ ಹಂಚಬೇಕು. ಪ್ರಭುತ್ವದವರು ಇದಕ್ಕೆ ಸಹಾಯ ಮಾಡಬೇಕು.

ಸಂಗೀತ ಸಾಹಿತ್ಯ ಮತಬೋಧನೆ ನೀತಿಬೋಧನೆ ಸಮಾಜ ರಚನೆಗಳ ವಿಷಯದಲ್ಲಿ ಹರಿದಾಸರು ಮಾಡಿದ ಸೇವೆ ಅಪಾರವಾದುದು. ಆ ಸಂಪತ್ತನ್ನು ಳಿಸಿಕೊಂಡು ಅಭಿವೃದ್ಧಿಗೊಳಿಸಿ ಕರ್ಣಾಟಕದ ಧ್ವಜವನ್ನು ಎತ್ತಿಹಿಡಿಯುವ ಭಾರ ಕನ್ನಡಿಗರದು. ಸಂಗೀತಕ್ಕೆ ಸಂಬಂಧಪಟ್ಟ ಅಧ್ಯಾಯವಿದಾದುದರಿಂದ

ಸಂಗೀತದ ಆಚಾರ್ಯ ಪುರುಷರು ಪುರಂದರ ದಾಸರಾದುದರಿಂದ ಅವರ ಸಂಗೀತವನ್ನು ವಿಮರ್ಶಿಸಿ ಗಾನ ಗೋಷ್ಠಿಗಳಲ್ಲಿ ವ್ಯಾಪಿಸುವಂತೆ ಮಾಡಿದರೆ ಅವರ ಸ್ಮಾರಕವಾಗುವುದೆಂದೂ, ಕನ್ನಡ ಜನತೆಗಾಗಿ ದಾಸರು ಮಾಡಿದ ತ್ಯಾಗವು ಸಾರ್ಥಕವಾಗುವುದೆಂದೂ ಸೂಚಿಸುವೆವು.

# ಅಧ್ಯಾಯ ೩

## ೧. ಹರಿದಾಸರ ಜ್ಞಾನ ಭಕ್ತಿ ವೈರಾಗ್ಯಗಳು

ಭಗವದ್ಗೀತಾದಿ ಶಾಸ್ತ್ರಗಳಲ್ಲೂ ಸಂತರ ಗ್ರಂಥಗಳಲ್ಲೂ ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಪ್ರತ್ಯೇಕ ಸಾಧನ ಮಾರ್ಗಗಳೆಂದು ಕರೆದಿರುವಂತೆ ಗೋಚರವಾಗುತ್ತದೆ. ಜ್ಞಾನಯೋಗ, ಭಕ್ತಿಯೋಗ, ಎಂದು ಕರೆಯುವಂತೆ ವೈರಾಗ್ಯವನ್ನು ವೈರಾಗ್ಯಯೋಗವೆಂದು ಎಲ್ಲೂ ಕರೆದಿಲ್ಲ. ಜ್ಞಾನ, ಭಕ್ತಿಗಳಿಂದ ಪ್ರಾಪ್ತವಾಗುವುದು ವಿಷಯ ವೈರಾಗ್ಯವಾದುದರಿಂದ ಪ್ರತ್ಯೇಕವಾಗಿ ಅದನ್ನು ವೈರಾಗ್ಯ ಯೋಗವೆಂದು ಕರೆಯಬೇಕಾದುದಿಲ್ಲ. ಜ್ಞಾನ, ಭಕ್ತಿ, ವೈರಾಗ್ಯಗಳು ಒಂದನ್ನೊಂದು ಬಿಟ್ಟಿರುವುದಿಲ್ಲ. ಯಥಾರ್ಥ ಜ್ಞಾನವಾಗುತ್ತಲೇ ಜ್ಞೇಯ ವಸ್ತುವಿನಲ್ಲಿ ಭಕ್ತಿ ಸಹಜವಾಗಿ ಹುಟ್ಟುತ್ತದೆ. ಜ್ಞಾನ ಭಕ್ತಿಗಳಿಂದ ತನ್ಮಯನಾದರೆ ವಿಷಯ ವಾಸನೆ ತಾನಾಗಿ ಕಳಚಿ ವೈರಾಗ್ಯ ವುಂಟಾಗುತ್ತದೆ. ನಿತ್ಯವೂ ಸತ್ಯವೂ ಆದ ವಸ್ತುವಿನ ಯಥಾರ್ಥ ತಿಳಿವಳಿಕೆಗೆ ಜ್ಞಾನವೆಂದು ಹೆಸರು. ಭಗವಾನ್ ಶ್ರೀ ಕೃಷ್ಣನು—

> ಯತ್‌ಜ್ಞಾತ್ವಾ ನಪುನರ್ಮೋಹಂ ಏವಂ ಯಾಸ್ಯಸಿ ಪಾಂಡವ
> ಸರ್ವಂ ಜ್ಞಾನ ಪ್ಲವೇನೈವ ವೃಜಿನಂ ಸಂತರಿಷ್ಯಸಿ
> ಜ್ಞಾನಾಗ್ನಿ ಸ್ಸರ್ವಕರ್ಮಾಣಿ ಭಸ್ಮಸಾತ್ಕುರು ತೇರ್ಜುನ
> ನಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೆ

ಎಂಬ ವಾಕ್ಯಗಳಿಂದ ಅರ್ಜುನನಿಗೆ ಜ್ಞಾನದ ದೊಡ್ಡಸ್ತಿಕೆಯನ್ನು ಉಪದೇಶಿಸಿರುತ್ತಾನೆ. ಭಕ್ತಿ ಶಬ್ದಕ್ಕೆ ಅನೇಕರು ಅನೇಕ ರೀತಿಯಿಂದ ವ್ಯಾಖ್ಯಾನ ಮಾಡಿರುತ್ತಾರೆ. ಭಾಗವತ ಧರ್ಮಿಗಳು—"ನಿರವಧಿಕ ಅನಂತ ಅನವದ್ಯ ಕಲ್ಯಾಣ ಗುಣತ್ವ ಜ್ಞಾನಪೂರ್ವಕಃ ಸ್ವಾತ್ಮೀಯ ಸಮಸ್ತವಸ್ತುಭ್ಯೋ ಅನೇಕ ಗುಣಾಧಿಕೋ ಅಂತರಾಯ ಸಹಸ್ರೇಣಾಪಿ ಅಪ್ರತಿಬದ್ಧೋ ನಿರಂತರ ಪ್ರೇಮ ಪ್ರವಾಹ:" ಎಂಬದಾಗಿ ನಿರ್ವಚನ ಮಾಡಿರುತ್ತಾರೆ. ಅಂದರೆ–ನಿರವಧಿಕ, ಅನಂತ, ಅನವದ್ಯ, ಕಲ್ಯಾಣ ಗುಣಗಳಿಂದ ಕೂಡಿರುವವನು ಶ್ರೀ ಹರಿಯೆಂಬ

ಜ್ಞಾನಪೂರ್ವಕವಾಗಿ, ಸಹಸ್ರ ವಿಘ್ನಗಳು ಬಂದರೂ ತನ್ನಲ್ಲಿ, ತನ್ನವರಲ್ಲಿ, ಸಮಸ್ತ ವಸ್ತುಗಳಲ್ಲಿ, ಅನೇಕ ಗುಣಾಧಿಕವಾಗಿ ತಡೆಯಿಲ್ಲದೆ ನಿರಂತರ ಮಾಡುವ ಪ್ರೇಮ ಪ್ರವಾಹವೆಂದು ಭಕ್ತಿ ಶಬ್ದಕ್ಕೆ ಅರ್ಥವಾಗುತ್ತದೆ.

ವೈರಾಗ್ಯವೆಂದರೆ ತನ್ನ ಯೋಗ್ಯತೆಗೆ ಯಾವುದು ಯೋಗ್ಯವೋ ಅದನ್ನು ತನ್ನ ದೇಹ ರಕ್ಷಣೆಗಾಗಿ ಇಂದ್ರಿಯಗಳ ದ್ವಾರಾ ಸ್ವೀಕರಿಸಿ, ಇತರ ವಿಷಯಗಳಲ್ಲಿ ಅಪೇಕ್ಷೆಯನ್ನು ಬಿಡುವುದು ಎಂದರ್ಥವಾಗುತ್ತದೆ. ಈ ಮೂರೂ ಒಂದಾಗುತ್ತಲೊಂದು ತನ್ನಿಂದ ತಾನೇ ಹೊಂದಿಕೊಂಡು ಬರತಕ್ಕವುಗಳು. ಈ ಅರ್ಥಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಹರಿದಾಸರು ಒಂದೊಂದು ಸ್ಥಳದಲ್ಲೂ ವಿಸ್ತರಿಸಿ ಭಾಷೆಯಲ್ಲಿ ಹೊಂದಿಸಿ ಸಮಾಜಕ್ಕೆ ಉಪದೇಶಿಸಿರುತ್ತಾರೆ.

ವಿಜಯದಾಸರು "ಗುರೋಸ್ತು ಮೌನಂ ವ್ಯಾಖ್ಯಾನಂ" ಎಂಬ ಮಾತನ್ನು ಮನಸ್ಸಿನಲ್ಲಿಟ್ಟುಕೊಂಡೋ ಎಂಬಂತೆ "ಜ್ಞಾನ ಸುಳಾದಿ" ಯಲ್ಲಿ ಜ್ಞಾನಿ ಹೇಗಿರಬೇಕೆಂಬುದನ್ನು ತಿಳಿಸಿರುತ್ತಾರೆ.

### ಜ್ಞಾನ ಸುಳಾದಿ
### ಧ್ರುವ ತಾಳ

ಜ್ಞಾನವೆಂಬುವದಿದೆ । ಕೇವಲಾಧಿಕಾರಿಗೆ । ಮೌನದಲ್ಲಿಪ್ಪುದೆ ಮುಖ್ಯವಯ್ಯ ।
ಕಾನನ ಪಟ್ಟಣ । ಸಮನಾಗಿ ತಿಳಿದು । ಅಜ್ಞಾನಿಯಂತಿರಬೇಕು ನೋಳ್ಪರಿಗೆ ।
ಏನೇನು ಆದರಿಂದ । ಮಾತವೆಗ್ಗಳಿಸಲು । ಸ್ಥಾಣೂಪಾದಿಯಲ್ಲಿ । ತೋರಬೇಕು
ಕಾಣಿಸಿಕೊಳ್ಳದೆ । ಇರಬೇಕು ಕಂಡರು । ನಾನಲ್ಲವೆಂದೂ । ಜಗದಿ ಹರಿಯ
ಧ್ಯಾನಮಾಡಬೇಕು । ಅಡಿಗಡಿ ಮರೆಯದೆ । ಪ್ರಾಣೇಂದ್ರಿಯಗಳಲ್ಲಿ । ನಿತ್ಯದಲಿ।
ಏನೇನು ಮಾಡುವ । ವ್ಯಾಪಾರ ಧರ್ಮಗಳ । ವಾಣಿಯರಸ ಮಿಕ್ಕ । ಸುರರು ಮಾಳ್ಪರೆಂದು
ಹಾನಿವೃದ್ಧಿಗಳಿಗೆ। ಕರ್ತೃ ನಾನಲ್ಲವೆಂದು । ಜಾಣನಾಗಿತಾ । ತಿರುಗುತಲಿಪ್ಪುದು
ಈ ನೀತಿಯನ್ನೆ ತಿಳಿದು । ತಿಳಿಸಿಕೊಟ್ಟದರಿಂದ । ನಾನೆಂಬಸೊಲ್ಲು ಹರಿಯಿತ್ತು ದೆಂದು
ಜ್ಞಾನಿಯಾದವ ಇನಿತು । ಇರಬೇಕು ಇದ್ದರೆ । ಹಾನಿಯೆಂಬೋದಿಲ್ಲ ಗಣಿಸಿದರು

ಆನಂದದಿಂದಲಿ ಸರ್ವಕಾಲದಲಿ ನು । ಡ್ವಾನೆ ಯಂದದಿ ನೀ ತಿರುಗುತಿರು
ಮಾನವರೊಳು ಮೆ । ಲ್ಲನೆ ಜುಣುಗಾಡುತ್ತ । ಕೇಣಿ ಸಂತೋಷವನು । ಬೇಡಿಕೊಳದೆ
ಕಾಣಿ ಮೊದಲಾದ ಲಾಭ । ಬಯಸದೆ ನಿತ್ಯದಲಿ । ಏನು ದೊರಕಿದರು । ಭುಂಜಿಸುತ
ರಾಣಿ ಮಿಕ್ಕಾದವರು । ಹರಿಯ ಸೇವಕರೆಂದು । ಮಾನಸ ಕಾಯ ವಾಚ । ದಲ್ಲಿ ತಿಳಿದು
ಜ್ಞಾನ ಪರಿಪೂರ್ಣ । ವಿಜಯ ವಿಠಲನಂಘ್ರಿ । ರೇಣು ಕೊಂಡಾಡು । ಭಕತರೊಳೋಲಾಡು ॥ ೧ ॥

## ಮಟ್ಟ ತಾಳ

ಭೂತ ಪ್ರಾಣಿಗಳೆಲ್ಲ । ಹರಿಯ ಪ್ರತಿಮೆಯೆಂದು । ಮಾತುಮಾತಿಗೆ ತಾನು । ಮರೆಯದೆ ಸ್ಮರಿಸುತ
ಈ ತೆರದಲಿ ಸಾಂಖ್ಯ । ಶಾಸ್ತ್ರವ ನಿಶ್ಚೈಸಿ । ಶೀತೋಷ್ಣ ಸಮವೆಂದು । ಸಂತತದಲಿ ತಿಳಿದು
ಖ್ಯಾತಿಯಾಗದೆ ಜಗಕೆ । ಪೇಳದೆ ಗುಪ್ತದಲಿ । ಗಾತುರ ಮಲಿನನಂತೆ । ಸಂಚರಿಸುತಲಿದ್ದು
ಶ್ರೀತರುಣೀ ಸರ್ವ ಜೀವರಾಶಿಗಳ । ಖ್ಯಾತನಾದ ಹರಿಯ ಆಧೀನವೆಂದು
ಆತುಮದಿಂದಲಿ ಅತಿಶಯವನೆ ತಿಳಿದು । ಮಾತು ಮಾತಿಗೆ ಅನುಭವಕೆ ತರಲಿಬೇಕು
ಸೀತಾಂಶುವದನ ವಿಜಯ ವಿಠಲನ । ದೂತರ ಸಂಗಡ ಓಡಾಡಲಿಬೇಕು ॥೨॥

## ತ್ರಿಪುಟೆ ತಾಳ

ನಿಂದಲ್ಲಿ ಕುಳಿತಲ್ಲಿ ನೆರೆಮಾತನಾಡುವಲ್ಲಿ । ಬಂದು ಪೋಗುವಲ್ಲಿ ತಿರುಗುವಲ್ಲಿ
ನಿಂದೆ ಬರೂವಲ್ಲಿ ನಿಶ್ಚಿಂತನಾದಲ್ಲಿ । ವಂದನೆ ಬರುವಲ್ಲಿ ವಾಕ್ಯದಲ್ಲಿ
ಮಂದಿ ನೆರೆದಲ್ಲಿ ಮಂದರಲ್ಲಿದ್ದಲ್ಲಿ । ಮಂದಿರದಲಿ ಕೆಲಸ ಮಾಡುವಲ್ಲಿ
ತಂದುಕೊಡುವರಲ್ಲಿ ತೆಗೆದುಕೊಂಬುವರಲ್ಲಿ । ಬಂಧನದಲ್ಲಿ ಮಹಾಭಾಗ್ಯದಲ್ಲಿ
ಮಂದಹಾಸದಲ್ಲಿ ಮೇಳವಾಡುವಲ್ಲಿ । ದುಂದುಭಿ ವಾದ್ಯಗಳ ಕೇಳುವಲ್ಲಿ

ಕಂದೆರೆದು ನೋಡುವಲ್ಲಿ ಕವಳ ಮೆಲುವಲ್ಲಿ । ಗಂಧ ಕೊಂಬುವಲ್ಲಿ ಶಕ್ತ್ಯೈಸಲ್ಲಿ
ಮುಂದೆ ಪಿಡಿವಲ್ಲಿ ಗುಹ್ಯಕರ್ಮದಲ್ಲಿ । ಒಂದೊಂದು ಬಗೆ ವ್ಯಾಪಾರದಲ್ಲಿ
ಪೊಂದಿಕೊಂಡಿಪ್ಪರಲ್ಲಿ ದೂರ ಬಿಟ್ಟವರಲ್ಲಿ । ಹಿಂದೆ ಆಡುವರಲ್ಲಿ ಹಿತವರಲ್ಲಿ
ಸಂದೇಹವಿಡಿಯದೆ ವಿಜಯ ವಿಠಲನ ಎಂದೆಂದು ನೆನೆಸು ಒಂದೆ ಮನದಲ್ಲಿ॥೩॥

## ಅಟ್ಟೆ ತಾಳ

ಪಶು ವಾಜಿ ಗಜ ಮತ್ತೆ ಶಿಶುವು ಮಡದಿ ಮಗ । ಸೊಸೆ ಬಂಧು ಬಳಗ
ರಾಜಿಸುವ ನಾನಾ
ಕುಶಲ ಮನುಜ ಮಿತ್ರ ಪರಿವಾರ ಮೊದಲಾದ । ವಶರಾದ ಮಾನಿಸ ಮಿಕ್ಕ
ಜೀವ
ಪ್ರಸರಗಳಿಗೆ ನಿತ್ಯ ರಸರಸ ಉಣಿಸುತ । ವಸನ ಭೂಷಣ ದಿವ್ಯ ಕುಸುಮ
ತರುವಾಯ
ಎಸೆವ ಧಾನ್ಯಗಳ ಹಸನಾದ ತೃಣ ಸರ್ವ । ವಸುಧಿಯೊಳಗಿದ್ದ ದಶ ದಿಕ್ಕಿನೊಳ
ಗುಳ್ಳ
ಪೆಸರಾದ ದ್ರವ್ಯವ ನಸುನಗುತ ಶಿರಿ । ಬಿಸಜನಾಭಗೆ ಅರ್ಪಿಸಿ ಜೀವಗಣಕೆಲ್ಲ
ಬೆಸನ ಕೊಡುತ ಪಾಲಿಸಬೇಕು । ಲೋಕವ । ಬಸುರೊಳಗಿಟ್ಟ ವಿಜಯ
ವಿಠಲನ
ಅಸಮ ದೈವವೆಂದು ನಿಶಿದಿನ ನೆನೆಯಬೇಕು ॥ ೪ ॥

## ಆದಿ ತಾಳ

ಭಜನೆ ಮಾಡು ಮನವೆ ಒಂದೆ ಜ್ಞಾನದಲಿ । ಗಜತುರಗ ಮೊದಲಾದ ನಾನಾ
ಠಾವಿನಲ್ಲಿ
ಅಜದೇವರಾರಭ್ಯ ಮುಕ್ತಾ ಮುಕ್ತರಲ್ಲಿ । ನಿಜವಾಗಿ ಮಾಡುವ ಹರಿಯ
ವ್ಯಾಪಾರವನ್ನು
ರುಜುವಾಗಿ ಹಿಗ್ಗು ದುರಿತವ್ರಜವನೊದೆದು । ನಿಜಸುಖವನಧಿಯೊಳೋಲಾಡು
ನಿತ್ಯ
ತ್ರಿಜಗ ಮಧ್ಯದೊಳು ಯಾವಜ್ಜೀವ । ತನಕ ರುಜುವಾದ ಮಾರ್ಗವಾವ
ದಾದರು ಗ್ರಹಿಸು

ಸುಜನ ವಂದಿತ ನಮ್ಮ ವಿಜಯ ವಿಠಲನ । ಭುಜಬಲದಿಂದ ಭವದೂರನಾಗು
॥ ೫ ॥

## ಜತೆ

ನೀಚಾಧಿಷ್ಠಾನದಲ್ಲಿ ಹರಿಯ ಪೂಜಿಸದಿರು । ಯೋಚಿಸು ವಿಜಯ ವಿಠಲನ
ಸ್ವೋತ್ತಮರಲ್ಲಿ ॥ ೧ ॥

ಯಾವ ಮತದಲ್ಲಾಗಲಿ ಜ್ಞಾನಿ ಯಿರಬೇಕಾದ ಕ್ರಮವನ್ನು ಇದಕ್ಕಿಂತ ಬೇರೆಯಾಗಿ ಹೇಳಿಲ್ಲ. ಶಿವನ ಜ್ಞಾನವಾದರೇನು ? ಕೇಶವನ ಜ್ಞಾನವಾದರೇನು ? ಶಿವನೆಂಬ ಜಾಗದಲ್ಲಿ ಕೇಶವನೆಂದರಾಯಿತು, ಕೇಶವನೆಂಬ ಜಾಗದಲ್ಲಿ ಶಿವನೆಂದರಾಯಿತು. ಸರ್ವ ಶಬ್ದ ವಾಚ್ಯನು ಒಬ್ಬನೇಯಾದುದರಿಂದ ಬಾಧೆ ಬರುವುದಿಲ್ಲ. ದಾಸೋಽಹಂ ಎನ್ನುವವನು ಸೋಽಹಂ ಎಂಬ ಈ ಜ್ಞಾನಿಗೆ ಇದಕ್ಕಿಂತ ಬೇರೆ ಉಪದೇಶವಿರುವುದಿಲ್ಲ, ನಡತೆಯಿರುವುದಿಲ್ಲ. ಜ್ಞಾನ ಸುಳಾದಿ ಯಿದ್ದಂತೆ ಭಕ್ತಿಯ ಮೇಲೂ ಸುಳಾದಿಯಿರುವುದರಿಂದ ಅದನ್ನು ಕೆಳಗೆ ಉದಹರಿಸಿದೆ.

## ಭಕ್ತಿ ಸುಳಾದಿ

### ಧ್ರುವ ತಾಳ

ಹರಿದಾಸರೊಡನಾಡು । ಹರಿಯಂಘ್ರಿಯುಗ್ಮ ನೋಡು । ಹರಿಯೆಂದು
ಕೊಂಡಾಡು । ಹರಿನಾಮ ಪಾಡು ।
ಹರಿಪ್ರಸಾದವ ಬೇಡು । ಹರಿ ಸೇವೆಯನ್ನೆ ಮಾಡು । ಹರಿಗೆ ಕರವ ನೀಡು ।
ಹರಿಯ ಬಿಡದೆ ಕಾಡು ।
ಹರಿಯೆಂದು ನಲಿದಾಡು । ಹರಿಗೊಪ್ಪಿಸಿ ಬಿಡು । ಹರಿ ದ್ವೇಷಿಗಳ ಬಿಡು ।
ಹರಿ ಧ್ಯಾನದಲ್ಲಿ ಕೂಡು ।
ಹರಿ ಕರುಣದ ಜೋಡು । ಹರಿಯದಂತೆ ತೊಡು । ಹರಿ ನಗರಿಗೆ ಓಡು ।
ಹರಿಯಲ್ಲಿ ರತಿಯಿಡು ।
ಹರಿಗೆ ಇಲ್ಲವೊ ಈಡು । ಹರಿ ವಿಜಯ ವಿಠಲ । ಹರಿಹರಿಯೆಂದರೆ । ಹರುಷ
ಬಡುವದು ನಾಡು ॥ ೧ ॥

ಜ್ಞಾನ ಭಕ್ತಿಗಳಿಗಿರುವಂತೆ ವೈರಾಗ್ಯಕ್ಕೆ ಒಂದು ಸುಳಾದಿಯ ಮಾದರಿ

ಧ್ರುವತಾಳ

ವೈರಾಗ್ಯ ಮಾರ್ಗ ಕೇಳು ದಾರಿದ್ರ್ಯ ಮಾರ್ಗ ಕೀಳು । ಮಾರಪಿತನ ಪದ
ಆರಾಧಿಸುವದಕೆ
ನಾರಿಯ ಧರಣಿಯ ಧನವ ಬಿಟ್ಟರಾಯಿತೆ । ವೈರಾಗ್ಯವಲ್ಲ ಕಂಡ್ಯ ಧೀರರಿಗೆ
ಶರೀರಕ್ಕಪಾರ ಭಸ್ಮ ಧರಿಸಿಕೊಂಡು । ಚೀರವಸ್ತ್ರವನುಟ್ಟು ತಿರುಗಿದರೂ
ಯಾರಾದರೂ ಅವನ ಅವಧೂತನೆಂಬರೆ । ಸಾರಿಸಾರಿಗೆ ಇನ್ನು ಪೇಳಿರಯ್ಯಾ
ವೈರಾಗ್ಯವೆಂಬಂಥ ವಾರುತಿಯೊಂದಲ್ಲದೆ । ಶ್ರೀರಮಣಗೆ ಇದು ಪ್ರಿಯವಲ್ಲ
ನಾರಿ ಸುತರುಗಳು ಶರೀರ ಬಂಧುಗಳಿಂ । ದರಿತಿರಬೇಕು ಅನುದಿನವು
ನೀರಿನೊಳಗೆ ಇನ್ನು ಕಮಲವು ಇದ್ದಂತೆ । ಕಾರಣನಾಗಿ ಕಾರ್ಯವಿಲ್ಲದಿರಬೇಕು
ಮಾರಮಣ ನಮ್ಮ ಗೋಪಾಲ ವಿಠಲನು । ತೋರಿ ಕೊಟ್ಟ ವೈರಾಗ್ಯ
ಸಾರುವೆನು ॥ ೧ ॥

ಮಟ್ಟತಾಳ

ಸ್ವಯೋಗ್ಯತೆಯೊಳಗೆ । ಆಯತವಾದದ್ದೇ । ನೋಯದೆ ಉಣುವೋದೇ ।
ನ್ಯಾಯದ ವೈರಾಗ್ಯ ।
ಆಯಾಸವ ಪಡದೆ । ಪರರ ಶ್ರೇಯಸು ನೋಡಿ । ಶ್ರೇಯರಸನಿತ್ತ । ನೆಂಬದೆ
ವೈರಾಗ್ಯ
ಪ್ರೇಯದಿ ನೀನಿತ್ತ । ಕರ್ತೃತ್ವವು ಎನಗೆ । ನೀ ಯಿಲ್ಲದೆ ಎನ್ನಿಂದಾಗದು
ಎನುತಲಿ
ನೋಯದೆ ಇಪ್ಪುದೇ ನ್ಯಾಯದ ವೈರಾಗ್ಯ । ಮಾಯಾ ರಮಣ ನಮ್ಮ ।
ಗೋಪಾಲ ವಿಠಲನ ಪ್ರೇಯದಿ ನೆಚ್ಚಿ ಅನ್ಯಕ್ಕೆರಗದಿಪ್ಪುದೆ ವೈರಾಗ್ಯ ॥ ೨ ॥

ತ್ರಿಪುಟತಾಳ

ಧನವ ಪರಿತ್ಯಾಗ ಮಾಡಿದರಾಯಿತೆ । ಘನವಾದ ವೈರಾಗ್ಯವಲ್ಲ ನೋಡೀ
ಧನವ ಬಿಟ್ಟರವೇ ದನಗಳು ಅನುದಿನ । ಘನವೇನು ಇವಕೆ ಅವಕ್ಕೆ ನೋಡೀ

ಮನೆಯ ಬಿಟ್ಟೇಕಾಂತದಲಿ ಕುಳಿತರಾಯಿತೆ । ಘನವಾದ ವೈರಾಗ್ಯವಲ್ಲ
ನೋಡೀ
ಮನೆಯು ಬಿಟ್ಟಿರವೇ ಅನುದಿನ ಗೂಗಿಗಳು । ಘನವೆಂದು ಕರೆವರೆ ಜ್ಞಾನಿಗಳು
ತನುಮನದಭಿಮಾನವನು ಬಿಟ್ಟರಾಯಿತೆ । ಘನವಾದ ವೈರಾಗ್ಯವಲ್ಲ ನೋಡಿ
ತನುಮನದಭಿಮಾನವನು ಬಿಟ್ಟು ಕುನ್ನಿ ತಾ । ಮನೆಮನೆ ತಿರುಗದೆ
ಅನುಗಾಲವು
ಘನಮಹಿಮ ಚೆಲ್ವ ಗೋಪಾಲ ವಿಠಲನ । ನೆನೆದು ಏಕಾಂತದಲ್ಲಿ
ನಿರ್ಮಲ ಮನನಾಗೊ ॥ ೩ ॥

### ಅಟ್ಟತಾಳ

ಆಗ ಭೋಗಂಗಳು ಆಗದೆ ಇರಲ್ಯಾಕೆ । ಯಾಗಂಗಳ ಮಾಡಿ ಅರ್ಪಿಸಿ
ಹರಿಗೆ । ಸಮ
ಭಾಗವೆರಡು ಹರಿಯಿಂದಾದದ್ದು ಎಂದು । ಭೋಗಿಸುತಿಪ್ಪದೆ ವೈರಾಗ್ಯ
ವೈರಾಗ್ಯ
ಕಾಗೆಯಂತೆ ಮಯ್ಯ ಕರ್ರಗೆ ಮಾಡಿನ್ನು । ರೋಗ ಬಂಧ್ಯನ್ಯಂತೆ ನಾಮವ
ಬರಕೊಂಡು
ಭೋಗದ ವಸ್ತು ಪರಿತ್ಯಾಗ ಮಾಡಿನ್ನು । ಆಗುವ ಕಾರ್ಯಗಳಾಗುತ್ತಲಿರೆ ಅಂತೆ
ಹ್ಯಾಗೆ ಜನರು ಕಾಂಬ ಹಾಗೇವೆ ಬಾಹಿರ ವೈ । ರಾಗ್ಯವನು ಮಾಡೆ
ವೈರಾಗ್ಯವಲ್ಲವೋ
ನಾಗಶಯನ ಗೋಪಾಲ ವಿಠಲ ಸಮ್ಮ । ತಾಗಿ ಉಣಿಸಿದ್ದು ಉಂಡಿಹುದೆ
ವೈರಾಗ್ಯ ॥ ೪ ॥

### ಆದಿತಾಳ

ಧನವ ಕಟ್ಟಿದ ಚೀಲ । ಧಾನ್ಯ ತುಂಬಿದ ಗೋಣಿ । ಪುನುಗು ಬೆಕ್ಕಿನಂತೆ ।
ಪುಣ್ಯಾತ್ಮರಘದಂತೆ
ಒಣಗಿದ್ದ ಗೋಡೆಗೆ ಹರಳು ಮಿಟಿದಂತೆ । ಉಣುವ ಜಿಹ್ವೆಗೆ ಕೈ
ಅನುಕೂಲವಾದಂತೆ

ಮನಸಿಗೆ ಹರುಷವ ಸಾಧನ ಮಾಡಿದ್ದು | ತನುವಿಗೆ ಸುಖವೆಂದು ತಿಳಿದು ಕೆಡದಲೇ
ಗುಣಿಸುತ ಅಲ್ಲಲ್ಲಿ | ಗುಣ ತಿಳಿದು ಹರಿಯ | ನೆನೆದು ನೆನದು ದಿನ | ಗಳೆವುದೆ ವೈರಾಗ್ಯ
ಮುನಿನುತ ಶಿರಿ ಗೋಪಾಲ ವಿಠಲನು | ಅನಿತೀಪಂಯಾಗಿದ್ದರೆ ಪೊರೆವ ||೩||

ಜತೆ

ಅರಿಯದ ವೈರಾಗ್ಯ ಹರಹಿಕೊಂಬುದಕಿಂತ | ಅರಿತು ಮೊರೆಯ ಹೊಗಿರೋ ಗೋಪಾಲ ವಿಠಲನ || ೧ ||

——o——

## ೨. ಉಗಾಭೋಗಗಳು

ಗಾನದಿಂದ ಧರ್ಮ, ನೀತಿ, ಮತ ಮತ್ತು ಲೋಕಾನುಭವಗಳನ್ನು ಉಪದೇಶ ಮಾಡುವುದು ಹರಿದಾಸರು ಕೈಕೊಂಡ ಮಾರ್ಗವಾದುದರಿಂದ ಸುಭಾಷಿತಗಳಂತೆ ಅಗಣಿತ ಉಗಾಭೋಗಗಳನ್ನು ಒಬ್ಬೊಬ್ಬ ದಾಸರೂ ರಚಿಸಿರುತ್ತಾರೆ. ಸಹಸ್ರಾವಧಿ ಇರಬೇಕಾದ ಅಂತಹ ಸುಭಾಷಿತಗಳಲ್ಲಿ ಈಗ ಐನೂರಕ್ಕಿಂತ ಹೆಚ್ಚಾಗಿ ದೊರೆಯುವುದಿಲ್ಲ. ಸಂಪ್ರದಾಯಸ್ಥರಿಂದ ತಿಳಿದು ಬರೆದುಕೊಳ್ಳದ ದೋಷ, ಹೇಳುವವರು ತಮ್ಮ ಧಾಟಿಗೆ ಹೊಂದಿಸಿಕೊಳ್ಳಲು ಮಾಡಿಕೊಂಡ ವ್ಯತ್ಯಾಸ, ಸಂಕುಚಿತ ಮನಸ್ಕರು ತಾವು ಮಾಡಿದ್ದೆಂದರೆ ಜನಾನುರಾಗ ಬರಲಾರದೆಂದು ದೊಡ್ಡವರ ಮುದ್ರಿಕೆಗಳನ್ನು ದುರುಪಯೋಗ ಮಾಡಿಕೊಂಡು ಬಿಸಿಬಿಸಿ ಮಾತುಗಳನ್ನು ಬರೆದ ದೋಷಗಳಿಂದೆಲ್ಲಾ ದಾಸ ಸಾಹಿತ್ಯವು ಕಲುಷವಾಗುತ್ತಿರುವುದನ್ನು ನೋಡಿ ವಿಷಾದವಾಗುತ್ತದೆ. ಇಷ್ಟೆಲ್ಲಾ ಕಳೆದುಳಿದು ಶುದ್ಧವಾಗಿರುವ ಉಗಾಭೋಗಗಳಲ್ಲಿ ಪಂಚಧಾತುಕ ಉಗಾಭೋಗಗಳು ಕೆಲವು ಮಾತ್ರ ಇದ್ದಂತೆ ಇವೆ. ಕೆಳಗೆ ಮಾದರಿಗಾಗಿ ಕೊಟ್ಟಿರುವ ಉಗಾಭೋಗಗಳಲ್ಲಿ ಹೆಚ್ಚು ಸಂಖ್ಯೆಯವು ಕೇವಲ ದ್ವಿಧಾತುಕ ಗಳಾಗಿವೆ. ಹಾಡುವ ಸಂಪ್ರದಾಯ ಮರೆತಿರುವುದರಿಂದ ಅವುಗಳನ್ನು ಅಟ್ಟತಾಳ ಗತಿಯಿಂದಾಗಲಿ ಏಕತಾಳ ಗತಿಯಿಂದಾಗಲಿ ಯಾವ ರಾಗದ

ಕಳೆಯಲ್ಲಾದರೂ ಹಾಡಬಹುದು. ಹಿಂದಿನ ಅಧ್ಯಾಯದಲ್ಲಿ ಕೊಟ್ಟಿರುವ ಎರಡು ಮಾದರಿಗಳನ್ನು ನೋಡಿ ರಾಗದ ಜೀವಸ್ವರಗಳನ್ನರಿತು ಉದ್ಗ್ರಾಹ ಆಭೋಗ ಕ್ರಮದಂತೆ ವಿನ್ಯಾಸ ಮಾಡಬಹುದು.

## ಅಚಲಾನಂದರ ಉಗಾಭೋಗಗಳು

ಪಾತಕರೊಳಗೆಲ್ಲ ನಾನೆವೆಗ್ಗಳನಯ್ಯ
ಪ್ರಾಯಶ್ಚಿತ್ತಕೆ ನಿನ್ನ ನಾಮವೆ ಘನವಯ್ಯ
ಪಾತಕವನು ನಾನು ಮಾಡಿದ್ದು ಏನು
ಪಾತಕ ಪಾವನ ಎರಡು ನಿನ್ನಾಧೀನ
ಪಾತಕವೆನಗಿಲ್ಲ ಪ್ರಾಯಶ್ಚಿತ್ತವೆನಗಿಲ್ಲ
ಕೇಳಯ್ಯದೇವ ಅಚಲಾನಂದ ವಿಠಲ ॥ ೧ ॥

ಸುಖವಾದರೆ ತನ್ನಿಂದಾಯಿತೆಂಬೋರೋ
ದುಃಖವಾದರೆ ದೈವಮಾಡಿತೆಂಬೋರೋ
ಸುಖಕೆ ತಾನ್ಯಾರೋ ದುಃಖಕೆ ತಾನ್ಯಾರೋ
ಸುಖದುಃಖವೆರಡೂ ಹರಿಯೆ ನಿನ್ನಾಧೀನ
ರುಕುಮಿಣೀಪತಿ ಅಚಲಾನಂದ ವಿಠಲ ॥ ೨ ॥

ಸಿರಿ ನಿನಗುಂಟೆಂದು ಗರ್ವಿಸಲಿ ಬೇಡ
ಸಿರಿ ಎನಗಿಲ್ಲೆಂದು ಮುನಿದು ನೋಡಲಿ ಬೇಡ
ಹರಿಯೆ ನಿನ್ನಂಥ ಒಡೆಯರು ಎನಗುಂಟು
ಆರುಹೊ ನಿನ್ನೊಡೆಯರಾರಚಲಾನಂದ ವಿಠಲ ॥ ೩ ॥

ನಿಂದರೆ ನೆರಳಿಲ್ಲ ಹಿಡಿಯೆ ಕೊಂಬೆಯಿಲ್ಲ
ಮುಂದೆ ಭಾವಿ ಹಿಂದೆ ಕಿಚ್ಚು ಬೆನ್ನಟ್ಟುತಿದೆ
ಅಂಧನಾಗಿ ನಾಸಿಲುಕಿದೆ ಭವದೊಳು
ತಂದೆ ಸಲಹೊ ಅಚಲಾನಂದ ವಿಠಲ ॥ ೪ ॥

ತಾ ಮಾಡಿದ ಕರ್ಮ ಫಲತನಗಲ್ಲದೆ
ವಿಧಿಯ ಬೈದರೆ ವಿಧಿ ಎಲ್ಲಿ ಪೋಪನಯ್ಯ
ವಿಧಿ ಕರ್ಮ ಮೀರಿ ನಡೆ ಬಲ್ಲನೇನಯ್ಯ
ಕೇಳಯ್ಯ ದೇವ ಅಚಲಾನಂದ ವಿಠಲ || ೫ ||

ಕೊಡಲಿಬೇಕು ಪಾಪದ ಬೇರು ಕಡಿವಲ್ಲಿ
ಕೊಡಲಿಬೇಕು ಪುಣ್ಯವ ಕಟ್ಟಿ ಕೊಬಂಲ್ಲಿ
ಕೊಡಲಿಬೇಕು ಗುರು ಹಿರಿಯರ ಕೈಯಲ್ಲಿ
ಕೊಡಲಿಬೇಕು ಸತ್ಪಾತ್ರರ ಎಡೆಯಲ್ಲಿ
ಒಡೆಯ ಕೇಳು ಅಚಲಾನಂದ ವಿಠಲ || ೬ ||

ವಿಷಯವುಳ್ಳವನಿಗೆ ವಿವೇಕವಿಲ್ಲ
ಹಸಿವರಿತುಂಬಗೆ ರೋಗವಿಲ್ಲ
ಲೋಭಿಗೆ ತನ್ನವರು ಪರರೆಂಬುವುದಿಲ್ಲ
ಕೇಳಯ್ಯ ದೇವ ಅಚಲಾನಂದ ವಿಠಲ || ೭ ||

ಹೆಂಡತಿ ಮಾಡಿದ ಪಾಪ ಗಂಡನಿಗುಂಟು
ಗಂಡ ಮಾಡಿದ ಪುಣ್ಯ ಹೆಂಡತಿಗುಂಟು
ಹೆಂಡತಿ ಮಾಡಿದ ಪುಣ್ಯ ಗಂಡಗಿಲ್ಲ
ಗಂಡ ಮಾಡಿದ ಪಾಪ ಹೆಂಡತಿಗಿಲ್ಲ
ಹ್ಯಾಂಗಯ್ಯ ದೇವ ಅಚಲಾನಂದ ವಿಠಲ || ೮ ||

ಜಗದಂತರಿಯಾಮಿ ಬಯಲೆನಬಹುದೆ ?
ಅಗಣಿತ ಗುಣವ ನಿರ್ಗುಣನೆನಬಹುದೆ ?
ಜಗದ ತಂದೆಯು ನೀನು ತಾನೆನಬಹುದೆ ?
ಜಗದೊಡೆಯನ ಬಿಟ್ಟನ್ಯರ ಭಜಿಸೋದೆ ?
ನಗ ಧರ ಅಚಲಾನಂದ ವಿಠಲನೇ ! || ೯ ||

ಹಗಲು ನಾಲ್ಕು ಝಾವ ಹಸಿವೆಗೆ ಕುದಿದು
ಇರುಳು ನಾಲ್ಕು ಝಾವ ನಿದ್ರೆಗೆ ಕುದಿದು

ವೃಥಾಯ ಹೊತ್ತೆಲ್ಲ ಹೋಯಿತಲ್ಲಾ !
ಎನ್ನಾಯುಷ್ಯ ವೃಥಾಯ ಹೋಯಿತಲ್ಲ !
ನಿನ್ನ ನೆನೆಯಲಿಲ್ಲ ವಿಷಯ ಸುಖವಿಲ್ಲ
ಕೇಳಯ್ಯ ದೇವ ಅಚಲಾನಂದ ವಿಠಲ ॥ ೧೦ ॥

——o——

## ಶ್ರೀಪಾದರಾಯರ ಉಗಾಭೋಗಗಳು

ಅನಂತ ಕಾಲದ ಪುಣ್ಯದಿಂದಲಿ ಎನ್ನ
ಮನಸು ಎರಗಿತೊ ನಿನ್ನ ಪಾದದಲ್ಲಿ
ಎನ್ನ ಮನ ಅನ್ಯತ್ರ ಪೋಗದಂತೆ ಮಾಡಿ
ನಿನ್ನವಾರೊಳು ನಿಲಿಸೊ ರಂಗ ವಿಠಲ ॥ ೧ ॥

ಧ್ಯಾನವು ಕೃತಯುಗದಿ ಯಜ್ಞ ತ್ರೇತಾಯುಗದಿ
ದಾನವಾರಿಯ ದೇವತಾರ್ಚನೆಯು ದ್ವಾಪರದಿ
ಆ ನರರಿಗೆಷ್ಟು ಫಲ ಈ ಕಲೀ ಯುಗದಲ್ಲಿ
ಗಾನದಿ ಕೇಶವನ ರಂಗ ವಿಠಲನೆನಲು ॥ ೨ ॥

ಮನೆಯಿಂದ ಸಂತೋಷ ಕೆಲವರಿಗೆ ಲೋಕದೊಳು
ಧನದಿಂದ ಸಂತೋಷ ಕೆಲವರಿಗೆ ಲೋಕದೊಳು
ಸತಿಯಿಂದ ಸಂತೋಷ ಕೆಲವರಿಗೆ ಲೋಕದೊಳು
ಸುತರಿಂದ ಸಂತೋಷ ಕೆಲವರಿಗೆ ಲೋಕದೊಳು
ಇನಿತು ಅವರವರ ಸಂತೋಷ ಅವರಿಗಿರಲಿ
ಎನಗೆ ಸಂತೋಷ ನಿನ್ನಲಿ ರಂಗ ವಿಠಲ ॥ ೩ ॥

ಕಲಿಕಾಲಕೆ ಸಮಯುಗವಿಲ್ಲವಯ್ಯ
ಕಲುಷ ಹರಿಸಿ ಕೈವಲ್ಯವೀವುದಯ್ಯ
ಸಲೆ ನಾಮಕೀರ್ತನೆ ಸ್ಮರಣೆ ಸಾಕಯ್ಯ
ಸ್ಮರಿಸಲು ಸಾಯುಜ್ಯಪದವೀವುದಯ್ಯ

ಬಲವಂತ ಶ್ರೀರಂಗ ವಿಠಲನ ನೆನೆದರೆ
ಕಲಿಯುಗವೇ ಕೃತಯುಗವಾಗುವದಯ್ಯ ॥ ೪ ॥

ಬಲ್ಲವನು ಎಲ್ಲವನು ಹರಿಯಿರಲು ಭಜಿಸದೆ
ಕ್ಷುಲ್ಲದೇವರ ಬೇಡಿ ಸುಖವ ಬಯಸುವೆ ನೀನು
ಕಳ್ಳಗೋವಿನ ಪಾಲ ಕರುವು ಬಯಸೀದಂತೆ
ಹಲ್ಲು ಹೋಹದ ನರಿಯ ಅಕ್ಕಟಕಟಾ
ಬಲ್ಲಿದ ದೈವ ಶ್ರೀರಂಗ ವಿಠಲನು ಕೈ
ವಲ್ಯವನೆ ಕೊಟ್ಟು ಸಂತೈಸುವನು ಭಜಿಸೊ ॥ ೫ ॥

ಭವವೆಂಬ ಅಡವಿಯಲ್ಲಿ ತಾಪತ್ರಯದಿ ಸಿಲುಕಿ
ಭಯಗೊಳ್ಳದಂತೆ ಕೆಲ್ಲುವದಕೆ ಶ್ರೀಹರಿನಾಮ
ಹೊರತಾಗಿ ಮತ್ತುಂಟೆ ಎನ್ನ ಮನವ ನಿನ್ನ
ಚರಣದಲ್ಲಿಟ್ಟು ಸಲಹೊ ನಮೋ ರಂಗ ವಿಠಲ ॥ ೬ ॥

ಬೆನಕನನೊಲ್ಲೆನವ್ವ ಕುಲುಕಿ ನಡೆಯುವನ
ಷಣ್ಮುಖನನೊಲ್ಲೆನವ್ವ ಹಲವು ಬಾಯವನ
ಇಂದ್ರನನೊಲ್ಲೆನವ್ವ ಸ್ಯೆಗಣ್ಣಿನವನ
ಚಂದ್ರನನೊಲ್ಲೆನವ್ವ ಕ್ಷಯರೋಗದವನ
ಸೂರ್ಯನನೊಲ್ಲೆನವ್ವ ಉರಿದು ಮೂಡುವನ
ಹರನ ನಾನೊಲ್ಲೆನವ್ವ ಹಣೆಗಣ್ಣಿನವನ
ಜನಕೆಲ್ಲ ಚೆಲುವನ ಜಗಕೆ ಒಡೆಯನ
ತಂದು ತೋರೇ ನಮ್ಮ ರಂಗ ವಿಠಲನ ॥ ೭ ॥

ತುರುಬಿನಮೇಲೆ ತುರುಬಿದ ಮಲ್ಲಿಗೆ ಜಾಜಿ
ಕೊರಳಲ್ಲಿ ಕಂಠೀಸರ ವನಮಾಲೆ
ಮರಿದುಂಬಿ ಝೇಂಕಾರ ಸರಿಗಮಪಧನಿಸ
ಸನಿಧಪಮಗರಿಸ ಅಧರದಲೂದುತಿರೆ
ಕರದಲ್ಲಿ ವೇಣು ಬೆರಳಲ್ಲಿ ಮಿಟಿವುತ

ವರಕಲ್ಪ ತರುವಿನ ನೆರಳಿನಲ್ಲಿ ಸಿರಿ
ಅರಸನು ಶ್ರೀಪತಿ ರಂಗ ವಿಠಲನು
ಸರಸದಿ ನಾದವ ಮಾಡಿದನು ॥ ೮ ॥

——o——

## ವ್ಯಾಸರಾಯರ ಉಗಾಭೋಗಗಳು

ಜಾರತ್ವ ಮಾಡಿದ ಪಾಪಂಗಳಿಗೆ ಎಲ್ಲ
ಗೋಪೀಜನ ಜಾರನೆಂದರೆ ಸಾಲದೆ
ಚೋರತ್ವ ಮಾಡಿದ ಪಾಪಂಗಳಿಗೆ ಎಲ್ಲ
ನವನೀತ ಚೋರನೆಂದರೆ ಸಾಲದೆ
ಜೀವಹತ್ಯಾ ಪಾಪ ಮಾಡಿದವರಿಗೆಲ್ಲ
ಮಾವನ್ನ ಕೊಂದವನೆನೆ ಸಾಲದೆ
ಪ್ರತಿದಿವಸ ಮಾಡಿದ ಪಾಪಂಗಳಿಗೆ ಎಲ್ಲ
ಪತಿತಪಾವನ ಸ್ವಾಮಿಯೆನೆ ಸಾಲದೆ
ಇಂತಿಪ್ಪ ಮಹಿಮೆಯೋಳೊಂದನಾದರು ಒಮ್ಮೆ
ಸಂತಸದಿ ನೆನೆಯು ವರ ಪೊರೆವ ಶಿರಿ ಕೃಷ್ಣ ॥ ೧ ॥

ಕರಿ ಹರಿಯೆನಲಾ ವಾಕ್ಯವ ಕೇಳಿ
ಶಿರಿಗೆ ಹೇಳದೆ ಬಂದೆ ಉರಗಮಂಚ ಧುಮುಕಿ
ಕರವಿತ್ತ ವಿರಿಂಚಿ ಕೈಲಾಘವನೊಲ್ಲದೆ
ಭರದಿ ಹನುಮನಿತ್ತ ಹಾವಿಗೆಯ ದಾಟಿ
ಗರುಡನೊದಗಿಬರೆ ತಿರುಗಿ ನೋಡದೆ ಬಂದೆ । ನಿನ್ನ ।
ತ್ವರಿತಕ್ಕೆ ನಮೊ ನಮೊ ನಮೊಯೆಂಬೆ ಶಿರಿಕೃಷ್ಣ ॥ ೨ ॥

ಧರ್ಮಪಥ ಮೆಟ್ಟಲು ಮನವೆರಗದು ದು
ಷ್ಕರ್ಮಕ್ಕೆ ಚಿಗಿಚಿಗಿದಾಡುವೋದು । ಯುಗ
ಧರ್ಮವೋ ಜೀವರ ಕರ್ಮವೋ ಹರಿ ಹರಿ

ದುರ್ಮದೋಕ್ತಿಗಳಿಂದ ಚರಿಸುವ ಜನರ ಮೈ
ಚರ್ಮ ಸುಲಿಸದೆ ಬಿಡನು ಕಡೆಗೆ ಶಿರಿ ಕೃಷ್ಣ ॥ ೩ ॥

ತಂದೆ ನೀ ತಂದೆ ಜನುಮ ಜನುಮಕೆ ತಂದೆ
ಕಾಮಕ್ಕೆ ತಂದೆ ಡಾಂಭಿಕಕೆ ತಂದೆ
ಎಂದಿಗೂ ನೀ ತಂದೆಯೆಂದು ನಾ ಬಂದೆನೋ
ಕಂದರ್ಪ ಜನಕ ಶಿರಿಕೃಷ್ಣ ನೀ ಪೊರೆಯೊ ॥ ೪ ॥

ನಿನ್ನ ಯಂಜಲನುಂಡು ನಿನ್ನ ಬೀಳುಡಿಯುಟ್ಟು
ಮುನ್ನ ಮಾಡಿದ ಕರ್ಮ ಬೆನ್ನ ಬಿಡದಿರ್ದಡೆ
ನಿನ್ನ ವಾಲ್ಗೈಸುವದೇಕೆ ಗೋವಿಂದ
ನಿನ್ನ ಹಾರೈಸುವದೇಕೆ ಗೋಪಾಲ
ದಿನಕರಮದಿಸಿ ಕತ್ತಲೆ ಹಿಂಗದಿರ್ದೊಡೆ
ಇರುಳೇನು ಹಗಲೇನು ಕುರುಡನಿಗೆ ಶಿರಿಕೃಷ್ಣ ॥ ೫ ॥

## ವಾದಿರಾಜರ ಉಗಾಭೋಗಗಳು

ಡಿಲ್ಲಿರಾಯನ ಕಂಡು ಪುಲ್ಲಿನಗೇಹ ಬೇಡುವಂ
ತ್ತಲ್ಲವೇನೋ ಶಿರಿ ವಲ್ಲಭನ
ಸಲ್ಲದೈಹಿಕ ಭಾಗ್ಯ ನಿಲ್ಲುವದೆಂದು ಭ್ರಮಿಸಿ
ಬಲ್ಲಿದ ಸದ್ಭಕ್ತರು ಬೇಡುವರೇ
ಪುಲ್ಲು ಕಲ್ಲು ಜಲ ಮೆದ್ದು ನಿರುತದಲ್ಲಿ
ತಲ್ಲೆಯೂರಿತಪವ ಮಾಡುವರೂ
ಬಲ್ಲಿದ ಲಕುಮಿಾಶ ಎಲ್ಲರೊಳಿದ್ದು ಫಲವ
ಒಲ್ಲೆನೆಂದರು ತಾ ಕೊಡುತಿಪ್ಪನು
ಚಲ್ವ ಹಯವದನ ತಿಮ್ಮನಲ್ಲದೆ ಕೈವಲ್ಯ ಮು
ತ್ತೆಲ್ಲಿ ಬೇಡಿದರು ಅಲ್ಲೇನು ಫಲವಿಲ್ಲ ॥ ೧ ॥

ಶ್ರೀನಾಥ ಪ್ರಭುವೆತ್ತ ಹೀನ ಯೋನಿಗಳಲ್ಲಿ
ನಾನಾ ದುಃಖವನುಂಬ ಹೀನ ಮನುಜ ನೆತ್ತ

ಭಾನು ಮಂಡಲವೆತ್ತ ಶ್ವಾನನುಬ್ಬರವೆತ್ತ
ಮಾನವ ಈಶ ನಾನೆನ್ನದಿರೋ
ದಾನವ ಕುಲ ವೈರಿ ಹಯವದನ ವೆಂಕಟ
ಶ್ರೀನಿವಾಸ ದಾಸ ದಾಸನೆಂಬೆನಿಸೋ || ೨ ||

ಅಡಿಯೊಳಾಧಾರವಿಲ್ಲ ಹಿಡಿವದಕೆ ಕೊಂಬೆಯಿಲ್ಲ
ಕಡೆ ಹಾಯಿಸುವರಿಲ್ಲ ಕಡು ನೊಂದೆನಲ್ಲ
ಬಡತನ ಬಿಡದಲ್ಲ ಭಂಗ ಪಟ್ಟೆನಲ್ಲ
ಒಡೆಯನ ದಯವಿಲ್ಲ ಪಡೆದು ಹುಟ್ಟಲಿಲ್ಲ
ಗರುಡ ಸರ್ಪನ ಸ್ನೇಹದಂತಾಯಿತಲ್ಲ
ಕನಡಿಯೊಳಗಿನ ಗಂಟು ಕನಸಿನೊಳಗಿನ ನಂಟು
ಉಣಹೋಗಿ ಬಾಯಿ ಮರೆತಂತಾಯಿತಲ್ಲ
ಎನ್ನ ಮನದುಬ್ಬಸವ ಶ್ರೀಕಂಠ ಬಲ್ಲ
ಯಾರ ಮುಂದುಸುರಲೊ ಹಯವದನ || ೩ ||

ಅನ್ನದಾಶೆಗೆ ಪೋಗಿ ಪರರ ಬಾಗಿಲ ಕಾಯ್ದು
ಅನೇಕ ಬಾಧೆಗಳಿಂದ ನೊಂದೆನೊ ಹರಿಯೆ
ಅನ್ಯತ್ರ ಪೊರಮಟ್ಟು ಪೋಗಲಾದರೂ ಬಿಡರು
ಮನ್ನಿಸುತ ಕೃಪೆಯಿಂದ ಕೂಡಿ ಇರರು
ಅನಾಥ ಬಂಧು ಹಯವದನ ನಿನ್ನರಮನೆಯ
ಕುನ್ನಿ ಎಂಜಲ ನಿಕ್ಕಿ ಪೊರೆಯೊ ತಂದೆ || ೪ ||

ಎನಗೆ ನಿನ್ನಲಿ ಭಕ್ತಿಯಿರಲಿ ಇಲ್ಲದಿರಲಿ
ಜನಹರಿದಾಸ ನೆಂ | ದೆನ್ನ ಕರೆಯಲಾಗಿ
ಮನ ಪಾಪ ಕೆರಗದಂತೆ ನೋಡಿಕೊ ಸ್ವಾಮಿ
ಕನರಿ ಯಮನ ಭಟರು ಮುಂದೆ ಬಂದರಾಗ
ನಿನ್ನ ಘನತೆಗೆ ಸಾಲದಯ್ಯ
ಅನುದಿನ ನೀ ಎನ್ನ ಕಾಯಬೇಕಾಯಿತು ಅಸಿವಿ:ತ್ತ ಸುಜನ ಬಂಧು

ತನ್ನಾಳ ಹಯವದನ ಅನ್ಯಗೊಪ್ಪಿಸಿಕೊಟ್ಟ
ನೆಂಬ ದುರ್ವಾರ್ತೆಯ ತಪ್ಪಿಸಿಕೋ ತಂದೆ || ೫ ||

ನಲ್ಲ ನಿಲ್ಲದ ಸತಿ ಚಲುವಿದ್ದು ಫಲವೇನು
ಸಲ್ಲದ ಹಣ್ಣಿಗೆ ಸವಿಯಿದ್ದು ಫಲವೇನು
ಬಲ್ಲವರಿಲ್ಲದ ಸಭೆಯಿದ್ದು ಫಲವೇನು । ನಮ್ಮ
ನೊಲ್ಲದ ಹಯವದನ ಎಲ್ಲಿದ್ದರೇನು || ೬ ||

—o—

## ಪುರಂದರದಾಸರ ಉಗಾಭೋಗಗಳು

ಇಂದಿನ ದಿನವೇ ಶುಭ ದಿನವು ಇಂದಿನ ವಾರ ಶುಭವಾರ
ಇಂದಿನ ತಾರೆ ಶುಭ ತಾರೆ ಇಂದಿನ ಯೋಗ ಶುಭ ಯೋಗ
ಇಂದಿನ ಕರಣ ಶುಭ ಕರಣ ಇಂದು ಪುರಂದರ ವಿಠಲರಾಯನ
ಸಂದರುಶನ ಫಲವೆನಗಾಯ್ತು ಸಂದರುಶನ ಫಲವೆನಗಾಯ್ತು || ೧ ||

ಪರಮಾನಂದವು ಹರಿಗೆ ಪರಮಾನಂದವು ಸಿರಿಗೆ
ಪರಮಾನಂದವು ವರದ ಪುರಂದರ ವಿಠಲಗೇ || ೨ ||

ಶುಭವೆನ್ನಿ ಶೋಭನ ಹರಿಗೆ ಶುಭವೆನ್ನಿ ಶೋಭನ ಶಿರಿಗೆ
ಶುಭವೆನ್ನಿ ಶೋಭನ ವರದ ಪುರಂದರ ವಿಠಲಗೆ || ೩ ||

ಜಯ ಜಯ ಮಂಗಳ ಹರಿಗೆ ಜಯ ಜಯ ಮಂಗಳ ಶಿರಿಗೆ
ಜಯ ಜಯ ಮಂಗಳ ವರದ ಪುರಂದರ ವಿಠಲಗೆ || ೪ ||

ಹಗಲು ನಿನ್ನ ನೆನೆಯಲಿಲ್ಲ ಹಶಿವು ತೃಷೆಯಿಂದ
ಇರಳು ನಿನ್ನ ನೆನೆಯಲಿಲ್ಲ ನಿದ್ರೆ ಭರದಿಂದ । ಈ ।
ಎರಡರ ಬಾಧೆಗೆ ಒಳಗಾದೆ ನಾ ಪುರಂದರ ವಿಠಲ || ೫ ||

ನಿನ್ನ ಧ್ಯಾನವ ಕೊಡೊ ಎನ್ನ ಧನ್ಯನ ಮಾಡೊ
ಪನ್ನಗಶಯನ ಶ್ರೀ ಪುರಂದರ ವಿಠಲ ॥ ೬ ॥

ಪಂಕಜ ನಯನನೆ ಪಂಕಜನಾಭನೆ
ಪಂಕಜೋದ್ಭವನಯ್ಯ ಪುರಂದರ ವಿಠಲ ॥ ೭ ॥

ಭಾಗೀರಥೀ ಪಿತನೆ ಭಾಗವತರ ಪ್ರಿಯನೆ
ಯೋಗಿಗಳೊಡೆಯ ಶ್ರೀ ಪುರಂದರ ವಿಠಲ ॥ ೮ ॥

ಎಲ್ಲಿ ಹರಿಕಥಾ ಪ್ರಸಂಗ ಅಲ್ಲಿ ಗಂಗೇ ಯಮುನೆ
ಚೆಲುವೆ ಗೋದಾವರೀ ಸರಸ್ವತಿಯು ಸಿಂಧೂ
ಎಲ್ಲ ತೀರ್ಥಗಳು ಎಣೆಯಾಗಿ ನಿಂದಿರಲು
ವಲ್ಲಭ ಪುರಂದರ ವಿಠಲನು ಮೆಚ್ಚಿದ ॥ ೯ ॥

ಜಗವ ಸುತ್ತಿಹುದೆಲ್ಲ ನಿನ್ನ ಮಾಯವಯ್ಯ
ನಿನ್ನ ಸುತ್ತಿರುವುದು ಎನ್ನ ಮನವಯ್ಯ
ಜಗಕೆ ಬಲ್ಲಿದ ನೀನು ನಿನಗೆ ಬಲ್ಲಿದ ನಾನು
ಜಗವು ನಿನ್ನೊಳಗೆ ನೀನು ಎನ್ನೊಳಗೆ
ಕರಿಯು ಕನ್ನಡಿಯೊಳಗಡಗಿದಂತೆ ಸ್ವಾಮಿ
ಪುರಂದರ ವಿಠಲ ನೀ ಎನ್ನೊಳಡಗಿದೆ ॥ ೧೦ ॥

ಎನ್ನಮ್ಮ ಶಿರಿದೇವಿ ಇನ್ನು ಅರಿಯಳು ಮಹಿಮೆ
ಕುನ್ನಿ ಮಾನವ ನಾನು ಏನು ಬಲ್ಲವನೋ
ಪನ್ನಗಾದ್ರಿನಿಲಯ ಪರಮ ಪಾವನ ಕೃಷ್ಣ
ಎನ್ನನುದ್ಧರಿಸಯ್ಯ ಪುರಂದರ ವಿಠಲ ॥ ೧೧ ॥

ಮನಶುದ್ಧಿಯಿಲ್ಲದವಗೆ ಮಂತ್ರದಿಂ ಫಲವೇನು
ತನು ಶುದ್ಧಿಯಿಲ್ಲದವಗೆ ತೀರ್ಥದಿಂ ಫಲವೇನು
ಮೀನು ಮೊಸಳೆಗಳಂತೆ ಇದ್ದಲ್ಲಿ ಫಲವೇನು
ಶ್ರೀಶೈಲದ ಕಾಗೆಯಂತೆ ಹೊರಗೆ ತಿಂದು

ಒಳಗೆ ಮಾಯದ ಜನರ ಕಂಡು
ನಗುತಿಪ್ಪ ಬೆರಗಾಗಿ ಪುರಂದರ ವಿಠಲ ॥ ೧೨ ॥

ಗುರಿಯನೆಚ್ಚವನೆ ಬಿಲ್ಲಾಳು । ಹರಿಯ ಭಜಿಸಿದವನೆ ಮಾಸಾಳು
ಹರಿಯೆಂದು ಓದದ ಓದೆಲ್ಲ ಹಾಳು । ಪುರಂದರ ವಿಠಲ ಪಾರ್ಥನ
ಮನೆಯಾಳು ॥ ೧೩ ॥

ಗುರುಕರುಣ ವಾಗುವುದು ಪರಮ ದುರ್ಲಭವಯ್ಯ
ಪರಿಪರಿ ವ್ರತಗಳಾಚರಿಸಲು ಫಲವೇನು
ಗುರುಕರಣವೊಂದಲ್ಲದೆ ಗತಿಗೆ ಬೇರುಂಟೆ ದಾರಿ
ಶರೀರದ ಪುತ್ರಮಿತ್ರ ಕಳತ್ರ ಬಾಂಧವರು
ನೆರೆ ಸಲಿಸುವರೆ ಸದ್ಗತಿಗೆ ಸಾಧನವ
ನಿರುತವು ಗುರುಪಾದ ನಿಜವಾಗಿ ಮನದಲ್ಲಿ
ಅರಿತು ಭಜಿಸಲು ದುರಿತವ ಪರಿಹರಿಸಿ
ಪರಿಪಾಲಿಸುವ ನಮ್ಮ ಪುರಂದರ ವಿಠಲ ॥ ೧೪ ॥

ಹೊಲೆಯ ಬಂದನೆಂದು ಒಳಗೆ ದೇವರ ಮಾಡಿ
ಗಣಗಣ ಗಂಟೆಯ ಬಾರಿಸುವರಯ್ಯಾ
ತನುವಿನ ಕೋಪವು ಹೊಲೆಯಲ್ಲವೇ ಪರಧನ ಪರಸತಿ ಹೊಲೆಯಲ್ಲವೇ
ಹೊರಗಿದ್ದ ಹೊಲೆಯನ ಒಳಗೆ ಬಚ್ಚಿಟ್ಟರೆ
ಇದಕೇನು ಮದ್ದೋ ಪುರಂದರ ವಿಠಲ ॥ ೧೫ ॥

ಕೆಟ್ಟೆನೆಂದೆನಲ್ಯಾಕೆ ಕ್ಲೇಶಪಡುವದ್ಯಾಕೆ
ಹೊಟ್ಟೆಗಾಗಿ ಪರರ ಕಷ್ಟಪಡಿಸುವದ್ಯಾಕೆ
ಹುಟ್ಟಿಸಿದ ದೈವ ಹುಲ್ಲು ಮೇಯಿಸದಿರನೆ
ಸೃಷ್ಟಿ ಮಾಡಿದವ ಸ್ಥಿತಿಮಾಡಲರಿಯನೆ
ಗಟ್ಯಾಗಿ ನಂಬು ಪುರಂದರ ವಿಠಲನ ॥ ೧೬ ॥

ಸಕಲ ಸಾಧನಕೆಲ್ಲ ಸಿದ್ಧಿಗೊಳಿಸುವುದು
ಭಕುತಿ ಸಾಧನವಲ್ಲದನ್ಯ ಸಾಧನವುಂಟೆ

ಭಕುತಿಗಭಿಮಾನಿ ಭಾರತಿಯ ಕರುಣದಿಂ
ಮುಕುತಿಗೆ ಪಥವೆಂದು ಮನವಿಟ್ಟು ಭಜಿಸಿರೋ
ಅಖಿಳೇಶ ಪುರಂದರ ವಿಠಲ ತಾನೊಲಿವ ॥ ೧೭ ॥

ಬೇಡುವ ಕಷ್ಟಕ್ಕಿಂತ ಸಾವುದೆ ಲೇಸು
ಬೇಡಿದರೊಬ್ಬರು ಕೊಡುವರುಂಟೇ ದೇವ
ಗೂಡು ಕಿರಿದು ಮಾಡಿ ಬಲಿಯ ದಾನವ ಬೇಡಿ
ಅಡಿಸಿಕೊಂಡುದ ನೀ ಬಲ್ಲೆ ಪರರನು
ಬೇಡದಂತೆ ಮಾಡು ಪುರಂದರ ವಿಠಲ ॥ ೧೮ ॥

ಒಂದು ಕಾಲದಲಿ ಆನೆಯ ಮೇಲೆ ನಡೆಸುವಿ
ಒಂದು ಕಾಲದಲಿ ಬರಿಗಾಲಲ್ಲಿ ನಡೆಸುವಿ
ಒಂದು ಕಾಲದಲಿ ಅಮೃತಾನ್ನ ವುಣಿಸುವಿ
ಒಂದು ಕಾಲದಲಿ ಉಪವಾಸ ಮಾಡಿಸುವಿ
ನಿನ್ನ ಮಹಿಮೆಯ ನೀನೆ ಬಲ್ಲೆಯೋ ದೇವ
ಪನ್ನಗಶಯನ ಶ್ರೀ ಪುರಂದರ ವಿಠಲ ॥ ೧೯ ॥

ಹರಿ ನಿನ್ನ ಭಂಡಾರ ಕದ್ದ ಕಳ್ಳ ನಾನು
ನಿನ್ನ ಭಕ್ತಿಯೆಂಬ ಸಂಕೋಲೆಯಿಕ್ಕು
ನಿನ್ನ ದಾಸರ ಕೈಯಲೆನ್ನನೊಪ್ಪಿಸಿಕೊಡು
ನಿನ್ನ ವೈಕುಂಠದೊಳು ಸೆರೆಯಿಟ್ಟು ಕಾಯೋ
ಪನ್ನಗಶಯನ ಶ್ರೀ ಪುರಂದರ ವಿಠಲ ॥ ೨೦ ॥

ನಿನ್ನಂಥ ಸ್ವಾಮಿ ಎನಗುಂಟು ನಿನಗಿಲ್ಲ
ನಿನ್ನಂಥ ತಂದೆಯು ಎನಗುಂಟು ನಿನಗಿಲ್ಲ
ನಿನ್ನಂಥ ಧೊರೆಯು ಎನಗುಂಟು ನಿನಗಿಲ್ಲ
ನೀನೆ ಪರದೇಶಿ ನಾನೆ ಸ್ವದೇಶಿ
ನಿನ್ನರಸಿ ಲಕುಮಿ ಎನ್ನ ತಾಯಿ
ನಿನ್ನ ತಾಯ ತೋರೋ ಪುರಂದರ ವಿಠಲ ॥ ೨೧ ॥

ಆನೆಯು ಕರೆದಾಗ ಜ್ಞಾನವಿದ್ದದ್ದೇನು
ನಾನು ವರಲೆ ನೀನು ಕೇಳದಿರುವದೇನು
ದಾನವಾಂತಕ ದೀನರಕ್ಷಕನೆಂಬ ಮಾನ
ನೀನು ಉಳಿಸಿಕೊಳ್ಳೊ ಪುರಂದರ ವಿಠಲ ॥ ೨೨ ॥

ಕಡೆಹಾಯಿಸುವುದು ನಿನ್ನ ಭಾರ
ನಿನ್ನ ನೆನೆಯುವುದು ಎನ್ನ ಭಾರ
ಸತಿಸುತರಿಗೆ ಹರಿ ನೀನೆ ಗತಿ
ಒಪ್ಪಿಸಿಕೊಡುವದು ಎನ್ನ ರೀತಿ
ಪಡಿಹಾರಿ ಸಲಹುವದು ನಿನ್ನ ಧರ್ಮ । ನಿ
ನ್ನಡಿಗಳಿಗೆ ನಮಿಸುವದು ಎನ್ನ ಕರ್ಮ
ಎನ್ನ ತಪ್ಪುಗಳೆಣಿಸೆ ನಿನಗೆ ಸಲ್ಲ
ನಿನ್ನೊರತು ಬದುಕುವದು ಎನ್ನದಲ್ಲ
ನಿನ್ನ ಚಿತ್ತಕಾಗಿ ಮಾನಾಭಿಮಾನ
ನಾನೊಪ್ಪಿಸಿ ಕೊಡದಿರೆ ಅಪಮಾನ
ಹರಿಯೆ ನಿನಗೆ ನಾ ಮೊರೆಯಿಡುವೆ
ಪುರಂದರ ವಿಠಲ ನಿನ್ನ ಪಾಡುವೆ ॥ ೨೩ ॥

ಅಂಗಜನಯ್ಯನೆ ಮಂಗಳ ಮಹಿಮನೆ
ಹೆಂಗಳೀರರಸ ಶ್ರೀ ಪುರಂದರ ವಿಠಲ ॥ ೨೪ ॥

ಮಾತಾಪಿತರು ನಿನಗಂದೆ ಮಾರಿದರಯ್ಯಾ
ನೀತವೆ ನಿನಗಿದು ಪೊರೆಯದಿದ್ದರೆ ಜೀಯ
ಯಾತಕೆ ಭಕತವತ್ಸಲನೆಂಬ ಬಿರಿದ ಪೊತ್ತೆ
ನಾ ತಡೆಯೆನೊ ನಿನ್ನ ಬಿರುದಿಗಂಜುವನಲ್ಲ । ಶಾ ।
ಶ್ರಿತ ಮೂರುತಿ ಪೊರೆಯೊ ಎನ್ನ । ವಿ ।
ಖ್ಯಾತ ಮೂರುತಿ ಶ್ರೀ ಪುರಂದರ ವಿಠಲ ॥ ೨೫ ॥

ಸೂಸಲಾಶೆಗೆ ಬಡಿಗಲ್ಲಿಗೆ ಸಿಲುಕಿದ
ಮೂಷಕನ ಪರಿಯಂತೆ ಆದೆನೆಲೋ ದೇವ
ಹೇಸಿ ವಿಷಯಗಳಿಗೆ ಎರಗುವದೆನ್ನ ಮನಸು
ಘಾಸಿಯಾಗದಂತೆ ಸಲಹಯ್ಯಾ
ದಾಸರ ಸಂಗದೊಳಿರಿಸೆನ್ನನವರತ
ದಾಸರ ಪ್ರಿಯ ಶ್ರೀ ಪುರಂದರ ವಿಠಲ ॥ ೨೬ ॥

ಅನುಕೂಲವಿಲ್ಲದರ ವರ್ಜಿಸಲಿಬೇಕು
ವಿನಯದಿ ಗುರುಹಿರಿಯರಲ್ಲಿ ನಡೆಯಲಿಬೇಕು
ಮನವು ಕದನದ ಠಾವ ಬಿಟ್ಟು ತೊಲಗಲಿಬೇಕು
ವನಜನಾಭನ ಭಕ್ತಸಂಗವಿರಬೇಕು
ಪುರಂದರ ವಿಠಲನ ಚರಣಸ್ಮರಣೆಬೇಕು ॥ ೨೭ ॥

ನಾ ಘನ್ನ ನೀ ಘನ್ನ ತಾ ಘನ್ನವೆನ್ನದಿರು
ಘನ್ನನೊಬ್ಬನೆ ಕಾಣೊ ಪುರಂದರ ವಿಠಲ ॥ ೨೮ ॥

ಮನದಭಿಮಾನಿ ಮಹಾರುದ್ರನ ಭಜಿಸಲು
ಅನವರತ ಶ್ರೀಹರಿಯ ಆರಾಧಿಸುವದಕ್ಕೆ
ಮನಶುದ್ಧಿಯನೀವ ಮತಿಕೊಡುವ
ಮನುಜೋತ್ತಮರು ಕೇಳಿ ಮನಕೆ ಪ್ರೇರಕನವನು
ವನಜಾಕ್ಷ ಪುರಂದರ ವಿಠಲನ ಒಲುಮೆಗೆ
ಮನಸು ಕಾರಣವಲ್ಲದೆ ಮಿಗಿಲಾವದು ॥ ೨೯ ॥

ಭಾರತಮಲ್ಲ ಕರ್ಣನೆಂಬರುಗಡ
ಭಾರತಮಲ್ಲ ಭೀಷ್ಮನೆಂಬರುಗಡ
ಭಾರತಮಲ್ಲ ದುರ್ಯೋಧನೆಂಬರುಗಡ
ಭಾರತಮಲ್ಲ ಭೀಮನೆಂಬರುಗಡ
ಭಾರತಮಲ್ಲ ಗದುಗಿನ ವೀರ

ನಾರಿಯಣನಲ್ಲದೆ ಮತ್ತೊಬ್ಬರಲ್ಲ
ಪುರಂದರ ವಿಠಲ ಈ ಪರಿಯ ಬಲ್ಲ ॥ ೩೦ ॥

ಉದಯಾಸ್ತಮಯವೆಂಬ ವೆರಡು ಕೊಳಗವಿಟ್ಟು
ಆಯಸ್ಸೆಂಬ ರಾಶಿ ಅಳೆದು ಹೋಗದ ಮುನ್ನ
ಬದಿಗಿಟ್ಟು ಎಲ್ಲವ ಹರಿಯ ನೆನೆಯಬೇಕು
ಮನಮುಟ್ಟಿ ನೆನೆದರಾತನ ಕಾರ್ಯಗಟ್ಟಿ
ಹಾಂಗಲ್ಲದಿರೆ ತಾಪತ್ರಯ ಬೆನ್ನಟ್ಟಿ
ಹದಗೆಟ್ಟು ಪೋದರೆ ನೀ ಕೆಟ್ಟಿ
ಪುರಂದರ ವಿಠಲನ ಕರುಣಾದೃಷ್ಟಿ
ಯಾರ ಮೇಲಿದ್ದರೆ ಅವನೆ ಜಗಜಟ್ಟಿ ॥ ೩೧ ॥

ಆಯುಸ್ಸು ಇದ್ದರೆ ಅನ್ನಕ್ಕೆ ಕೊರತಿಲ್ಲ
ಜೀವಕ್ಕೆ ಎಂದಿಗೂ ತನು ಕೊರತೆಯಿಲ್ಲ
ಸಾವು ಹುಟ್ಟೆಂಬುವದು ಸಹಜ ಲೋಕದೊಳು
ನೋಯದೆ ಭಜಿಸು ನೀ ಪುರಂದರ ವಿಠಲನ್ನ ॥ ೩೨ ॥

ನಿನ್ನನೇ ಪಾಡುವೆ ನಿನ್ನನೇ ಹೊಗಳುವೇ
ನಿನ್ನನೇ ನಾ ಬೇಡಿ ಬೇಸರಿಸುವೆ
ನಿನ್ನ ಕಾಲನು ಪಿಡಿವೆ ನಿನ್ನ ಹಾರೈಸುವೆ
ನಿನ್ಹೊರತು ಸಾಕುವ ದೇವರಿನ್ನುಂಟೇ
ಘನ್ನ ಪುರಂದರ ವಿಠಲ ದೇವದೇವ ॥ ೩೩ ॥

ತುಳಸಿಯಿರಲು ತುರುಚಿಯನು ತರುವಿರೋ
ಗಂಗೆಯಿರಲು ಕೂಪ ಸ್ನಾನ ಮಾಡುವಿರೋ
ಹಂಸವಿರಲು ಪಾಲ ಕೋಳಿಗೆರೆಯುವಿರೋ
ಬಾವನ ನೆಳಲಿರಲು ಬೇಲಿಯ ಬಯಸುವಿರೋ
ತಾಯಮಾರಿ ತೊತ್ತನೆ ತರುವೀರೋ
ಪುರಂದರ ವಿಠಲನ ದೂರ ಮಾಡುವಿರೋ ॥ ೩೪ ॥

ಮರವಿದ್ದರೇನಯ್ಯ ನೆರಳಿಲ್ಲದನಕ
ನೆರಳಿದ್ದರೇನಯ್ಯ ನೀರಿಲ್ಲದನಕ
ನೀರಿದ್ದರೇನಯ್ಯ ಪರತಿಯಿಲ್ಲದನಕ
ಧನವಿದ್ದರೇನಯ್ಯ ಕೊಡುಮನವಿಲ್ಲದನಕ
ಮನವಿದ್ದರೇನಯ್ಯ ಜ್ಞಾನವಿಲ್ಲದನಕ
ತನುವಿದ್ದರೇನಯ್ಯ ಪುರಂದರ ವಿಠಲನ
ನೆನೆ ನೆನೆದು ಊಳಿಗ ಮಾಡದನಕ || ೩೫ ||

ಶಿರಿ ವಿರಿಂಚಾದಿಗಳು ಅರಿಯದಂಥಾ ಮಹಿಮೆ
ಅರಿತು ಪಾಡಲು ಜಗದಿ ಅರುಹರಾರಯ್ಯ
ಅರವಿಂದ ದಳನಯನ ಶರಣೆಂದವರ ಕಾವ
ಕರುಣಾಸಾಗರ ನಮ್ಮ ಪುರಂದರ ವಿಠಲ || ೩೬ ||

ಅರ್ಭಕನ ತೊದಲು ನುಡಿ ತಾಯ್ತಂದೆ ಕೇಳಿ ಮನ
ವುಬ್ಬಿ ನಲಿವಂದದಲಿ ಉರಗಶಯನ
ಕಬ್ಬ ನಾನಾಡಿದರೆ ತಾಳಿ ರಕ್ಷಿಸೊ ಎನ್ನ
ಕಬ್ಬುಬಿಲ್ಲಾನಯ್ಯ ಪುರಂದರ ವಿಠಲ || ೩೭ ||

ಅಣುವಿಗೇ ಅಣುವಾಗಿ ಘನಕೆ ನೀ ಘನವಾಗಿ
ಗುಣತ್ರಯಾವರಣಗಳ ಮೀರಿದವನಾಗಿ
ಗುಣನಿಧೀ ಪುರಂದರ ವಿಠಲ ನೀನಿರಲು
ಎಣಿಕೆ ಮಾಡುವರ್ಯಾರು ಶೌರಿ ಕಂಸಾರಿ || ೩೮ ||

ಬಡವರಲಿ ನನ್ನಂಥ ಬಡವರಿನ್ನಿಲ್ಲ
ಕೊಡುವರಲಿ ನಿನ್ನಂತೆ ಕೊಡುವರಿನ್ನಿಲ್ಲ
ದೃಢಭಕ್ತಿ ನಿನ್ನಲ್ಲಿ ನೆಲೆಸುವಂತೆ ಮಾಡಿ
ಬಿಡದೆ ಪಾಲೀಸಯ್ಯ ಪುರಂದರ ವಿಠಲ || ೩೯ ||

ಕಾವ ದೈವವು ನೀನೆ ಕೊಲುವ ದೈವವು ನೀನೆ
ಕೈವಲ್ಯ ಫಲದಾತ ಕೇಶವನು ನೀನೇ

ಯಾವ ದೈವಕ್ಕೆ ಈ ವೈಭವವನು ಕಾಣೆ
ರಾವಣಾಂತಕ ಸ್ವಾಮಿ ಪುರಂದರ ವಿಠಲ || ೪೦ ||

ಮನೋ ವಚನಗಳಲ್ಲಿ ಕಾಯಕರ್ಮಗಳಲ್ಲಿ
ನೀನೆ ನೀನೆ ನೀನೆ ಪುರಂದರ ವಿಠಲ || ೪೧ ||

ಬಲಿಯಂತೆ ಮಕುಟವ ಕದ್ದುಕೊಂಡೋಡಬೇಕು
ವಾಲಿಯಂತೆ ನಿನ್ನ ಮೂದಲಿಸಲಿಬೇಕು
ಸುಗ್ರೀವನಂತೆ ಲೆಕ್ಕಿಸದಿರಬೇಕು
ಪುರಂದರ ವಿಠಲ ನೀ ಬರಬೇಕು || ೪೨ ||

ಬಲಿಯ ಮನೆಗೆ ವಾಮನ ಬಂದಂತೆ
ಭಗೀರಥಗೆ ಶ್ರೀ ಗಂಗೆ ಬಂದಂತೆ
ಮುಚುಕುಂದನಿಗೆ ಶ್ರೀ ಮುಕುಂದ ಬಂದಂತೆ
ಗೋಪಿಯರಿಗೆ ಗೋವಿಂದ ಬಂದಂತೆ
ವಿದುರನ ಮನೆಗೆ ಶ್ರೀಕೃಷ್ಣ ಬಂದಂತೆ
ವಿಭೀಷಣನ ಮನೆಗೆ ರಾಮ ಬಂದಂತೆ
ನಿನ್ನ ನಾಮವು ಎನ್ನ ನಾಲಿಗೆಗೆ ಬಂತು
ಪುರಂದರ ವಿಠಲ ನೀ ನಿಂತು ನುಡಿಸೋ || ೪೩ ||

ಮರ್ಕಟನ ಕೈನೂಲ ಗುಕ್ಕರಿಯ ತೆರನಂತೆ
ಸಿಕ್ಕಿಕೊಂಡು ಕಾಮ ಕ್ರೋಧ ಮೋಹಗಳೆನ್ನ
ಹಿಕ್ಕಿ ಹೀರುತಲಿವೆ ಯಾಕೆ ನೋಡುತಲಿದ್ದೀ
ಅಕ್ಕಟಕ್ಕಟ ನಿನ್ನ ದಾಸನಲ್ಲವೆ ನಾನು
ಸಿಕ್ಕು ಬಿಡಿಸಿ ನಿನ್ನ ಭಕುತಿಯ ತೋರಿಸೊ
ಪಕ್ಕಿವಾಹನ ನಮ್ಮ ಪುರಂದರ ವಿಠಲ || ೪೪ ||

ಅಪಾಯ ಕೋಟಿಗೆಲ್ಲ ಉಪಾಯವೊಂದೇ
ಹರಿಭಕ್ತರು ತೋರಿದ ಉಪಾಯವೊಂದೇ

ಉಪಾಯವೊಂದೇ ಪುರಂದರ ವಿಠಲನ
ಓ ಯಿಟ್ಟು ಕರೆವ ಉಪಾಯವೊಂದೇ || ೪೫ ||

ತಾಯಿ ಗೋಪಿಯಂತೆ ಒರಳ ನೆಳೆಸಲಿಲ್ಲ
ವಾಲಿಯಂತೆ ಎದುರು ವಾದಿಸಲಿಲ್ಲ
ಭೃಗು ಮುನಿಯಂತೆ ಎದೆಯ ನೊದೆಯಲಿಲ್ಲ
ಭೀಷ್ಮನಂತೆ ನಿನ್ನ ಹಣೆಯ ನೊಡೆಯಲಿಲ್ಲ
ಕೊಂಕಣೇರೆಮ್ಮೆಗೆ ಕೊಡತಿ ಮದ್ದೆಂಬಂತೆ
ಅವರೆ ಮದ್ದು ನಿನಗೆ ಪುರಂದರ ವಿಠಲ || ೪೬ ||

ಹಸಿವಾಯಿತೇಳು ದೇವರ ತೊಳೆಯೆಂಬರೋ
ಹಸನಾಗಿ ಮನಮುಟ್ಟಿ ಪೂಜೆಯ ಮಾಡರೋ
ವಸನ ಭೂಷಣ ದ್ರವ್ಯಕಾಗಿ ತೊಳಲುವರೊ । ಈ
ಬಿಸಜಾಕ್ಷರೆಲ್ಲರು ಪುರಂದರ ವಿಠಲ || ೪೭ ||

ಕ್ರಿಮಿಕೀಟನಾಗಿ ಹುಟ್ಟಿದಂದು ಹರಿಶರಣೆಂತೆನಲುಂಟೆ
ಹರಿ ಹರಿಣನಾಗಿ ಹುಟ್ಟಿದಂದು ಹರಿಶರಣೆಂತೆನಲುಂಟೆ
ಕತ್ತೆ ಕರಡಿಯಾಗಿ ಹುಟ್ಟಿದಂದು ಹರಿಶರಣೆಂತೆನಲುಂಟೆ
ಹಂದಿ ಶುನಕನಾಗಿ ಹುಟ್ಟಿದಂದು ಹರಿಶರಣೆಂತೆನಲುಂಟೆ
ಮರೆತೀಯೆ ಮಾನವ ನಿನ್ನ ಹಿಂದಿನ ಭವಗಳನೊಂದು
ಮಾನುಷ ದೇಹ ಬಂದೀತೊ ನಿನಗೀಗ
ಬೇಗ ನೆನೆಯೆಲೊ ಪುರಂದರ ವಿಠ್ಠಲರಾಯನ || ೪೮ ||

ಹೃದಯದ ಮಲವನ್ನು ತೊಳೆಯಲರಿಯದೆ
ಉದಯದೊಳು ಮಿಂದುಗದ ಗುಟ್ಟುವರು ನೋಡು
ಮುದಿಗಪ್ಪೆ ಮಾಡಿದ ತಪ್ಪೇನು ಆದರಿಂದ
ಹೃದಯ ನಿರ್ಮಲರಾಗಿ ಸ್ನಾನವ ಮಾಡಿರೊ
ಪದುಮನಾಭ ಶ್ರೀ ಪುರಂದರ ವಿಠಲನ
ಪದವ ನೆನೆದರದು ಗಂಗಾಸ್ನಾನ || ೪೯ ||

ಹಾಡಿದರೆ ಎನ್ನೊಡೆಯನ ಹಾಡುವೆ
ಬೇಡಿದರೆ ಎನ್ನೊಡೆಯನ ಬೇಡುವೆ
ಒಡೆಯನಿಗೆನ್ನ ಒಡಲನು ತೋರುವೆ
ಬಡತನ ಬಿನ್ನಹ ಮಾಡುವೆ
ಪೊಡವೀಪತಿ ಶ್ರೀ ಪುರಂದರ ವಿಠಲನ
ಅಡಿಗಳ ಸೇರಿ ಬದುಕುವೆ || ೫೦ ||

—o—

## ವಿಜಯದಾಸರ ಉಗಾಭೋಗಗಳು

ದಾಸನಾಗುವೆನೆಂದು ಆಶೆಮಾಡಲು ಬಲು ಕ್ಲೇಶವ ಬಡಿಸುವ | ಆ |
ಭಾಸವ ನುಡಿಸುವ ನಾಶಮಾಡುವ ಸಕಲೈಶ್ವರ್ಯಗಳನ್ನೆಲ್ಲ
ಗ್ರಾಸವಾಸಕೆ ತರರೀಸನು ಪರರಿಂದ ಮೋಸವಾದ ಭವ
ಕ್ಲೇಶಪಾಶದಿ ಬಿಗಿದು ದ್ವೇಷವ ಮಾಡಿಸುವ ನೀಚರ ಕೈಯಿಂದ
ಕಾಸಿನವನ ಮಾಡಿ ಬೀಸಿ ಬಿಸಾಡುವ ಲೇಸು ಕೊಡುವ ನಮ್ಮ
ವಿಜಯ ವಿಠಲನು
ದಾಸನಾಗುವನಿಗೆ ಕ್ಲೇಶ ಬಡಿಸದೆ ಒಲಿಯ || ೧ ||

ರೆಕ್ಕೆ ಮುರಿದ ಪಕ್ಕಿ ಬಾಯಿ ಬಿಟ್ಟಂತೆ ಗಗನಕ್ಕೆ ಮೊಗವೆತ್ತಿ ಕೂಗುತಿಪ್ಪೆ
ಅಕ್ಕರೆ ನಿನಗಿನ್ನು ಬಾರದೇನೆಲೊ ದೇವಕ್ಕಳೊಡೆಯ ತ್ರಿಜಗದಲ್ಲಿ ನೀನು
ರಕ್ಕಿಸಿ ಪೋಗುವೆಯ್ಯಾ ಸರ್ವಜೀವಿಗಳೊಳ್ಯಾತಕ್ಕೆ ಎನ್ನೊಬ್ಬನ ಪುಟ್ಟಿಸಿದೆ
ಪಕ್ಷದಾಸನು ನಾನು ವಿಠಲ ನಿನ್ನ ಲೆಖ್ಖಕ್ಕೆ ಮೊದಲಿಗನೆನಿಪೆನಯ್ಯಾ || ೨ ||

ಧ್ವಜವಜ್ರಾಂಕುಶ ರೇಖಾಂಕಿತದ ಹರಿಯ ಪಾದಾಂ
ಬುಜವ ಸೇವಿಸುವ ಅಜಭವರ ಭಾಗ್ಯನೋಡು
ತ್ರಿಜಗ ವಂದ್ಯನ ಪಾಡು ಭಕುತಿಯ ನೀ ಬೇಡು
ಕುಜನರ ಮಾತ ಸುಡು ದುರ್ಜನರ ಸಂಗವ ಬಿಡು
ಗಜರಾಜನ ಕಾಯ್ದ ಕೃಷ್ಣನ ಧ್ಯಾನಮಾಡು
ವಿಜಯ ವಿಠಲನ ಬಿಡದೆ ಕೊಂಡಾಡು || ೩ ||

ಕೋಟಿಕೋಟಿಗೆ ನಿನ್ನ ನಾಮವೊಂದೇ ಸಾಕು ದಾಟಿಸುವದು ಭವಸಾಗರವ
ಬೂಟಕತನದಲ್ಲಿ ಹರಿದಾಸನಾದರೆ ತೋಟವಿಲ್ಲದೆ ಊಟಿಯೆತ್ತಿದಂತಕ್ಕು
ನೀಟಾಗದು ಕಣೋ ಎಂದಿಗು ಯಮಭಟರ ಕಾಟತಪ್ಪದು
ಕಾಶಿಯೊಳಗಿದ್ದರೂ
ಹಾಟಕಾಂಬರಧರ ವಿಜಯ ವಿಠಲರೇಯ ನಾಟಿಸುವದು ನಿನ್ನ ಚರಣದಲ್ಲಿ
ಮನಸು ॥ ೪ ॥

ದೂರದಲ್ಲಿದ್ದೀಯೇನೋ ಮೊರೆಯಿಟ್ಟು ಕೂಗಿದಾರು ಯಾರು ನೀನೆಂದು
ಕೇಳದಿಪ್ಪುದು ಧರ್ಮವೆ
ದರಿದ್ರನ ಸೊಲ್ಲು ವ್ಯರ್ಥವೆಯಾಗಿದೆ ತಿರುಗಿ ಕೂಗಿದರಿಂದ ಏನಹುದೋ ।
ಧೀರ ನೀ ಬಧಿರನೊ ಕುರುಡನೊ ಕುಂಟನೊ ಕೀರುತಿಯೊಲ್ಲೆನೆಂಬ
ಮೌನವೇನೋ
ಧಾರುಣಿಯೊಳಗಿದ್ದವರ ನೋಡೆ ನಾನೊಬ್ಬ ಭಾರವೇನೋ ತಂದೆ ಅಕಟಕಟಾ
ಸಾರಿದವರ ಪೊರೆವ ವಿಜಯ ವಿಠಲ ನಿನ್ನ ಕಾರುಣ್ಯತನಕೆ ನಾನೊಬ್ಬನೇ
ಎರವೇ ॥ ೫ ॥

ಕಾಲಕಾಲಕೆ ನಿನ್ನ ನಾಮಸ್ಮರಣೆಯನ್ನು ನಾಲಿಗೆಗೆ ಕೊಡು ಕಂಡ್ಯ
ನಾರಾಯಣ
ಬಾಳಿದೆನೋ ಭವದೊಳಗೆ ಆಶೆಗೆ ಬಿದ್ದು ಕಾಲವನೂ ಕಳೆದೆ ಕಮಲೇಶ ರಂಗ
ಲಾಲಿಸಯ್ಯ ಮಾತ ಕರುಣದಿಂದಲಿ ನಿನ್ನ ಆಳುಗಳ ಕೂಡ ವಾಲಗವನಿತ್ತು
ಕೀಳುಮತಿಯ ಬಿಡಿಸಿ ಕೀರ್ತನೆ ಮಾಡಿಸೊ ಕಾಲಿಗೆರಗುವೆನೊ ದುರಿತಾರಿ
ಪಾಲಸಾಗರಶಾಯಿ ವಿಜಯ ವಿಠಲ ನಿನ್ನ ಪಾಲಿಗೆ ಬಂದೆನೊ
ಪತಿತಪಾವನನೇ ॥ ೬ ॥

ಕ್ಷೇಮವೆ ಕೊಡು ಜೀಯ ಇವರಿಬ್ಬರಿಗೆ ನಿತ್ಯ ಕಾಮಿತಾರ್ಥವು ಎನಗೆ
ಇದೆಯಲ್ಲವೇ
ಭೂಮಿಯೊಳಗೆ ಮತ್ತೊಂದಪೇಕ್ಷೆಯಿಲ್ಲವೊ ಸ್ವಾಮಿ ಕರುಣದಿಂದ ಒಲಿದು
ನೋಡೋ

ಶ್ರೀ ಮನೋಹರ ನಮ್ಮ ವಿಜಯ ವಿಠಲ ನಿನ್ನ ನಾಮದ ಬಲಕಿಂತ
ಅನ್ಯಬಲಗಳುಂಟೇ ॥ ೭ ॥

ನಾನೆ ನೀನೆಂದು ಒಮ್ಮೆಗಾದರು ನರ ಅನಂತ ಜನ್ಮದಲ್ಲಿ ನುಡಿದನಾಗೆ
ಶ್ವಾನಸೂಕರ ದುರ್ಯೋನಿಯಲ್ಲಿ ಪುಟ್ಟಿ ಮಾನಸಾಧಮನಾಗಿ ಕಟ್ಟಕಡೆಗೆ
ನಾನಾ ಸಂಕಟ ಪಟ್ಟು ಹೀನ ಭೋಜನಮಾಡಿ ತಾನಿಳಿವ ನಿತ್ಯ ನರಕದಲ್ಲಿ
ಅನಂತ ಜನ್ಮಕ್ಕು ಸೇವಕನೆಂದನೆ ತಾನೊಲಿದು ಗತಿ ವಿಜಯ ವಿಠಲ
ನೀವ ॥ ೮ ॥

ನಿನ್ನ ದಾಸನೆಂದೆನಿಸಬೇಕಾದರೆ ಭಂಗಪಡಲು ಬೇಕು ದಿನ ಪ್ರತಿದಿನದಲ್ಲಿ
ಅನ್ನ ವಸ್ತ್ರಕಿಲ್ಲದೆ ತಿರುಗಬೇಕು ಬೆನ್ನ ಬಿಡದೆ ರೋಗಂಗಳು ಬರಬೇಕು
ಪನ್ನಗಶಯನ ಶ್ರೀ ವಿಜಯ ವಿಠಲರೇಯ ಎನ್ನ ನೀ ಪರಿಯಲ್ಲಿ ಮಾಡಿದ
ಬಗೆ ಏನು ॥ ೯ ॥

ಎಲೊ ಎಲೊ ದುರಿತವೆ ಓಡು ಓಡು ನಿಲ್ಲಲಾಗದು ಎನ್ನ ಬಳಿಯಲ್ಲಿ
ಮೊದಲಂತೆ
ತಲೆಬಲಿತು ಸೊಕ್ಕಿ ನಿಂದೆಯಾದರೆ ನಿನ್ನ ಕುಲಕೆ ಕ್ಷೇಮವಿಲ್ಲ ಕೈಲಿ
ಕಡ್ಡಿಯನಿತ್ತೆ
ಮಲ್ಲರ ಗಂಡ ಶ್ರೀಕೃಷ್ಣ ಕಂಡರೆ ತಲೆಯ ಚಂಡಾಡುವ ಭೂತ ಬಲಿಯನೀವ
ತಿಳಿದುಕೊ ನಿನ್ನೊಳು ಮೊದಲಂತೆ ನಾನಲ್ಲ ಸುಲಭ ವಿಜಯ ವಿಠಲ
ನೊಲಿದರೆ ಭಯವಿಲ್ಲ ॥ ೧೦ ॥

—— ೦ ——

## ಗೋಪಾಲದಾಸರ ಉಗಾಭೋಗಗಳು

ನೀರೊಳಗೆ ನಿಂದು ಗಡಗುಟ್ಟಿ ನಾರುವಗೆ ಗಂಭೀರ ಕಸ್ತೂರಿ ಗಂಧ ಲೇಪದ
ಮದವೋ
ಭಾರ ಬೆನ್ನಿಲಿ ಪೊತ್ತು ಕಾಲ್ಮುದುರಿ ಮಲಗಿದಗೆ ಧೀರ ಶೇಷನ ಮೇಲೆ
ಶಯನ ಮದವೋ

ಮೋರಿಯಲಿ ನೆಲಕೆದರಿ ಬೇರ ಮೆದ್ದವಗೆ ಸಾರ ಷಡ್ರಸದ ಭೋಜನದ
ಮದವೋ
ಕರುಳನೇ ಕಿತ್ತು ವನಮಾಲೆ ಹಾಕಿದವಗೆ ಹಾರಪದಕಂಗಳ ಹಾಕಿಕೊಂಡಿಹ
ಮದವೋ
ಮೂರಡಿಯ ಭೂದಾನವನು ಬೇಡಿದವಗಿಂದು ಸಾರಿವರಭೀಷ್ಟಿಗಳ
ಕೊಡುವ ಮದವೋ
ಧಾರುಣಿಯೊಳಗೆ ನಿಜನಾರಿಯಳ ಕಳಕೊಂಡು ಮೂರು ಝಾವದ
ರಮೆಯ ಭೋಗದ ಮದವೋ
ಪೌರ ನಾರಿಯರಿಂದ ಬೈಸಿಕೊಂಡವಗೆ ವಾರಿಜ ಭವಾದಿಗಳು ವಂದಿಸುವ
ಮದವೋ
ಊರೆಲ್ಲ ನೋಡೆ ಬತ್ತಲೆನಿಂದವನಿಗಿಂದು ಚಾರುವಸ್ತ್ರಗಳುಟ್ಟು ಹೊದೆವ
ಮದವೋ
ಘೋರ ತುರಗವನೇರಿ ಕುಣಿಕುಣಿದಾಡಿದಗೆ ಚಾರು ಸಿಂಹಾಸನದಿ
ಕುಳಿತ ಮದವೋ
ಆರಿಗೂ ತಪ್ಪದು ಹಿಂದಿನ ಭವಣೆ ಬಹು ದೂರ ವಿಚಾರಿಸೋ ಮಾರರಮಣನೇ
ಮೂರುದಿನದರಸುತನ ಸ್ಥಿರವೆಂದು ನೆಚ್ಚಿ ನೀ ಸೇರಿದವರನು
ಬಿಡುವದುಚಿತವೇನೋ
ಶ್ರೀರಂಗರಾಜ ಗೋಪಾಲ ವಿಠಲರಾಯ ಸಾರವನೆ ತಿಳಿದು
ಕೀರುತಿಯ ಪಡೆಯೋ ॥ ೧ ॥

ಮನೆಯ ಕಟ್ಟುವರುಂಟು ಮಡದಿ ಮಕ್ಕಳುಂಟು
ಧನವಗಳಿಸುವರುಂಟು ಘಳಿಸದಿದ್ದವರುಂಟು
ಧನವಕಟ್ಟುವರುಂಟು ದಾನಮಾಡುವರುಂಟು
ರುಣವಕೊಟ್ಟವರುಂಟು ರುಣಮಾಡಿದವರುಂಟು
ಮಣೆಗಾರತನವಿಪರೊಳೆಂದಿಗೂ ಬೇಡ
ಮುನಿಗಳು ಸಹಿತಾಗಿ ಮೋಸಹೋದರು ಇದಕೆ

ಗುಣಪೂರ್ಣ ಚೆಲ್ವ ಗೋಪಾಲ ವಿಠಲ ನಿನ್ನ
ಗುಣಚಿಂತನೆಯೊಳಿಡು ಇಷ್ಟೆ ಸಾಕು || ೨ ||

ಘೋರಿಸುವ ದಾರಿದ್ರ್ಯ ದೂರಮಾಡಿದೆ ನಿನ್ನ
ಚಾರು ಚರಣಾರವಿಂದವನೆ ಕೂಡಿ
ಹಾರೈಸಿದ ಬಯಕೆ ಪೂರೈಸಿದೆಯೆ ತಾಯೆ
ಕಾರುಣ್ಯಕೇನೆಂಬೆ ಕಮಲಾಲಯೇ
[illegible] ವರದ ಗೋಪಾಲ ವಿಠ್ಠಲನ
ಕಾರುಣ್ಯಪಾತ್ರನ್ನ ಮಾಡಿದೆಯೆ ಇಂದು || ೩ ||

ಹಲ್ಲಣಿಲ್ಲದ ಕುದುರೆ ಹತ್ತಿ ಹಾರಿಸಿದಂತೆ
ಬೆಲ್ಲಹಾಕದೆ ಪರಮಾನ್ನವ ತಿಂದಂತೆ
ಇಲ್ಲದೆ ಹುಟ್ಟು ಹರಿಗೋಲ ನೇರಿದಂತೆ
ಸೊಲ್ಲಿಗೆಯ ಬುಡದಲ್ಲಿ ಅಳೆದಂತೆ ಸಾಧನೆ
ಎಲ್ಲಾ ಒಂದೇ ಎಂಬ ಜ್ಞಾನವುಂಟಾದರೆ
ಬೆಲ್ಲ ಬೇವು ಆಗುವದು ಅವನಿಗೆ ನೋಡು
ಮಲ್ಲಮರ್ದನ-ನಮ್ಮ ಗೋಪಾಲ ವಿಠಲನ
ಒಲ್ಲದವ ಕಾಣನೊ ಗತಿಯೆಂದಿಗಾದರು || ೪ ||

—o—

## ಇತರ ದಾಸರ ಉಗಾಭೋಗಗಳು.

ಕ್ಷೀರಸಾಗರಕೆ ಶ್ರೀಹರಿ ಬಂದಂತೆ
ಪ್ರಹ್ಲಾದನ ಮನೆಗೆ ನರಸಿಂಹ ಬಂದಂತೆ
ವಿದುರನ ಮನೆಗೆ ಶ್ರೀಕೃಷ್ಣ ಬಂದಂತೆ
ಗೋಪೇರ ಮನೆಗೆ ಗೋವಿಂದ ಬಂದಂತೆ
ಲಕುಮಿಾಪತಿವಿಠಲ ಬರಲೀ ನಿತ್ಯ
ಎನ್ನ ಮನಮಂದಿರದೊಳಿರಲಿ || ೧ ||

ಉಡುಪಿಯ ಕೃಷ್ಣನೆ ಸಡಗರ ನಿನಗೇಕೆ
ಬಡವನಾದವನ ಭವ ಮಡುವಿನೊಳು ನೂಕಿ
ಮಿಡುಕಿಸಿ ನೋಡುವುದು ತರವೇನೊ ಹರಿಯೆ
ಒಡಲಿಗೋಸುಗ ನಿನ್ನ ಬೇಡಬಂದವನಲ್ಲ
ದೃಢ ಭಕುತಿ ಜ್ಞಾನಗಳ ಕೊಟ್ಟು ರಕ್ಷಿಸೊ ಧೊರೆಯೆ
ಕಡಲಶಯನ ನಮ್ಮ ಶುದ್ಧ ಮೋಹನ ವಿಠಲ ॥ ೨ ॥

ಹರಿಯ ಭಜಿಸಬೇಕು ಮನವಿಟ್ಟು
ಭಜಿಸಿದರೆ ಅವನ ಕಾರ್ಯಗಟ್ಟಿ
ಅಲ್ಲದಿದ್ದರೆ ತಾಪತ್ರಯ ಬೆನ್ನಟ್ಟಿ
ಸದೆಯುವದು ಹೆಡಮುರಿಗೆ ಕಟ್ಟಿ
ಯೋಗೀಂದ್ರ ವಿಠಲನ ಕರುಣಾ ದೃಷ್ಟಿ
ಯಾರೀಗೆ ದೊರೆತರೆ ಆವನೆ ಜಗಜಟ್ಟಿ ॥ ೩ ॥

ಅಲ್ಲದ ಕರ್ಮವ ಮಾಡದಿರು
ಅಚ್ಯುತನಾಮವ ಮರೆಯದಿರು
ಪಾರವಧುಗಳ ನೀ ನೋಡದಿರು
ಪರಲೋಕಕೆ ದೂರಾಗದಿರು
ನೋಡುವದೇ ಹರಿಮೂರ್ತಿಯೆನ್ನು
ಕೇಳುವದೇ ಹರಿಕೀರ್ತಿಯೆನ್ನು
ಮಾಡುವದೇ ಸಜ್ಜನ ಸಂಗವೆನ್ನು
ಯೋಗೀಂದ್ರ ವಿಠಲ ಗತಿಯೆನ್ನು ॥ ೪ ॥

ನೆನೆಯೆ ಮನವನಿತ್ತೆ ಪೊಗಳೆ ನಾಲಿಗೆಯಿತ್ತೆ
ಬೆಲೆಯಿಲ್ಲದಾ ನಿನ್ನ ನಾಮಗಳಿತ್ತೆ
ನೋಡೆ ಕಂಗಳನಿತ್ತೆ ಕೇಳೆ ಕಿವಿಗಳನಿತ್ತೆ
ಪರಿಚಯ ಮಾಡಲು ತನುವಿತ್ತೆ
ಬಾಲ್ಯಯವ್ವನವಿತ್ತೆ ಹರಿದಿನ ವ್ರತವಿತ್ತೆ
ಇಷ್ಟು ನಿನ್ನ ಕರುಣಕೆ ಸರಿಯುಂಟೇ

ಅಜಮಿಳ ಅಣ್ಣನೆ ಧ್ರುವರಾಯ ತಮ್ಮನೆ
ರುಕುಮಾಂಗದ ನಿನ್ನ ಮೊಮ್ಮಗನೇ
ಆ ದಿನ ಅವರಿಗೆ ಬೇಡಿದನಿತ್ತೆ
ಈ ದಿನ ಇಲ್ಲದೆ ಹೋಗಿತ್ತೇ
ಅಂದು ಶಿರಿವಂತನೆ ಇಂದು ನೀ ಬಡವನೆ
ಎಂದೆಂದಿಗೂ ಲಕ್ಷ್ಮೀಪತಿ ನೀನಲ್ಲವೆ
ಇದು ಏನು ವಿನೋದ ಯೋಗೀಂದ್ರ ವಿಠಲ
ನಿನ್ನ ಮನದ ಚಿತ್ರಕೆ ನಮೊಯೆಂಬೆ ॥ ೫ ॥

ನೀರಿನಮೇಲಿನ ಗುಳ್ಳೆಯಂತೆ
ಈ ದೇಹ ನಿಮಿಷವೊ ನಿಮಿಷಾರ್ಧವೋ
ಹಾರಲ್ಯಾಕಕೆ ಸತಿಸುತರಿಗೆ ಧನಕಾಗಿ
ಹಾರಲ್ಯಾತಕೆ ಗೇಣು ಹೊಟ್ಟೆಗಾಗಿ
ಯಾರಿಗ್ಯಾರು ಯಮದೂತರು ಎಳೆದಾಗ
ಯಾರು ಬಿಡಿಸುವರಿಲ್ಲ ರಾಮಕೃಷ್ಣ ॥ ೬ ॥

ವರ ಧ್ರುವನವತಾರ ಶ್ರೀಪಾದರಾಯರು
ಶಿರಿರಂಗ ವಿಠಲನ ಉಪಾಸಕರು
ತರಳ ಪ್ರಹ್ಲಾದನೆಂದೆನಿಸಿ ಶೇಷಾವೇಶ
ಗುರು ವ್ಯಾಸರಾಯರೆ ಕೃಷ್ಣೋಪಾಸಕರು
ಸುರಮುನಿಯವತಾರವೆನಿಸಿದವರು ಶ್ರೀ
ಪುರಂದರದಾಸರು ವಿಠಲೋಪಾಸಕರು
ಧರೆಯೊಳಿವರ ನರರೆನ್ನುವರ ಬಿಡದೆ
ನರಕಕ್ಕೈದಿಸುವ ಗುರುಮಧ್ವಪತಿ ವಿಠಲ ॥ ೭ ॥

—— ೦ ——

ಈ ಕಾಲದಲ್ಲಿ ಉಪಲಬ್ಧವಿರುವ ಸುಮಾರು ಐನೂರು ಉಗಾಭೋಗಗಳಲ್ಲಿ ಮೇಲ್ಕಂಡ ನೂರನ್ನು ಮಾದರಿಗಾಗಿ ಕೊಟ್ಟಿದೆ. ಈ ನೂರು ಐನೂರರಲ್ಲಿ

ಆರಿಸಿ ತೆಗೆದವಲ್ಲ. ಒಂದು ಕ್ರಮವನನುಸರಿಸಿ ಕೊಟ್ಟವುಗಳೂ ಅಲ್ಲ. ಪ್ರಾಸವಿಲ್ಲದ ಅಂತ್ಯಾಕ್ಷರ ನಿಯಮಗಳಿರುವವು ಕೆಲವಿದ್ದರೆ ಪ್ರಾಸಬದ್ಧ ವಾಗಿರುವವು ಹಲವು ಇವೆ. ಸರ್ವ ಲಘುಗತಿಯಲ್ಲಿಯಾಗಲಿ ಅಟ್ಟತಾಳದ ಗತಿಯಲ್ಲಾಗಲಿ ಜಂಪತಾಳದ ಗತಿಯಲ್ಲಾಗಲಿ ಹೊಂದಿಸಿ ಹಾಡಲು ಅನುಕೂಲವಾಗಿವೆ. ಭಕ್ತಿಪಂಥದಲ್ಲಿ ಭಕ್ತನು ಸ್ವಾಮಿಗೆ ಮೊರೆಯಿಡುವ ಆರ್ತಭಾವವು ಈ ಉಗಾಭೋಗಗಳಲ್ಲಿ ಎದ್ದು ಕಾಣುತ್ತಿದೆ. ಶ್ರೀಮದ್ಭಾಗ ವತದಲ್ಲಿ ಹೇಳಿರುವ—

ಅಹಂ ಹರೇ ತವ ಪಾದೈಕಮೂಲ ದಾಸಾನುದಾಸೋ ಭವಿತಾಸ್ಮಿ ಭೂಯಃ
ಮನಃ ಸ್ಮರೇತಾಸುಪತೇರ್ಗುಣಾಂಸ್ತೇ ಗೃಣೀತವಾಕ್ಕರ್ಮ ಕರೋತು ಕಾಯಃ ॥೨೪॥
ನನಾಕಪೃಷ್ಠಂ ನಚಪಾರಮೇಷ್ಠ್ಯಂ ನಸಾರ್ವಭೌಮಂ ನರಸಾಧಿಪತ್ಯಂ
ನಯೋಗಸಿದ್ಧೀರಪುನರ್ಭವಂವಾ ಸಮಂಜಸತ್ವಾ ವಿರಹಸ್ಯ ಕಾಂಕ್ಷೇ ॥೨೫॥
ಅಜಾತಪಕ್ಷಾ ಇವ ಮಾತರಂ ಖಗಾಃ ಸ್ತನ್ಯಂ ಯಥಾವತ್ಸತರಾಃ ಕ್ಷುಧಾರ್ತಾಃ
ಪ್ರಿಯಂ ಪ್ರಿಯೇವ ವ್ಯುಷಿತಂ ವಿಷಣ್ಣಾ ಮನೋಽರವಿಂದಾಕ್ಷ ದಿದೃಕ್ಷತೇತ್ವಾಂ ॥೨೬॥VI

"ಓ ಹರಿಯೆ, ನಿನ್ನ ಪಾದಮೂಲದಲ್ಲಿಯೇ ದಾಸ್ಯಭಾವವುಳ್ಳ ದಾಸರಿಗೆ ದಾಸನಾಗಿ ನಾನು ಹುಟ್ಟುತ್ತೇನೆ. ಪ್ರಾಣಪತಿಯೆ, ನನ್ನ ಮನಸ್ಸು ನಿನ್ನ ಗುಣಗಳನ್ನು ಸ್ಮರಿಸುತ್ತಿರಲಿ, ನಾಲಿಗೆಯು ಗಾನಮಾಡುತ್ತಿರಲಿ, ದೇಹವು ಪೂಜಿಸುತ್ತಿರಲಿ; ನಿನ್ನನ್ನಗಲಿರುವ ಸ್ವರ್ಗ, ಪಾರಮೇಷ್ಠ್ಯ ಪದ, ಸಾರ್ವಭೌಮ ಪದ, ರಸಾತಳಾಧಿಪತ್ಯ, ಯೋಗಸಿದ್ಧಿ, ಇವು ಒಂದೂ ಬೇಡ. ರೆಕ್ಕೆ ಬರದ ಹಕ್ಕಿಮರಿಗಳು ತಾಯನ್ನು ಬಯಸುವಂತೆ, ವತ್ಸಗಳು ಗೋಮಾತೆಯ ಕ್ಷೀರವನ್ನು ಬಯಸುವಂತೆ, ಪತಿವ್ರತೆಯು ದೇಶಾಂತರಗತನಾದ ಪತಿಯನ್ನು ಹಂಬಲಿಸುವಂತೆ, ಕಮಲಾಕ್ಷನಾದ ನಿನ್ನನ್ನು ನೋಡಲು ನನ್ನ ಮನಸ್ಸು ಹಾತೊರೆಯುತ್ತಿದೆ." ಎಂಬ ಮಾತುಗಳಂತೆ ಹರಿದಾಸರು ಹಂಬಲಿಸುತ್ತಿರುವುದು ಕಂಡುಬರುತ್ತಿದೆ.

ಈ ಬಗೆಯ ಆರ್ತಭಾವವನ್ನು ಭರತಖಂಡದ ಪ್ರತಿ ಪ್ರಾಂತ್ಯಗಳ ಹರಿದಾಸರಲ್ಲಿ ಕಾಣಬಹುದು. ಬಂಗಾಳದ ಚೈತನ್ಯ ಮಹಾಪ್ರಭುವಿನ ಮಾತು ಹೀಗೆ; ಸಂಯುಕ್ತಪ್ರಾಂತ್ಯದ ತುಲಸೀದಾಸ, ಕಬೀರದಾಸರ ಮಾತು

ಹೀಗೆ; ಮಹಾರಾಷ್ಟ್ರದ ತುಕಾರಾಮರ ಮಾತು ಹೀಗೆ; ತಮಿಳ:ನಾಡಿನ ಆಳ್ವಾರರ ಮಾತು ಹೀಗೆ. ನೀನು ಈಶ, ನಾನು ದಾಸ; ಎಂಬುದಕ್ಕಿಂತ ಮತ್ತೊಂದು ಮಾತು ಭಕ್ತರಿಗೆ ರುಚಿಸುವುದಿಲ್ಲ. ಭಕ್ತಿಯಲ್ಲಿ ಐಕ್ಯವಿರುವದಿಲ್ಲ. ಜೀವ ಬ್ರಹ್ಮೈಕ್ಯದ ಕಡೆಗೆ ದಾಸರ ಮನಸ್ಸು ಹರಿಯುವುದಿಲ್ಲ. ತುಕಾರಾಮರು—"ನಾನು ನೀನೆಂಬ ಜ್ಞಾನಕ್ಕೆ ಪುರಸ್ಕಾರವಿರದಿರಲಿ. ನೀನು ನನ್ನನ್ನು ದಂಡಿಸು, ಬಹಿಷ್ಕರಿಸು; ನಾನು ನಿನ್ನ ದಾಸ, ನೀನು ನನ್ನ ಸ್ವಾಮಿ. ನನಗೂ ನಿನಗೂ ಭೇದವೇ ಇರಲಿ, ಅದು ನಾಶವಾಗದಿರಲಿ, ಅದು ಸ್ಥಾಪಿತವಾಗಲಿ, ನಾನು ನೀನಾದರೆ ನಿನ್ನ ಸೇವಕನೆಂಬ ಬಿರಿದು ಧರಿಸಲು ನನಗೆಲ್ಲಿರುತ್ತದೆ ? ಆಗ ನನ್ನ ನಿನ್ನ ಪ್ರೇಮವೇ ಇರುವದಿಲ್ಲವಲ್ಲಾ!" ಎಂದು ಮೊರೆಯಿಟ್ಟಿರುತ್ತಾರೆ. ಭಕ್ತಿಯಲ್ಲಿ ಭಕ್ತನ ನಂಬಿಕೆ ಹೀಗಿದೆ. ಶ್ರೀಮದ್ಭಾಗವತದಲ್ಲಿ ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನಗಳೆಂಬ ನವವಿಧ ಭಕ್ತಿಗಳಿದ್ದರೆ, ಭಕ್ತಿಸೂತ್ರಕಾರರಾದ ನಾರದರು ಗುಣ ಮಾಹಾತ್ಮ್ಯಾಸಕ್ತಿ, ರೂಪಾಸಕ್ತಿ, ಪೂಜಾಸಕ್ತಿ, ದಾಸ್ಯಾಸಕ್ತಿ, ಸ್ಮರಣಾಸಕ್ತಿ, ಸಖ್ಯಾಸಕ್ತಿ, ಕಾಂತಾಸಕ್ತಿ, ವಾತ್ಸಲ್ಯಾಸಕ್ತಿ, ಆತ್ಮನಿವೇದನಾಸಕ್ತಿ, ತನ್ಮಯತಾಸಕ್ತಿ, ವಿರಹಾಸಕ್ತಿಗಳೆಂಬ ಏಕಾದಶವಿಧ ಭಕ್ತಿಯನ್ನು ನಿರೂಪಿಸಿರುತ್ತಾರೆ. ಚೈತನ್ಯ ಪಂಥಿಗಳು—ವೈಧೀಭಕ್ತಿ, ಶುದ್ಧಭಕ್ತಿ, ರಾಗಾನುಗಾಭಕ್ತಿ ಈ ಮೂರೂ ಒಂದೊಂದಾಗಿ ಬೆಳೆದ ಈಶ್ವರೀ ಪ್ರೇಮವನ್ನು "ರತಿ" ಯೆಂದು ಕರೆದು, ಮತ್ತದರಲ್ಲಿ ಶಾಂತ, ದಾಸ್ಯ, ಸಖ್ಯ, ವಾತ್ಸಲ್ಯ, ಮಧುರ ಭಕ್ತಿಗಳೆಂದು ಪಂಚ ಪ್ರಕಾರಗಳನ್ನೇರ್ಪಡಿಸಿರುತ್ತಾರೆ. ಇವುಗಳಲ್ಲಿ ಮಧುರ ಭಕ್ತಿ ಎಲ್ಲಕ್ಕೂ ಹಿರಿದಾದದ್ದು. ಪರಮಾತ್ಮ ಪತಿ, ಜೀವಾತ್ಮ ಸತಿ; ಎಂದು ಭಕ್ತಿಯನ್ನು ಬೆಳೆಸುವುದು ಮಧುರ ಭಕ್ತಿ. ಈ ಮಧುರ ಭಕ್ತಿಯನ್ನು ತಮಿಳುನಾಡಿನ ಆಳ್ವಾರರು ಎಷ್ಟೋ ಕಾಲದ ಹಿಂದೆ ಬೆಳೆಸಿ ದಿವ್ಯ ಪ್ರಬಂಧಗಳನ್ನು ರಚಿಸಿರುತ್ತಾರೆ. ಕರ್ನಾಟಕದ ಹರಿದಾಸರು ನಾಯಕ ನಾಯಕೀ ಭಾವದಿಂದ ಅನುಸಂಧಾನ ಮಾಡಿ ನೂರಾರು ದೇವರ ನಾಮುಗಳನ್ನು ಹಾಡಿರುತ್ತಾರೆ. ಸ್ವಾಮಿ ಪತಿ, ನಾನು ಸತಿ, ಎಂದು ವಿವಿಧ ಭಂಗಿಗಳಿಂದ ಶ್ರೀಕೃಷ್ಣನನ್ನು ಕೊಂಡಾಡಿ ಪಾರವಶ್ಯ ಹೊಂದಿದ ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಚಿತ್ತೂರಿನ

ರಾಣಿ ಮೀರಾಬಾಯಿಯ ಹಾಡುಗಳನ್ನು ಜ್ಞಾಪಕಕ್ಕೆ ತರುತ್ತವೆ. ಉಭಯರ ಚಿತ್ರಗಳೂ ಕಣ್ಣುಮುಂದೆ ನಿಂತಂತಾಗುತ್ತವೆ. ಮಧುರ ಭಕ್ತಿಯಲ್ಲಿ ಹದಮೀರಿ ರೀತಿನೀತಿಗಳು ಕೆಡದಂತೆ ರಸಪೋಷಣೆ ಮಾಡಿಕೊಂಡು ಹಾಡಿರುವ ಹರಿದಾಸರ ದೇವರ ನಾಮಗಳು ತುಲನಾತ್ಮಕ ದೃಷ್ಟಿಯಿಂದ ನೋಡಿದರೆ ಆಶ್ಚರ್ಯವನ್ನುಂಟು ಮಾಡುತ್ತವೆ.

## ೩. ಮಧುರ ಭಾವ

ವ್ಯಾಸರಾಯ ಸ್ವಾಮಿಗಳು ಬಾಲಸನ್ಯಾಸಿಗಳು. ವೇಂಕಟ ಪರ್ವತವನ್ನು ಪಾದದಿಂದ ಸ್ಪರ್ಶಿಸಬಾರದೆಂಬಷ್ಟು ಭಯಭಕ್ತಿಗಳಿಂದ ತೆವಳುತ್ತಲೇ ಪರ್ವತಾರೋಹಣ ಮಾಡಿದರೆಂಬ ಪ್ರಸಿದ್ಧಿಯುಳ್ಳವರು. ಅನೇಕ ಶಾಸ್ತ್ರ ಗ್ರಂಥಗಳನ್ನು ರಚಿಸಿ ತರ್ಕ ವ್ಯಾಕರಣ ವೇದಾಂತಾದಿ ಶಾಸ್ತ್ರಗಳಲ್ಲಿ ಅಪ್ರತಿಮ ಪಾಂಡಿತ್ಯವುಳ್ಳವರೆಂದು ಪ್ರಖ್ಯಾತಿ ಪಡೆದವರು. ವಿಜಯನಗರ ಸಾಮ್ರಾಜ್ಯ ದೇವತೆಯಂತಿದ್ದು ಪ್ರತಿಯೊಂದು ರಾಜಕಾರ್ಯಗಳಲ್ಲೂ ಸಾರ್ವಭೌಮನಾದ ಕೃಷ್ಣದೇವರಾಯನಿಗೆ ಸಲಹೆ ಕೊಡುತ್ತಿದ್ದವರು. ಇಂಥವರು ಮಧುರ ಭಕ್ತಿಯ ಪರಮಾವಧಿಯ ಆನಂದದಲ್ಲಿ ಪರವಶರಾಗಿ ತಮ್ಮನ್ನು ರಾಧೆಯೆಂದು ಅನುಸಂಧಾನ ಮಾಡಿಕೊಂಡು, ಪರಮಾತ್ಮನನ್ನು ಮಾಧವನೆಂದೂ ರಂಗನೆಂದೂ ಕರೆಯುತ್ತ ಭಾವಾವೇಶದಲ್ಲಿ ಹಾಡಿದ ದೇವರನಾಮ ಈ ಕೆಳಗೆ ಕೊಟ್ಟಿರುವುದು. ಆರಾಧ್ಯ ದೇವತೆಯಾದ ಶ್ರೀ ಗೋಪಾಲಕೃಷ್ಣನನ್ನು ರತ್ನ ಮಂಟಪದಲ್ಲಿ ಶೃಂಗರಿಸಿ ಪೂಜಿಸಿ ಆರತಿಯೆತ್ತಿದ ಸಮಯ! 'ನೃತ್ಯಂ ಸಮರ್ಪಯಾಮಿ ಗೀತಂ ಸಮರ್ಪಯಾಮಿ' ಎಂದು ಉಪಚಾರಗಳನ್ನು ಮಾಡುವ ಸನ್ನಿವೇಶ! ಪುರಂದರದಾಸರು, ಕನಕದಾಸರು, ಮಧ್ವಪತಿ ಮೊದಲಾದ ಹರಿದಾಸರು ಪಕ್ಕಮೇಳದಲ್ಲಿ ಸಜ್ಜಿತರಾಗಿದ್ದಾರೆ. ಗೋವಿಂದ ಭಿಕ್ಷು, ವಿಷ್ಣುತೀರ್ಥ (ವಿಜಯೀಂದ್ರ), ವಾದಿರಾಜ ಮೊದಲಾದ ಇಪ್ಪತ್ತು ನಾಲ್ಕು ಜನ ಯತಿಗಳು ಮಹಾಸಭೆಯಲ್ಲಿ ಕುಳಿತಿದ್ದಾರೆ. ಪಂಡಿತ ಮಂಡಲಿಗೆಲ್ಲಾ ಅಧ್ಯಕ್ಷನೋ ಎಂಬಂತೆ ಸೋಮನಾಥ ಕವಿಯು ಮುಂಭಾಗದಲ್ಲಿ ಸಮೀಪದಲ್ಲಿ ಮುಕುಳಿತ ಹಸ್ತನಾಗಿದ್ದಾನೆ. ವ್ಯಾಸರಾಯರು ನರ್ತನಕ್ಕೆ

ಮೊದಲ ಹೆಜ್ಜೆಯಿಟ್ಟಕೂಡಲೇ ಅವರಿಗೆ ಭಾವೋದ್ರೇಕವಾಗಿದೆ. ನರ್ತನ ಮಾಡುತ್ತಾ, ವಾದ್ಯಗತಿಗೆ ತಕ್ಕಂತೆ—

**ಯರುಕುಲ ಕಾಂಬೋಧಿ — ಆದಿತಾಳ**

|| X ಸ ಸ ಧ ಧ ಪ ಪಾಪಮ | ಮಪಮಧ ಪಮಪಾ | ಮಗರೀಸರೀ ರಿಸ ||
ರಂ ಗ · ಬಾ · ರ · · ಬಾ · · · · · · · ಲೇ · · · · · ಕು ·
|| ಸ ರಿ ಮ ಗ ರಿ ಸ ಸರಿಮಗ | ರಿಸ ಸಾ | . . . .
ರ ಂ ಗ · ನ ಯ ನೇ · · ಕೇ · ಳೇ · · · · || ಪ ||
|| X ರಿಮಗಾಸಾ ಸಾ ಸಾ | ರಿ ಮ ಗ ಮ ಪಾ | ಪಾಧಸ ಧಪಪಮ ||
ಹೀ ಂ ಗಿ · ರ ಲಾ ರೆ · ನೇ · · ಹ ರಿ · ಯ · · ·
|| ೯ ಪಮಪಧಸಾ ಧಪ ಪಮಮಾ | ಗಮ ಗಮಪಾ | ಪಾ ಪಾ ||
· ಶ ಂ ಗ · · ಬಿ · ಟ್ಟ · · ವೇ · · · · ಲೇ ಈ
|| ಪಮ ಪಧಸಾದಾ ಧಪ ಪ ಮ ಮಾ | ಗಮ ಗಮಪಾ | ಪಾಪಪ ||
· · ತಂಗಾ · · ಳಿ · ಯ · · ವೇ · · · · ಳಿ ಗಿಳಿ
|| ಮ ಪಧಧಾಸದ ಧಪಮಮ | ಗಮ ಗಮಪಾ | ಪಾ ರಿಮಗಾ ||
· ಭೃಂಗ · · ನ · ಸ್ವರ ಗ · · · · ಳಿ ಬೆಳ
|| ಸಾ ಸರಿರೀಪಮ ಮಾಮಾ | ಮಪ ಮಪಧಾ | ಧಾ ಧಪ ಪಮಪಮ ||
· ದಿಂಗ · · ಳಿ ನ ಧಾ · · · · ಳೆ · · ಆ · · ·
|| ಪಮ ಪಧಧಾರಿಸ ಧಪಾ ೯ ಪಮಗಾ | ರಿಮಗಸ | ಸರಿಮಪ ಪಧಸಾ ||
· · ನಂಗ · · ಗಿ · ದು · · ವೇ · · · ಳೇ · · · · · || ಅ ||
|| X ಸ ಸ ಧ ಧ ಪ ಪಮಗಾ | ಗ ರಿ ರೀ ರಿಗಾಸ | ಸಾ ಸಾಗರಿ ||
ಅನ್ನ · ಉ ದ ಕ · · ತೊ · ರೆ ದೇ · · · ಆ · ·
|| ರೀ ರಿ ಪ ಪ ಮ ಗಾ ರಿ ಸ ಸ ರಿ ಮ ಗ | ರಿ ಸ ಸಾ | ೯ ೯ ೯ ೯ ||
· ಚಿ · ನ್ನ · · ದೊ ಡ ವೆ · · · ಮ ರೆ ದೆ · · · ·

|| ೯ ಸ ರಿ ಮ ಮಾ ಮಾ | ಗ ಮ ಪಾ | ಪ ಧ ಧ ಪ ಪ ಮ ||
• ಬಿ ನ್ನ • ಣಿಂ ದ ಉ ಡು ವ ತೊ ಡು ವ್ರೊ • • •
|| ೯ ಪಾ ಧಾ ಸಾ ಧ ಧ ಪ ಪ ಮ ಮಾ | ಗ ಮ ಗಾ ೯ ಮ | ಪಾ ೯ ೯ ||
• ಬ ಣ್ಣ • • • ದೊ ಸ ನ • • ಜ ರಿ ದೇ • • • •
|| ೯ ಸ ಸ ಧ ಧಪಪಮ | ಮ ಪ ಮ ಧ ಪಮಗಾ ಮಗರಿಸ ರಿ೯ ||
• ಸ ಣ್ಣ • ವ • ಳ • ಮಾ • • • • • • ಡೀ • • • ಆ
|| ರಿ ರಿಪಪಮಗಾ ರಿ ಸ ಸರಿಮಗ | ರಿ ಸ ಸಾ | ೯ ೯ ೯ ೯ ||
• ರ • ನ್ನೆ • • ಯ • ಳ • • • ಕೂ • ಡಿ • • • •
|| ೯ ಸ ರಿ ಮ ಮಾ ಮಾ | ಗಮ ಗಮಪಾ | ಪಧ ಧಪಪಮ ||
• • ಎ ನ್ನ • ಮೇ ಲೆ ಕೋ೯ ಪ • • ದಿಂ ದ • • •
|| ೯ ಪಾ ಧಾ ಸ ಧ ಧ ಪ ಪಮಮಾ | ಗಮ ಗಮಪಾ | ಪಾ ೯ ೯ ||
• ಭಿ ನ್ನ • • ನು ಡಿ ಗ • • ಳಾ • • • • ಡಿ • •
|| ೯ ಪಾ ಧಾ ಸ ಧ • ಧ ಪ ಪಮಮಾ | ಗ ಮ ಗಮಪಾ | ಪಾ ಪಾ ||
• ಕ ಣ್ಣು • • ತೆ ರೆ • ದು • • ನೋ೯ • • • • ಡೀ ಕಾ
|| ೯ ಪಾ ಧಾ ಸ ದ ಧ ಪ ಪ ಮ ಮಾ | ಗಮ ಗಮಪಾ | ಪಾ ೯ ೯ ||
• ರಿ ಣ್ಯ • • ಹೃ ದ ಯ • • ಮಾ • • • ಡೀ • •
|| ೯ ಪಾ ಧಾ ಸ ಧ ಧ ಪ ಪಮಮಾ | ಗಮ ಗಮಪಾ | ಪಾ ಪ ಪ. ||
• ಮ ಣ್ಣು • • ಕೆ ರೆ ದೀ • • ಡಾ • • • • ಡೀ ದು ರು
|| ೯ ಪಾ ಧಾ ಸ ಧ ಧ ಪ ಪ ಮ ಮಾ | ಗಮ ಗಮಪಾ | ಪಾ ಪ ಪ ||
• ಳ ನ್ನ • • ಉ ದು ರ • • ತೋ೯ • • • ಡೀ ಬ ಲಿ
|| ೯ ಪಾ ಧಾ ಸ ಧ ಧ ಪ ಪ ಮ ಮಾ | ಗಮ ಗಮಪಾ | ಪಾ ಪಾ ||
• ಯ ನ್ನೆ • • ದಾ • ನ • ವ ಬೇ೯ • • • • ಡೀ ತಾ
|| ೯ ಪಾ ಧಾ ಸ ಧ ಧ ಪ ಪ ಮ ಮಾ | ಗಮ ಗಮಪಾ | ಪಾ ಪಾ ||
• ಶ ನ್ನೊ • • ಳು • ತಾ ಕ ಡಿ ದಾ • • • ಡಿ ಆ

|| ೯ ಪಾ ಧಾ ಸ ಧ ಧ ಪ ಪ ಮ ಮಾ | ಗ ಮ ಗಮಪಾ | ಪಾ ಪ ಪ
 • ರ ಣ್ಯ • • ವಾ • ಸ • ವ ಮಾ • • • • ಡಿ ಬ ಲು

|| ೯ ಪಾ ಧಾ ಸ ಧ ಧ ಪ ಪಮಮಾ | ಗಮ ಗಮಪಾ ಪಾ ಮಗಗಾ
 • ಬ ನ್ನ • • ಬ • ಟ್ಟು • • ಓ • • • ಡಿ ಪ • ರ

|| ಸಾ ಸ ರಿ ರೀ ಪ ಮ ಪಗಮಾ | ಮ ಪ ಮಪಧಾ ಧಪ ಪಾಧಪ
 • ಹೆ • ಣ್ಣು • • ಗ ಳ ಕೂ • • • • ಡಿ • ಕ ಲಿ •

|| ಪ ಮ ಪಾ ಧಾ ಸ ಧ ಪಾ ಪಮಗಾ | ರೀ ಮ ಗ ಸಾ |
 • • ಯ ನ್ನೆ • • ಸಂ ಹಾ • ರ ಮಾ • • •

ಸರಿಮಪ ಪಧಮಾ || ೧
ಡಿ • • • • •

ಯುಗಳ ಸ್ತನಗಳ ಮೇಲೇ | ಅ | ಮುಗುಳು ಮಲ್ಲಿಗೆ ಮಾಲೆ
ಬಗೆಬಗೆ ಅಲಂಕಾರದಿಂದ | ಸೊಗಸಿಲಿದ್ದವೇಳೆ
ಖಗವಾಹನನು ಬಂದ | ಎನ್ನ | ಬಿಗಿಬಿಗಿದಪ್ಪುತನಿಂದ
ನಗುತ ಮಾತನಾಡಳಿವಳು | ಸುಗುಣಳಲ್ಲವೆಂದ ||
ನಿಗಮ ಚೋರನ ಕೊಂದ | ನಗವ ಬೆನ್ನಿಲಿ ತಂದ
ಜಗವ ನೆಗಹುವೆನೆಂದ | ಜಿಗಿದು ಕಂಭದಿ ಬಂದ
ಮಗುವಿನಂದದಿನಿಂದ | ಯಾ | ತ್ರಿಗಳ ಮಾಳ್ಪೆನೆಂದ | ಅ |
ನ್ನಗಳನೊಲ್ಲೆನೆಂದ | ಬಲು | ಬೆಣ್ಣೆ ಕದ್ದು ತಿಂದ
ನಗುತ ಬೆತ್ತಲೆ ನಿಂದ | ಘನ ತೇಜಿಯೇರಿನಿಂದಾ || ೨ ||

ನಾರಿ ಈಗ ನಾನು ಮು | ರಾರಿಯ ಕಂಡೆನು
ವಾರಿಜಾಕ್ಷ ಬಾರೆಂದು | ಕರೆವ ಬಾಗಿದೆನು
ಮಾರನಯ್ಯ ಜಾಣೆ ಎನ್ನ ಮೋರೆ ನೋಡಿದಾನೆ
ಚೋರನಾರಿ ಯಿವಳೆಂದು | ಬಾರದೆ ಪೋದಾನೆ ||
ನೀರೊಳಡಗಿದಾನೆ | ಮೋರೆ ಮುಚ್ಚಿದಾನೆ

ಕೋರೆ ತೋರಿದಾನೆ । ಆ । ಘೋರರೂಪ ತಾನೆ । ಬ್ರಹ್ಮ ।
ಚಾರಿಯೆಂತೆಂದಾನೆ । ಕ್ಷತ್ರರಶಿರತರಿದಾನೆ
ವಾರಿಧಿ ಕಟ್ಟಿದಾನೆ । ಬಲು । ಜಾರನಾನೆಂದಾನೆ । ನಾ
ರೀರ ವ್ರತವಳಿದಾನೆ । ಹಯ । ನೇರಿದ ಶಿರಿಕೃಷ್ಣನೇ ॥ ೩ ॥

ಎಂಬುದಾಗಿ ಹಾಡಿದ್ದಾರೆ.

ಈ ಪದದ ಅರ್ಥ ಮನಸ್ಸಿಗೆ ಹತ್ತಬೇಕಾದರೆ ಸಾಧಕನು ಮನೋಭೂಮಿಕೆಯನ್ನು ಮೊದಲು ಹದಗೊಳಿಸಬೇಕು. ಸ್ತ್ರೀಪುರುಷರೆಂದಕೂಡಲೇ ಹುಟ್ಟುವ ಪಾಶವೀ ವೃತ್ತಿಯನ್ನು ಚಿತ್ತದಿಂದ ದೂರಗೊಳಿಸಬೇಕು. ತಕ್ಕ ಸನ್ನಿವೇಶಗಳನ್ನು ಕಲ್ಪಿಸಿಕೊಳ್ಳಬೇಕು. ತಾಳಮೇಳಗಳೊಡನೆ ಹಾಡಬೇಕು. ಹಾಡುತ್ತ ಹಾಡುತ್ತ ನರ್ತನವು ನಡೆಯಲ್ಲಿ ತಾನಾಗಿ ಬರುವುದನ್ನು ಪರೀಕ್ಷಿಸಬೇಕು. ಹಾಡೇ ನರ್ತನವೋ ನರ್ತನವೇ ಹಾಡೋ ಎಂಬಂತೆ ಬರುವುದೋ ಇಲ್ಲವೋ ಎಂಬುದನ್ನು ಭಾವದಿಂದ ತಿಳಿಯಬೇಕು. ದೇವರ ನಾಮದ ಮೂರು ಚರಣಗಳಲ್ಲೂ ದಶಾವತಾರ ವರ್ಣನೆ ಹೇಗೆ ಬಂದಿರುವುದೆಂಬುದನ್ನು ವಿಮರ್ಶಿಸಿ ನೋಡಬೇಕು. ರಸ, ಭಾವ, ಚರಿತ್ರೆ, ಕವಿತಾ ನಿಯಮ ಇವುಗಳಲ್ಲಿ ಕ್ರಮ ಎಲ್ಲಾದರೂ ತಪ್ಪಿದೆಯೋ ಎಂದು ಹುಡುಕಬೇಕು. ಇಷ್ಟಾದರೂ ಮಧುರ ಭಕ್ತಿಯಲ್ಲಿ ರೀತಿನೀತಿಗಳು ಅಳತೆ ಮೀರದಿರುವುದನ್ನು ಮನವರಿಕೆ ಮಾಡಿಕೊಳ್ಳಬೇಕು. ಇಷ್ಟೆಲ್ಲಾ ಮಾಡದಲ್ಲದೆ ಹರಿದಾಸರುಗಳನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವಾಗುವುದಿಲ್ಲ. ದಾಸಸಾಹಿತ್ಯದ ಬೆಲೆ ಗೊತ್ತಾಗುವುದಿಲ್ಲ.

## ೪. ವಿರಹಭಾವ

ಪರಮಾತ್ಮನ ವಿರಹದಿಂದ ಸಂತಪ್ತರಾದ ಗೋಪಿಯರ ಮನಸ್ಸಿನ ಸ್ಥಿತಿಯನ್ನು ತಿಳಿಸುವ ಭ್ರಮರಗೀತಕ್ಕಿಂತ ವಿರಹ ಭಕ್ತಿಯ ಮಾದರಿ ಬೇರೊಂದಿರುವುದಿಲ್ಲ. ಶ್ರೀಪಾದರಾಯರು ಕನ್ನಡಿಸಿರುವ ಗೀತೆ ರಾಗತಾಳಗಳಲ್ಲಿ ಹಾಡುತ್ತ ಕುಳಿತರೆ ಪರಮಾತ್ಮನ ವಿರಹವನ್ನು ಸ್ವಯಂ ಅನುಭವಿಸಿ ಅದೇ ಮನಸ್ಸಿನಿಂದ ಅದೇ ಪಾರವಶ್ಯದಿಂದ ಬರೆದಂತೆ ಕಾಣುತ್ತದೆ.

ರಾಗ ಮುಖಾರಿ ಅಟ್ಟತಾಳ

ಭೃಂಗ ನಿನ್ನಾಟ್ಟಿದಾನೇ ॥ ಪ ॥

ಭೃಂಗಾ ನಿನ್ನಾಟ್ಟೇದಾನೇ ಶ್ರೀರಂಗ ಮಧೂರೇಲೀ ನಿಂದೂ
ಅಂಗಜಾಲುಬ್ಧಾಕಾ ಪೂ ಗೋಲಂಗಳ ತಾಡೇಯಾನಿಕ್ಕಿ
ಅಂಗಾನೇರೆಂಬೋ ಹುಲ್ಲೇ ಮ್ಯಾ । ಗಂಗಾಳಾನೇ ಗೂರೀ ಯೆಚ್ಚು
ಹಿಂಗೇಸೂತ್ಕೈದಾನೇ ಆಸೂವಾ । ಏ....ಕಿತಾವಾ ॥ ಅ ॥

ನಿನ್ನಾ ನೋಡೇನಮ್ಮಾ ಅಚ್ಚು । ತನ್ನಾ ಕಂಡಂತಾಯಿತಯ್ಯೊ
ಚನ್ನಿ ಗಾರಾರಾಸಾ ಕೂಶಾ । ಲೋನ್ನಾ ತೀಯಾಲೀಹಾನೇನೋ
ಚಿಣ್ಣಾತಾನಾ ಮೋದಾ ಲಾಗಾ । ವನ್ನಾ ಕೀತಾವಾ ಬಲ್ಲೀವೋ
ಸನ್ನ ಗಾರಾ ಚಿತ್ತಾ ಚೋರನ್ನಾ । ಶ್ರೀಹರೀಯಾ ॥
ಮನ್ನಾ ಹೀಗೇ ಮೆಚ್ಚೀ ತನ್ನೂ । ವನ್ನೋಪ್ಪೀಸೀದಾ ಮೂಗೂಧಾ
ವೆಣ್ಣು ಗಾಳಾ ವೀರಾಹಾಬ್ಧೀ । ಯನ್ನೇ ದಾಟೀಸೂವೆನೆಂದೂ
ತನ್ನಾ ನೇಹಾವೆಂಬಾ ನಾವೇ । ಯನ್ನೇರೀಸೀ ಪೋಗದಿನ್ನಾ
ಹುನ್ನಿರೋಳೂ ತೋರಾ ದ್ದೋ ದಾನೇ । ಏ ಕೀತಾವಾ ॥ ೧ ॥

ತಮ್ಮಾ ನಂದಾ ಗೋಪಾ ಯಾಶೋ । ದೆಮ್ಮ್ಯಾನ ಕಂಡೂ ಬಾರೆಂದೂ
ರಮ್ಮ್ಯೇಯಾ ರಾಮಾಣಾ ನಿನ್ನಾ । ನೊಮ್ಮೇ ಕಾಳೂಹೀದಾನ್ನೈಸೇ
ಹಮ್ಮೂಗೆಟ್ಟೂರಮ್ಮಾಹೇರಿಂದುವಮ್ಮಾಳೀಸೂವೇವೋ ವೃಥಾ
ನಮ್ಮ ಹಂಬಾಲಿನ್ನೇ ನಾವಾಗೇ । ಶ್ರೀಹಾರೀಗೇ ॥
ಹಮ್ಮೇಲಟ್ಟಾದಾಲಂಚೀಯ । ಗಮ್ಮಾನೇರ ಕೂಚಾದಾ ಕುಂ
ಕುಮ್ಮ ಕಸ್ತೂರೀಯಾಕಾರಾ । ದಮ್ಮಾದೀ ಸೀಲೂಕೀದಂಗೇ
ಕಮ್ಮ ಗೋಲಾನಾ ಬಾಣಂಗಾ । ಳಮ್ಮಾಳೀ ತೋಯಿಸೂತೀದೇ
ಸುಮ್ಮನೇ ಬಾಹೋದೇ-ಸುಲಾಭೇ । ಏ ಕೀತಾವಾ ॥ ೨ ॥

ಮಧೂಕುಂಜಾವನಾದಲ್ಲೀ । ಮಧುವೈರೀ ಕೋಳಾಲೂದಾ
ಲ್ಮಧುರಾಸೂಸ್ವಾರಾ ಕೇಳೀ । ಮದೀರಾಕ್ಷೇರೆಲ್ಲಾರೂ ಧಾ

ಮಾದಾ ಧ್ಯಾನಾ ಬಿಟ್ಟೊ ವ್ಯಾಗಾ । ಮೊದಾಗಂಪಾವೀಡೀದ್ಯೆದೀ
ಮದನಾನಯ್ಯಾ ನಾ ಕಾಣೂತ್ತಾ । ಶ್ರೀಹರೀಯಾ ॥
ಮೂದಾವೇರೀ ತಾಲೀವಾಗೀ ಮೇದೀನೀ ನೀಟ್ಟೇಸಾಲಾಗಾ
ಮೃದೂವಾಕ್ಯಾದೊಳೇಮ್ಮಾಪ್ಪಿ । ಆಧಾರಾವ್ಯಾತಾ ಭೋಜಾನಾ
ಕೊದಾಗೂವಾಸತಾತಾಸಾ । ನ್ನದ್ಧಾನಮ್ಮಾನಗಾಲೀಕಾ
ಲ್ಲೀದೇ ಯಾದಾನೆಂತೋ ಕೃಪಾಳೂ । ಏ ಕೇತಾವಾ ॥ ೩ ॥

ವಜ್ರಾಂಕೂಶಾ ಧ್ವಾಜಾಂಕೀತಾ । ಹೆಜ್ಜೆಯನ್ನೇ ತೀಳೀದಾ ಆ
ಅಬ್ಜಾಜಾಕ್ಷೇರೊಡನೇರಾತೀ । ಕಜ್ಜಾದೂಪಾವಾನಾದಲ್ಲೀ
ನಿರ್ಜಾರೋತ್ತಂಸಾರೋಡಾನೇ । ಮಜ್ಜಾನಕ್ರೀಡ್ಯಾಡೂವಾ ಸಾ
ಯುಜ್ಯಾಸೂಖಾವೆತ್ತಾಲಿಪ್ಪಾದೋ । ಶ್ರೀಹರೀಯಾ ॥
ಅಬ್ಜಾಭಾವಾ ಮೂನೀಜಾನಾ । ಪೂಜ್ಯಾನಾಗಾಲೀದಾ ಮೇಲೆ
ನಿರ್ಜೀವಿಗಾಳಾಗೀ ಕಣ್ಣಾ । ಕಜ್ಜಾಲಕಾಲಕೇಕೊಂಡೂ
ಲಜ್ಜೇಗೆಟ್ಟಾ ತಾನೂಲಾತೇ । ಜರ್ಝರಾರೀತಾದೀ ಜೀವಿಸೇ
ವಜ್ಜರೇದೇಯಲ್ಲಾವೇನಮ್ಮಾ । ಏ ಕೇತಾವಾ ॥ ೪ ॥

ಕತ್ತಾಲೇವೀರಾಯಾಬಟ್ಟೊ । ಮುತ್ತೀನಾಜೊಲ್ಲಾದೂರೂಬೀ
ಕತ್ತುರೀ ತೀಲೂಕಾವೂಹಾಲಿತ್ತಾ ಕುಂಡಾಲಾವೇಳಾಗೂ
ವೃತ್ತಾವಾದಾನಾನಾದಿ ಮಂ । ದಸ್ಮೀತಾ ತಿಂಗಾಳಿಂದೆಮ್ಮಾ
ಹೃತ್ತಾಪಾ ಪಾರೀಹಾರೀಸುವಾ । ಶ್ರೀಹರೀಯಾ ॥
ಮತ್ತೇ ವಕ್ಷಾದಾ ಶ್ರೀವತ್ಸಾ । ಕೌಂಸ್ತೂಭಾ ವೈಜಂತೀಮಾಲೇ
ಶ್ರೀತೂಲಾಸೀ ಘಮಾಘಮಿಾ । ಸುತ್ತಾಲೀಹಾಗಾಳಾಮಾಲೇ
ರತ್ನೂನಾ ಕಂಕಾಣಾಭೂಜಾ । ಕೀರ್ತಿಯಿಂದೋಪ್ಪುವಾ ಪೂರೂ
ಷೋತ್ತಾಮಾನಾ ಬಣ್ಣೀಪಾರುಂಟೇ । ಏ ಕೇತಾವಾ ॥ ೫ ॥

ಉತ್ಪಾಲಾ ಶ್ಯಾಮಾಲಾ ಮೋದಾ । ವೆತ್ತ ಭಾವಚೆನ್ನಾದಿಂದ
ಅತ್ಯಮ್ಮಾಲಾ ಪೊನ್ನಾಂಬಾರಾ । ಸುತ್ತೀದಾಮಾನೂಪೂರಾ ಝಾ
ಣತ್ಕಾರಾದೀ ಮಿಂಚೀ ಎಮ್ಮಾ । ಚಿತ್ತಾತೀಖೀಗೇ ಪೀಯೂಷಾ

ಸೂಕ್ತ ಮೇಘಾನಂತೇ ಒಪ್ಪೂವಾ । ಶ್ರೀಹರೀಯಾ ॥
ಹೆತ್ತಾ ತಾಯಿಾ ಆಪ್ತಾ ಬಂಧೂ । ಗೋತ್ರಾಗಾತೀ ನೀನೇವಮ್ಮಾ
ಚಿತ್ತವೆಂದೂ ನಂಬೀಕನ್ನಾ । ಹತ್ತೀಲಿಸಾರೀದಾವಾರಾ
ಒತ್ತೀತಾರಾಥಾವಾನೇರೀ । ಸತ್ವಾರಾ ಬಾರೂವೇನೆಂದೂ
ಮತ್ತಕ್ಯಾರಾನೋಡಾನೈದೀದಾ । ಏ ಕೀತಾವಾ ॥ ೬ ॥

ಲಕ್ಷೂಮಿಾ ರಾಮೂಣಾನಾವಾ । ಸೂಕ್ಷೂಮಾ ಗೊಲ್ಲಾರೂ ನಾವೂ
ಕುಕ್ಷೀಯೋಳೂ ಬೊಮ್ಮಾಂಡವಗೇ । ಮುಕ್ಷೀಕಾಗಾಳಂತೀಪ್ಪೇವೋ
ಮೋಕ್ಷೀಗಾಳಾರಾಸಾ ನಾವಾ । ಗೋಕ್ಷೀರಾದಿಂ ತೃಪ್ತಾರಾವೂ
ಲಕ್ಷಿಸೂವಾಹೆಂತೋ ನಮ್ಮಾನೂ ॥ ಶ್ರೀಹಾರೀಯೂ ॥
ರಕ್ಷೀಸಾಲೂದೀಸೀಜಾನಾ । ಶೀಕ್ಷೀಗೇ ಪಾಲೂ ಬೆಣ್ಣೆಯಾ
ಭಕ್ಷಿಸಿ ನೀರೂತಾನಮ್ಮಾ । ಅಕ್ಷೀಗೇ ಹಾಬ್ಬಾನೂಣೀಸೀ
ಈಕ್ಷೋಣೀಭಾರಾಹಾರಾಕಾ । ದೀಕ್ಷಾಗೇನಾರಾರಾ ಸಾಮ್ಯಾ
ವಕ್ಷ್ಯಮಾಣಾರೇವೇ ಮೂರ್ಖಾರೂ । ಏಕೀತಾವಾ ॥ ೭ ॥

ಹಿಂದೆ ಮಾಡೀದಾ ಸದ್ಧರ್ಮಾ । ದಿಂದಾ ಮಧೂರಾನಾಗಾರಾ
ದಿಂದೀವಾರಾಕ್ಷೀರಾನಂದಾ । ಸಿಂಧುವೀಗೂದೀತಾ ಪೂರ್ಣಾ
ಚಂದ್ರಾನಂತೋಪ್ಪೂವಾ ಶೀರಿ । ಮುಂದರಧಾರಾನಂಘ್ರೀಯ
ಪೊಂದೋ ಭಾಗ್ಯಾಕೇಣೀಯುಂಟೇ । ಶ್ರೀಹಾರೀಯಾ ॥
ಅಂದೆಮ್ಮೋಳೂ ರಾಸಾಕ್ರೀಡೇ । ಯಿಂದಾ ಬಂದಾಪಾಠಾಧಾವಾ
ನೊಂದನೇಣೀಸಾದೇಸಾಲಾ । ಹೆಂದೂ ಬಿನ್ನೈಸೀ ಸಾಷ್ಟಾಂಗಾ
ದಿಂದಾ ವಂದೀಸೂವೇ ಭಕ್ತಾ । ಬಂಧೂವೀಗೇ ಎಮ್ಮಾ ಹೃದಯಾ
ಮಂದೀರಾದೋಳೆಂದೆಂದೀರೆಂದೂ । ಏ ಕೀತಾವಾ ॥ ೮ ॥

ಹೆಂಗಾಳೀರೊಂದಾಗೀ ಅಂತ್ಯಾ । ರಂಗಾ ದಾರಾಸಾನಾಡೀದಾ
ಮಂಗಳ ಚಾರಿತ್ರೀಯನ್ನೂ । ಸಂಗೀತಾದಿಂ ಪೊಗಾಳೂತ್ತಾ
ಕಂಗಾಳಶ್ರೂಗಳೀವುತ್ತಾ । ಇಂಗೀತಜ್ಞಾ ದೇವಾನಂಗಾ
ಸಂಗದಾನಂದಾವಾ ನೆನೇದೂ । ಶ್ರೀಹರೀಯ ॥

ಮಂಗಾಳಾ ವೇದಾಸ್ತ್ರೀನಾರೀ ಶೃಂಗಾರಾಕೂರುಮಾನವ್ಮಾ
ಪೊಂಗಣ್ಣಾ ನಾಶೀಳ್ದಾ ನಾರಾ | ಸಿಂಗಾ ವಾಟೊಭಾಗಾರ್ವಾನೇ
*ಅಂಗಾದಾಪಾರ್ಥಾಶಂಭೂ ತೂ | ರಂಗಾಪಾ ರಂಗಾವಿಠಾಲ
ತುಂಗ ಮಹಿಮಾ ನಮೋ ಎಂಬೇವ್ರೋ | ಏಕೀತಾವಾ || ೯ ||

—o—

ಈ ಭ್ರಮರ ಗೀತದಲ್ಲಿ ಹಳೆಗನ್ನಡ ಶಬ್ದಗಳು ಎಷ್ಟು ಮುದ್ದಾಗಿ ಹೊಂದಿಕೊಂಡಿವೆ; ಸಂಗೀತದಲ್ಲಿ ಹೇಗೆ ಹುದುಗಿವೆ, ಭಾಷೆಗೆ ತಕ್ಕಂತೆ ಭಾವನೆ, ಭಾವನೆಗೆ ತಕ್ಕಂತೆ ರಾಗ ಈ ಎಲ್ಲದರ ಸಾಮರಸ್ಯ ವಿರಹ ಭಕ್ತಿಯನ್ನು ಎಷ್ಟು ಪರಮಾವಧಿಗೆ ಮುಟ್ಟಿಸಿದೆ ; ಎಂಬುದನ್ನು ರಸಋಷಿಗಳಂತೆ ಗಮನಿಸಿ ಆನಂದಪಡಬೇಕು. ಹ್ರಸ್ವಾಕ್ಷರಗಳನ್ನು ದೀರ್ಘಾಕ್ಷರವಾಗಿ ಬರೆದಿರುವುದನ್ನು ಸಂಗೀತಕ್ಕಾಗಿ ಎಂದು ತಿಳಿಯಬೇಕು.

ಅಗಲಿದ ನಂತರದ ಭಾವನೆಗಿಂತ ಅಗಲುವನೆಂದರಿತು ಗೋಪಿಯರು ಕೃಷ್ಣನನ್ನು ಕೇಳಿಕೊಂಡ ಬಗೆಯು ಹೇಗೆ ಕನ್ನಡವಾಗಿದೆಯೆಂಬುದನ್ನು ಮುಂದಿನ ಪದದಲ್ಲಿ ನೋಡಬೇಕು.

ಶ್ರೀಕೃಷ್ಣನು ಅಕ್ರೂರನೊಡನೆ ಮಥುರಾ ಪಟ್ಟಣಕ್ಕೆ ಪ್ರಯಾಣ ಮಾಡುವನೆಂದರಿತು ಅವನೊಡನೆ ಮಾತಾಡಿದ ಸನ್ನಿವೇಶವಿದು. ಈ ಪದದ ರಚನೆಯಾದದ್ದು ತುಂಗಭದ್ರಾತೀರದಲ್ಲಿರುವ ವೇಣೀಸೋಮಪುರವೆಂಬ ಗ್ರಾಮದಲ್ಲಿ. ವೇಣೀಸೋಮಪುರವು ಗದ್ವಾಲ ಸಂಸ್ಥಾನಕ್ಕೆ ಸೇರಿದೆ. ವೇಣುಗೋಪಾಲಸ್ವಾಮಿಯ ದಿವ್ಯ ದೇವಾಲಯವನ್ನು ವ್ಯಾಸತತ್ವಜ್ಞರು ಪ್ರತಿಷ್ಠಿಸಿದ್ದಾರೆ. ವ್ಯಾಸತತ್ವಜ್ಞರು ವಾಸುದೇವ ವಿಠಲ ಮುದ್ರಿಕೆಯಿಂದ ಅನೇಕ ಕನ್ನಡ ದೇವರನಾಮಗಳನ್ನು ಹಾಡಿದ್ದಾರೆ. ಆ ಸುತ್ತಲಿನ ಸ್ಥಳವು ಗೋಕುಲದಂತಿದೆ. ತುಂಗಭದ್ರೆಯು ಯಮುನೆಯಂತೆ ಶೋಭಿಸುತ್ತಿದ್ದಾಳೆ. ವ್ಯಾಸತತ್ವಜ್ಞರೂ

* ಅಂಗದ ಪಾರ್ಥ ಶಂಭು ತುರಂಗಪ ಅಂದರೆ–ಅಂಗದಪ (ರಾಮ), ಪಾರ್ಥಪ (ಕೃಷ್ಣ), ಶಂಭುಪ (ಬುದ್ಧ), ತುರಂಗಪ (ಕಲ್ಕಿ) ಎಂದು ಬಹು ಗೂಢವಾಗಿ ಅವತಾರಗಳನ್ನು ತಿಳಿಸಿರುತ್ತಾರೆ.

ಗೋಪಾಲದಾಸರೂ ಶ್ರೀಮದ್ಭಾಗವತದಲ್ಲಿ ಅಕ್ರೂರನು ಶ್ರೀಕೃಷ್ಣನನ್ನು ಮಥುರೆಗೆ ಕರೆದೊಯ್ಯಲು ಬಂದ ಘಟ್ಟವನ್ನು ಓದುತ್ತಿದ್ದಾರೆ. ಗೋಪಿಯರಿಗೆ ಶ್ರೀಕೃಷ್ಣನು ಹೇಳುವ ಸಮಾಧಾನಗಳನ್ನು ಚರ್ಚಿಸುತ್ತಿದ್ದಾರೆ. ಗೋಪಿಯರ ಮಧುರ ಪ್ರೇಮರಸದಲ್ಲಿ ಉಭಯರೂ ಭಾವಸಮಾಧಿಗೊಳಗಾಗಿದ್ದಾರೆ. ವ್ಯಾಸತತ್ವಜ್ಞರು ವಿರಹಭಕ್ತಿಯ ಮಟ್ಟದಲ್ಲಿದ್ದರೆ ಗೋಪಾಲದಾಸರು ಮಧುರ ಭಕ್ತಿಯ ಪರಮಾವಧಿಯನ್ನು ಮುಟ್ಟಿದ್ದಾರೆ. ಸುತ್ತಮುತ್ತ ದಾಸರ ಇಬ್ಬರು ತಮ್ಮಂದಿರೂ ಶಿಷ್ಯರುಗಳೂ ಸ್ತಬ್ಧರಾಗಿ ಕುಳಿತಿದ್ದಾರೆ. ಕೃಷ್ಣಗೋಪಿಯರ ಸಂಭಾಷಣೆಯ ಚಿತ್ರ ಎಲ್ಲರ ಕಣ್ಣಿಗೆ ಕಟ್ಟಿದಂತಾಗಿದೆ. ಅದೋ ಶ್ರೀಕೃಷ್ಣನ ವೇಣುಗಾನ ಕೇಳಿತೆಂದು ಗೋಪಾಲದಾಸರು ವ್ಯಾಸತತ್ವಜ್ಞರನ್ನು ಎಚ್ಚರಿಸಿದ್ದಾರೆ. ಗೋಪಾಲದಾಸರ ಚಿಕ್ಕ ತಮ್ಮಂದಿರು ವಿರಹ ಭಕ್ತಿಯ ಉದ್ರೇಕದಿಂದ—

ರಾಗ ತೋಡಿ ಆದಿತಾಳ

ಅಗಲಿ ಸೈರಿಸಲಾರೆವೋ । ವೇಣುಗೋಪಾಲ ॥ ಪ ॥

ಅಗಲೀ ಸೈರಿಸಲಾರೆವೊ । ನಗಧರ ಪನ್ನಗನಗಾಧೀಶ ॥
ಮೃಗಮದತಿಗರಿನ । ನಗೆಮೊಗ ಚನ್ನಿಗ
ನಿಗಮಗಳಿಗೆ ಸಿಗ । ದಗಣಿತ ಸುಗುಣ ॥ ನಿನ್ನಗಲಿ ॥ ಅ ॥

ಗುಲುಗಂಜಿ ಬರ್ಹಿಯ ಗರಿಯು । ಎಳೆದಳಿರು ಕೇತಕಿಯ ಗರಿಯು
ಥಳಥಳಿಪ ಫಾಲದರಳೆಲೆಯು । ಹೊಳೆವ ಕುಂಡಲಗಳ ಪ್ರಭೆಯು ॥
ಉಲಿವ ಹಾರಗಳದಿ ಒಪ್ಪುತ್ತಾ । ಸು ಧಾ ಮ ರಾ ಮ
ಗೆಳೆಯರಿಂದ ಕೂಡಿ ಪಾಡುತ್ತಾ । ರಾ ಜ ಬೀ ದಿ ಯೊ ಳು
ಸುಳಿದು ಕುಲುಕಿ ನಲಿನಲಿದಾಡುತ್ತಾ । ನಿ ತ್ಯ ಗೋ ವ ತ್ಸ
ಗಳನು ಸಂರಕ್ಷಣೆ ಮಾಡುತ್ತಾ । ಕೊ ಳ ಲ ನೂ ದು ತ್ತ ॥
ಸುಳಿವಳಿಗಿಳಿ ಸಖಿಗಳ ಕುಲಾವಳಿಗಳ । ಘಲಿಘಲಿಘಲಿರೆಂದು ಕುಣಿಸುತ್ತಾ
ಎಳೆವಾರೆಗಣ್ಣಲಿ ನೋಡುತ್ತಾ । ಲಲನೇರ ತನುಮನ ಸೆಳೆಯುತ್ತಾ ॥

ಕಿಲಿ ಕಿಲನಗುತಿವ್ಮೊಳು ರಮಿಸುತ ಕೆಂ | ದೊಳದುಟಿ ಸವಿಯುವ
ಚಲುವ ಚನ್ನಿಗ || ನಿನ್ನಗಲಿ || ೧ ||

ದೇವ ಕೊಳಲನೂದುವದು | ನಾವು ಕೇಳಿಮುದದಿನಲಿದು
ಗೋವ್ಯಾಘ್ರವೇಕತ್ರ ಬೆರೆದು | ಕೇವಲ ವೈರತ್ವ ಮರೆದು ||
ಮೇವು ಜರಿದು ನಿನ್ನನೆ ನೋಡುತ್ತಾ | ಖ ಗ ಮೃ ಗ ವು ಏ ಕೋ
ಭಾವದಿಂದ ಗಾನವ ಕೇಳುತ್ತಾ | ಚಿ ತ್ರ ದಿ ಬ ರೆ ದ
ಭಾವದಂತೆ ಜನಕೆ ತೋರುತ್ತಾ | ಮ ನೆ ಯೊ ಳು ವಾ ರ್ತೆ
ನಾವು ಕೇಳಿ ಮನದಿ ಹರ್ಷಿಸುತ್ತಾ | ನಿ ಲ್ಲ ದೆ ತ್ವ ರಿ ತ ||
ತಾವನ ಬಾವನ ಮಾವಿನ ಮರದೊಳು | ಗೋವನು ನಿನ್ನನು ಕಾಣುತ್ತಾ
ಭಾವಜ ಕಳೆಗಳು ಉಕ್ಕುತ್ತಾ | ಭಾವದಿ ಬಿಗಿಬಿಗಿ ದಪ್ಪುತ್ತಾ ||
ಈವಿಧ ಮುದ ನಮಗೀವ ಸುಖಾಂಬುಧಿ | ಪೂವಿನ ಶರಪಿತ ಮಾವನ ಬೆರೆ
ದರೆ || ನಿನ್ನಗಲಿ || ೨ ||

ಅನಘ ನಿನ್ನನುಗಾರರು ಕೂಡಿ | ವನವನ ಸುಳಿಯಲು ನೋಡಿ
ಕೊನೆಗಣ್ಣಿಂದ ಸನ್ನೆಯ ಮಾಡಿ | ಮನೆಯ ಕೆಲಸಗಳೀಡ್ಯಾಡಿ ||
ವನಿತೇರೆಲ್ಲ ಮಾತನಾಡುತ್ತಾ | ಚ ಲು ವ ಮೂ ರ್ತಿ ಯ
ಮನದೊಳಗೆ ಧ್ಯಾನ ಮಾಡುತ್ತಾ | ಬ ೦ ಧು ಗ ಳ ಮಾ ತ
ಗಣನೆ ಮಾಡದಲೆ ಮೀರುತ್ತಾ | ಊ ದು ವ ಕೊ ಳ ಲ
ಧ್ವನಿಯ ಕರ್ಣದಿಂದ ಕೇಳುತ್ತಾ | ನಿ ನ್ನ ನ ರ ಸು ತ್ತ ||
ತನುಮನಧನವನು ಗಣಗೆನೆ ತಾರದೆ | ವನವನ ತಿರುಗುತ ಬಂದೇವೋ ||
ತನುಮನ ವೊಪ್ಪಿಸಿನಿಂದೇವೋ | ಮನಸಿಜ ಕೇಳಿಗೆ ಸಂದೇವೋ ||
ಚಿನುಮಯ ಗುರು ಗೋಪಾಲ ವಿಠಲ ಮಾ | ಮನೋಹರ ಮುನಿಜನ ಮನ
ಮಂದಿರ || ನಿನ್ನಗಲಿ || ೩ ||

ಈ ಪದದಲ್ಲಿರುವ ಶಬ್ದ ಸಂಪತ್ತು ಅಮೋಘವಾದದ್ದು. ಯಾವದಾದರೂ ವೃತ್ತದಲ್ಲಿ ಷಟ್ಪದಿಯಲ್ಲಿ ಥಾಟಿಯಾಗಿ ಪದ್ಯಗಳನ್ನು ಬರೆಯಬಹುದು. ಗದ್ಯವನ್ನು ಮತ್ತಷ್ಟು ಸುಲಭವಾಗಿ ಬರೆಯಬಹುದು. ಭಾವನೆಗೆ ತಕ್ಕಂತೆ

ಶಬ್ದಗಳನ್ನು ಹೊಂದಿಸಿ, ಆ ಎರಡಕ್ಕೆ ತಕ್ಕ ರಾಗವನ್ನಾರಿಸಿ ಸುಖ ಸ್ಥಾನದಲ್ಲಿರಿಸಿ, ಅಲ್ಲಿಂದ ಮೇಲೂ ಕೆಳಗೂ ಸಂಚರಿಸುವ ದಾರಿ ತೋರಿಸಿ, ತಕ್ಕ ತಾಳದಲ್ಲಿ–ಆ ತಾಳದ ಕಾಲಗಳಲ್ಲಿಟ್ಟು, ಕಾಲದ ವೇಗ ಹೆಚ್ಚಿದಂತೆ ಒಂದಕ್ಕೆರಡಾಗಿ ನಾಲ್ಕಾಗಿ ಪ್ರಾಸಗಳನ್ನು ಜೋಡಿಸಿ, ಕೇಳಲು ಕರ್ಕಶವಾಗದಂತೆ ಪದಗಳನ್ನು ಬರೆಯಬೇಕೆಂದರೆ ಅದು ಬಲು ಪರಿಶ್ರಮದ ಮಾತು.

## ೫. ನವವಿಧ ಭಕ್ತಿ

ಭಕ್ತಿಯಲ್ಲಿ ಭಿನ್ನ ಭಿನ್ನ ಮತಕಾರರು ಭಿನ್ನ ಭಿನ್ನ ಪ್ರಕಾರಗಳನ್ನು ಏರ್ಪಡಿಸಿದ್ದಾರೆ. ಆ ಎಲ್ಲ ಪ್ರಕಾರಗಳೂ ನವವಿಧ ಭಕ್ತಿಗಳಲ್ಲಿ ಅಡಕವಾಗಿರುತ್ತವೆ. ವಿರಹ ಮಧುರ ಭಕ್ತಿಗಳೆಂದು ಮೇಲೆ ಉದಹರಿಸಿದ ಎರಡು ಪ್ರಕಾರಗಳು, ಆತ್ಮ ನಿವೇದನದ ಅಂಗಗಳಾಗಿವೆ. ಶ್ರೀಮದ್ಭಾಗವತದಲ್ಲಿ ಹೇಳಿರುವ ನವವಿಧ ಭಕ್ತಿ ವಿಚಾರದಲ್ಲಿ ಸಿದ್ಧಾಂತಕಾರರು ಕೇವಲ ನವವಿಧ ಭಕ್ತಿಗಳಿಂದಲೇ ಮೋಕ್ಷ ಸಾಧನೆಯಾಗುವುದೆಂದು ತಿಳಿಯಬೇಕಾಗಿಲ್ಲ; ಅವು ನವವಿಧ ದ್ವೇಷಗಳಿಂದಲೂ ರಹಿತವಾಗಿರಬೇಕೆಂದು ಎಲ್ಲಿ ಸ್ವಲ್ಪ ಸಂದೇಹ ಬಂದರೂ ಅವಕಾಶವಿರದಂತೆ ಎಚ್ಚರಿಸಿರುತ್ತಾರೆ.

ಲೋಕದಲ್ಲಿ ಯಾವುದು ಕರ್ಮದಿಂದ ಜ್ಞಾನದಿಂದ ಪಡೆಯಲು ಸಾಧ್ಯವಲ್ಲವೋ ಅದು ಭಕ್ತಿಯಿಂದ ಮಾತ್ರ ಸಾಧ್ಯವೆಂದು "ನಾಯ ಮಾತ್ಮಾ ಪ್ರವಚನೇನ ಲಭ್ಯಃ ನ ಮೇಧಯಾನ ಬಹುನಾಶ್ರುತೇನ" ಎಂಬಂಥ ಅನೇಕ ಶೃತಿಗಳು ಸಾರಿದರೆ ಅವನ್ನು ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು—

ನಾಹಂವೇದೈರ್ನತಪಸಾ ನದಾನೇನ ನಚೇ ಜ್ಯಯಾ
ಶಕ್ಯ ಏವಂ ವಿಧೋ ದ್ರಷ್ಟುಂ ದೃಷ್ಟವಾನಸಿಮಾಂ ಯಥಾ ||
ಭಕ್ತ್ಯಾ ತ್ವನನ್ಯಯಾ ಶಕ್ಯಃ ಅಹಮೇವಂ ವಿಧೋಽರ್ಜುನ
ಜ್ಞಾತುಂ ದ್ರಷ್ಟುಂಚ ತ ತ್ವೇನ ಪ್ರವೇಷ್ಟುಂಚ ಪರಂತಪ ||
ಮತ್ಕರ್ಮಕೃನ್ಮತ್ಪರಮಃ ಮದ್ಭಕ್ತಸ್ಸಂಗ ವರ್ಜಿತಃ
ನಿರ್ವೈರಃ ಸರ್ವಭೂತೇಷು ಯಃ ಸಮಾಮೇತಿ ಪಾಂಡವ ||

ಎಂಬ ವಾಕ್ಯಗಳಿಂದ ವ್ಯಾಖ್ಯಾನ ಮಾಡಿದಂತೆ ತಿಳಿಸಿರುತ್ತಾನೆ. ಇಷ್ಟೊಂದು ಅರ್ಥವನ್ನೂ ಹುದುಗಿಸಿ ಕನ್ನಡ ದೇವರ ನಾಮದಲ್ಲಿ ಹರಿದಾಸರು—

ಸ್ಮರಿಸು ಸಂತತ ಹರಿಯ । ಕರುಣಾಳುಗಳ ಧೊರೆಯ
ಸರಸಿಯೊಳಗಂದು ಕರಿಯ । ನರನ ಸಂಗರದೊಳಗೆ ಕಾಯ್ದನರಿಯಾ
ಜಪಹೋಮ ತಪದಾನಗಳಿಗೆ ದೊರೆಯ । ಜಗದೀಶ । ಶರಣು
ಹೊಕ್ಕವರ
ಮರೆಯ, ಧೊರೆಯ ॥ ಸ್ಮರಿಸು ಸಂತತ ಹರಿಯನು ॥ ಅ ॥
ಎಂಬದಾಗಿ ಹಾಡಿರುತ್ತಾರೆ.

ಈ ದೇವರನಾಮವು ಬಹು ಸುಂದರವಿರುವುದರಿಂದ ಭಾಷಾ ದೃಷ್ಟಿಯಿಂದಲೂ ಬಲು ತಿಳಿಯಾಗಿರುವುದರಿಂದ ಪೂರ್ತಿ ಕೊಟ್ಟರೆ ತಪ್ಪಾಗುವುದಿಲ್ಲ. ಬಾಯಿಪಾಠ ಮಾಡಬೇಕೆಂಬುವವರಿಗೆ ಅಪರಾಧ ಮಾಡಿದಂತಾಗುವುದಿಲ್ಲ. ಇದನ್ನು ಸ್ಮರಣ ಭಕ್ತಿಯ ವಿವರಣೆಯಲ್ಲಿ ಓದಬಹುದು.

## ಶ್ರವಣಭಕ್ತಿ

ಶ್ರವಣ ಮನಕಾನಂದವೀವುದು
ಭವಜನಿತ ದುಃಖಗಳ ಕಳೆವುದು
ವಿವಿಧ ಭೋಗಗಳಿಹಪರಂಗಳಲಿತ್ತು ಸಲಹುವದು
ಭುವನ ಪಾವನ ನೆನಿಪ ಲಕುಮಿ
ಧವನ ಮಂಗಳ ಕಥೆಯ ಪರಮೋ
ತ್ಸವದಿ ಕಿವಿಗೊಟ್ಟಾಲಿಪುದು ಸಂತತದಿ ಭೂಸುರರು ॥ ೧ ॥

## ಕೀರ್ತನ ಭಕ್ತಿ

ಕೀರ್ತನ ಭಕ್ತಿಯನ್ನು ಕುರಿತು ಅದು ಭಕ್ತಿಪಂಥದ ದ್ವಿತೀಯ ಸಾಧನವಾಗಿರುವುದರಿಂದ ಪ್ರತಿಯೊಬ್ಬ ದಾಸರೂ ಪರಿಪರಿಯಿಂದ ಸಮಾಜವನ್ನು ಎಚ್ಚರಿಸಿ ಉಪದೇಶ ಮಾಡಿದ್ದಾರೆ. ಕೇಶವಾದಿ ಚತುರ್ವಿಂಶತಿ ನಾಮಗಳಿಗೆ ಭಾಷ್ಯಮಾಡಿದಂತಿರುವ ಆನಂದದಾಸರ ಒಂದು ನಾಮವನ್ನೂ ಕನಕದಾಸರ ಒಂದು ನಾಮವನ್ನೂ ಆರಿಸಿಕೊಡಲಾಗಿದೆ.

ರಾಗ ಆದಿತಾಳ

ಮಾಡಬಾರದೇ । ಭಜನೆಯ । ಮಾಡಬಾರದೇ ॥ ಪ ॥
ಮೂಢರೊಡನೆ ಕೂಡಾಡಿದವರಿಗತಿ । ಕೇಡಾಗಿರುವುದ ನೋಡೀ
ಭಜನೆಯ ॥ ಅ ॥
ಆರ್ತರಕ್ಷಕನ ಕೀರ್ತನವೊಂದು ಮು । ಹೂರ್ತಗೈಯೆ ಸುಖಪೂರ್ತಿಸುವ
ಭಜನೆ ॥ ೧ ॥
ಸಂತೋಷದಲಿ ಮಹಾಂತರ ತತಿಯೊಳು । ನಿಂತು ಕುಣಿವುತಾನಂತನ
ಭಜನೆಯ ॥ ೨ ॥
ಮುಂದಿ ಕೇಳಲಾನಂದ ಬಡುವರದ । ರಿಂದ ಸೌಖ್ಯವನು ಹೊಂದುವಿ
ಭಜನೆಯ ॥ ೩ ॥
ಮಾಸರೋಜಭವ ಈಶಾದ್ಯರಿಗೆ ಮ । ಹಾ ಸೌಖ್ಯದ ಶ್ರೀ ಕೇಶವನ
ಭಜನೆ ॥ ೪ ॥
ತೋಯನಿಧಿಯೊಳಗಾಯತ ವಟಪುಟ । ಶಾಯಿಯಾದ ನಾರಾಯಣನ
ಭಜನೆ ॥ ೫ ॥
ವೇದವಾದಿಗಳಿಗಾದಿ ದೇವಿಗೆ ಪ್ರ । ಸೀದನಾದ ಶ್ರೀ ಮಾಧವನ ಭಜನೆ ॥೬॥
ಛಂದೋಗಮ್ಯನ ಸುಂದರ ಗುಣವಾ । ನಂದದಿಂದ ಗೋವಿಂದನ ಭಜನೆ॥೭॥
ವೃಷ್ಣಿ ಕುಲಕೆ ವರ್ಧಿಷ್ಣುವಾದ ಪರ । ಮೇಷ್ಟಿಯ ಪಿತ ಶ್ರೀ ವಿಷ್ಣುವಿನ
ಭಜನೆ ॥ ೮ ॥
ಆದಿಯುಗದ ಲುದಯಾದಮುರಾರಿಯ । ನ್ಯೆದೆಗೆಸಿದ ಮಧುಸೂದನನ
ಭಜನೆ ॥ ೯ ॥
ಶಕ್ರನಲೋಕವನಾಕ್ರಮಿಸಿದ ಬಲಿ । ವಿಕ್ರಮ ತುಳಿದ ತ್ರಿವಿಕ್ರಮನ
ಭಜನೆ ॥ ೧೦ ॥
ಭೂಮಿಾಶ್ವರಬಲಿ ಆ ಮಹರಾಯನ । ಧಾಮವ ಕಾಯಿದ ವಾಮನನ
ಭಜನೆ ॥ ೧೧ ॥
ಶ್ರೀದೇವಿಗೆ ಸಮರಾದವರಿಲ್ಲೆಂ । ದಾದರದಲಿ ಶ್ರೀ ಶ್ರೀಧರನ ಭಜನೆ ॥೧೨॥
ಈ ಶರೀರದೋಳ್ ಶ್ವಾಸೇಂದ್ರಿಯಗಳ । ಪೋಷಿಸುವ ಹೃಷೀಕೇಶನ
ಭಜನೆಯ ॥ ೧೩ ॥

ಶ್ರೀ ಭಾಗವತರ ಸೌಭಾಗ್ಯಗಳಿಗೆ । ಶೋಭನದ ಪದ್ಮನಾಭನ ಭಜನೆಯ
|| ೧೪ ||

ಮೋದದಿಂದಲಿ ಯಶೋಧೆಯ ಕರವಶ । ನಾದ ಮಹಿಮ ದಾಮೋದರನ
ಭಜನೆ || ೧೫ ||

ಸುರನರಾದಿ ಜೀವರ ಇಂದ್ರಿಯಗಳ । ಹರಣನಾದ ಸಂಕರುಷಣನ ಭಜನೆ
|| ೧೬ ||

ಜೀವರಾಶಿಗಳನಾವರಿಸಿ ಒಳಗೆ । ಕಾವಕರುಣಿ ವಾಸುದೇವನ ಭಜನೆಯ||೧೭||

ಮನುಮಥನನ ಮೋಹನಗೈವ ಸ್ಮಿತಾ । ನನಯುತ ಪ್ರದ್ಯುಮ್ನನ ಸಂಕೀರ್ತನೆ
|| ೧೮ ||

ಸಿದ್ಧಸಾಧ್ಯರಿಗಸಾಧ್ಯ ಸರ್‍ವರ ನಿರುದ್ಧಗೈವ ಅನಿರುದ್ಧನ ಭಜನೆಯ || ೧೯ ||

ಸತ್ಯಲೋಕದಧಿಪತ್ಯ ಪಡೆದವಗು । ಸ್ತುತ್ಯನಾದ ಪುರುಷೋತ್ತಮನ
ಭಜನೆ || ೨೦ ||

ತಕ್ಷಕಸೇನ ಕ್ಷರಾಕ್ಷರ ಪುರುಷರಿ । ಗಕ್ಷಯ ಫಲದ ಅಧೋಕ್ಷಜನ ಭಜನೆ
|| ೨೧ ||

ಜಿಂಹ್ವೆಯ ಚಾಚುತ ವಿಂಹ್ವಲ ದೈತ್ಯನ । ಸಂಹರಿಸಿದ ನರಸಿಂಹನ
ಭಜನೆಯ || ೨೨ ||

ಅಚ್ಚಭಕುತಿಲಿ ಸದುಚ್ಚರಣೆಯ ಲಿಂ । ದಚ್ಯುತಿರಹಿತ ನಾದಚ್ಯುತನ
ಭಜನೆ || ೨೩ ||

ದುರ್ಧರ್ಷಾಸುರ ಮರ್ದನ ಭಕ್ತವಿ । ವರ್ಧನನಾದ ಜನಾರ್ದನನ ಭಜನೆ
|| ೨೪ ||

ಚಂದ್ರಸನ್ನಿಭ ಗಜೇಂದ್ರವಾಹ । ದೇ । ವೇಂದ್ರಾ ವರಜ ಉಪೇಂದ್ರನ
ಭಜನೆಯ || ೨೫ ||

ಹರಿದಾಸರ ಅಘಹರಣ ಶೀಲನಾ । ದುರ್‍ಗಾಯನ ಶ್ರೀ ಹರಿ ಸಂಕೀರ್ತನೆ
|| ೨೬ ||

ವೈಷ್ಣವ ಜನರಿಗೆ ಉಷ್ಣವಾದ ಭವ । ತೃಷ್ಣೆ ಕಳೆವ ಶ್ರೀ ಕೃಷ್ಣನ
ಭಜನೆ || ೨೭ ||

ಕೇಶವಾದಿ ಕಮಲೇಶ ವಿಠಲನ । ಈ ಶುಭ ನಾಮದ ತೋಷದಿ
ಭಜನೆಯ || ೨೮ ||

——o——

ರಾಗ    ತಾಳ ರೂಪಕ

ಈಶ ನಿನ್ನ ಚರಣ ಭಜನೆ ಆಶೆಯಿಂದ ಮಾಡುವೆನು
ದೋಷರಾಶಿ ನಾಶಮಾಡು ಶ್ರೀಶ ಕೇಶವ ||ಪ||
ಶರಣು ಹೊಕ್ಕೆನಯ್ಯ ಎನ್ನ ಮರಣ ಸಮಯದಲ್ಲಿ ನಿನ್ನ
ಚರಣ ಸ್ಮರಣೆ ಕರುಣಿಸಯ್ಯ ನಾರಾಯಣ ||೧||
ಶೋಧಿಸೆನ್ನ ಭವದ ಕಲುಷ ಬೋಧಿಸಯ್ಯ ಜ್ಞಾನವೆನಗೆ
ಬಾಧಿಸುವ ಯಮನ ಬಾಧೆ ಬಿಡಿಸು ಮಾಧವ ||೨||
ಹಿಂದನೇಕ ಯೋನಿಗಳಲಿ ಬಂದು ಬಂದು ನೊಂದೆನಾನು
ಇಂದು ಭವದ ಬಂಧ ಬಿಡಿಸು ಗೋವಿಂದನೇ ||೩||
ಭ್ರಷ್ಟನೆನಿಸ ಬೇಡ ಕೃಷ್ಣ ಇಷ್ಟು ಮಾತ್ರ ಬೇಡಿಕೊಂಬೆ
ಶಿಷ್ಟರೊಡನೆ ಇಟ್ಟು ಕಷ್ಟ ಬಿಡಿಸು ವಿಷ್ಣುವೆ ||೪||
ಮೊದಲು ನಿನ್ನ ಪಾದ ಪೂಜೆ ಮುದದಿ ಮಾಡುವೆನು ನಾನು
ಹೃದಯದೊಳಗೆ ಹುದುಗಿರಯ್ಯ ಮಧುಸೂದನ ||೫||
ಕವಿದುಕೊಂಡು ಇರುವ ಪಾಪ ಸವೆದು ಪೋಗುವಂತೆ ಮಾಡಿ
ಜವನ ಬಾಧೆಯನ್ನ ಬಿಡಿಸೋ ತ್ರಿವಿಕ್ರಮ ||೬||
ಕಾಮಜನಕ ನಿನ್ನ ನಾನು ಪ್ರೇಮದಿಂದ ಪಾಡುವಂಥ
ನೇಮವೆನಗೆ ಪಾಲಿಸಯ್ಯ ಸ್ವಾಮಿ ವಾಮನ ||೭||
ಮದನನಯ್ಯ ನಿನ್ನ ಮಹಿಮೆ ವದನದಲ್ಲಿ ಇರುವಂತೆ
ಹೃದಯದಲ್ಲಿ ಸದನ ಮಾಡು ಮುದದಿ ಶ್ರೀಧರ ||೮||
ಹುಸಿಯನಾಡಿ ಹೊಟ್ಟೆಹೊರೆವ ವಿಷಯದಲ್ಲಿ ರಸಿಕನೆಂದು
ಹುಸಿಗೆ ಹಾಕದಿರಯ್ಯ ಹೃಷೀಕೇಶನೆ ||೯||
ಬಿದ್ದು ಭವದನೇಕ ಜನುಮ ಬದ್ಧನಾಗಿ ಕಲುಷದಿಂದ
ಗೆದ್ದುಪೋಪ ಬುದ್ಧಿ ತೋರು ಪದ್ಮನಾಭನೆ ||೧೦||
ಕಾಮಕ್ರೋಧ ಬಿಡಿಸಿ ನಿನ್ನ ನಾಮ ಜಿಹ್ವೆಯೊಳಗೆ ನುಡಿಸು
ಶ್ರೀ ಮಹಾನುಭಾವನಾದ ದಾಮೋದರ ||೧೧||
ಪಂಕಜಾಕ್ಷ ನೀನು ಎನ್ನ ಮಂಕು ಬುದ್ಧಿ ಬಿಡಿಸಿ ನಿನ್ನ
ಕಿಂಕರನ್ನ ಮಾಡಿಕೊಳ್ಳೋ ಸಂಕರುಷಣ ||೧೨||

ಏಸು ಜನ್ಮ ಬಂದರೇನು ದಾಸನಲ್ಲವೇನೋ ನಾನು
ಘಾಸಿ ಮಾಡದಿರು ಎನ್ನ ವಾಸುದೇವನೆ ॥ ೧೩ ॥
ಬುದ್ಧಿಶೂನ್ಯನಾಗಿ ಎನ್ನ–ಸದ್ಧಕಾರ್ಯ ಕುಹಕವನವ
ತಿದ್ದಿ ಹೃದಯ ಶುದ್ಧಿ ಮಾಡೊ ಪ್ರದ್ಯುಮ್ನನೇ ॥ ೧೪ ॥
ಜನನಿಜನಕ ನೀನೆ ಎಂದು ಎನುವೆನಯ್ಯ ದೀನಬಂಧು
ಎನಗೆ ಮುಕ್ತಿ ಪಾಲಿಸೆಂದು ಅನಿರುದ್ಧನೆ ॥ ೧೫ ॥
ಹರುಷದಿಂದ ನಿನ್ನ ನಾಮ ಸ್ಮರಿಸುವಂತೆ ಮಾಡು ನಿತ್ಯ
ವಿರಿಸು ಚರಣದಲ್ಲಿ ಪ್ರೇಮ ಪುರುಷೋತ್ತಮ ॥ ೧೬ ॥
ಸಾಧುಸಂಗ ಕೊಟ್ಟು ನಿನ್ನ ಪಾದ ಭಜನೆಯಿತ್ತು ಎನ್ನ
ಭೇದಮಾಡಿ ನೋಡದಿರು ಅಧೋಕ್ಷಜ ॥ ೧೭ ॥
ಚಾರುಚರಣ ತೋರಿ ಎನಗೆ ಪಾರಗಾಣಿಸಯ್ಯ ಕೊನೆಗೆ
ಭಾರ ಹಾಕಿರುವೆ ನಿನಗೆ ನಾರಸಿಂಹನೆ ॥ ೧೮ ॥
ಸಂಚಿತಾರ್ಥ ಪಾಪಗಳು ಕಿಂಚಿತ್ತಾದ ಪೀಡೆಗಳು
ಮುಂಚಿತಾಗಿ ಕಳೆದು ಪೊರೆಯೊ ಸ್ವಾಮಿ ಅಚ್ಯುತ ॥ ೧೯ ॥
ಜ್ಞಾನಭಕ್ತಿ ಕೊಟ್ಟು ನಿನ್ನ ಧ್ಯಾನದಲ್ಲಿ ಇಟ್ಟು ಸದಾ
ಹೀನ ಬುದ್ಧಿ ಬಿಡಿಸು ಮುನ್ನ ಜನಾರ್ದನ ॥ ೨೦ ॥
ಜಪತಪಾನುಷ್ಠಾನವಿಲ್ಲದೆ ಕುಪಥ ಗಾಮಿಯಾದ ಎನ್ನ
ಕೃಪೆಯಮಾಡಿ ಕ್ಷಮಿಸಬೇಕು ಉಪೇಂದ್ರನೆ ॥ ೨೧ ॥
ಮೊರೆಯ ಇಡುವೆನಯ್ಯ ನಿನಗೆ ಶರಧಿ ಶಯನ ಶುಭ ಮತಿಯ
ಇರಿಸೊ ಭಕ್ತನೆಂದು ಪರಮಪುರುಷ ಶ್ರೀ ಹರೀ ॥ ೨೨ ॥
ಪುಟ್ಟಿಸಾಲು ಬೇಡ ಮುಂದೆ ಪುಟ್ಟಿಸಿದಕೆ ಪಾಲಿಸಿನ್ನು
ಇಷ್ಟೆ ಬೇಡಿಕೊಂಬೆ ನಾನು ಶ್ರೀ ಕೃಷ್ಣನೆ ॥ ೨೩ ॥
ಸತ್ಯವಾದ ನಾಮಗಳನು ನಿತ್ಯದಲ್ಲಿ ಪಠಿಸುವರನು
ಅರ್ಥಿಯಿಂದ ಸಲಹುವ ಕರ್ತೃ ಕೇಶವ ॥ ೨೪ ॥
ಮರೆಯದಾಲೆ ಹರಿಯನಾಮ ಬರೆದು ಓದಿ ಕೇಳಿದರ್ಗೆ
ಕರೆದು ಮುಕ್ತಿ ಕೊಡುವ ನೆಲೇಯಾದಿಕೇಶವ ॥ ೨೫ ॥

——o——

ಹಿಂದೆ ತಿಳಿಸಿದ್ದಂತೆ ಸ್ಮರಣ ಭಕ್ತಿಯ ಉದಾಹರಣೆಗಾಗಿ " ಸ್ಮರಿಸು ಸಂತತ ಹರಿಯನು " ಎಂಬ ದೇವರನಾಮವನ್ನು ಇಲ್ಲಿ ಪೂರ್ತಿಯಾಗಿ ಓದಬಹುದು.

## ಸ್ಮರಣಭಕ್ತಿ

ಸ್ಮರಿಸು ಸಂತತ ಹರಿಯನು ॥ ಪ ॥

ಸ್ಮರಿಸು ಸಂತತ ಹರಿಯ ಕರುಣಾಳುಗಳ ಧೊರೆಯ । ಸರಸಿಯೊಳಗಂದು ಕರಿಯ ।
ನರನ ಸಂಗರದೊಳಗೆ ಕಾಯ್ದನರಿಯ । ಜಪಹೋಮ । ತಪದಾನಗಳಿಗೆ ದೊರೆಯ ।
ಜಗದೀಶ । ಶರಣು ಹೊಕ್ಕವರ ಮರೆಯ । ಧೊರೆಯ ॥ ಅ ॥
ತಾನೆ ಇಹಪರ ಸೌಖ್ಯ । ದಾನಿಗಳರಸನೆಂದು । ಸಾನುರಾಗದಿ ನಂಬಿದ । ಜನಕೆ ಸುರ ।
ಧೇನು ವಂದದಲಿ ಮೋದ । ಸಲಿಸುವ ಮು । ಹಾನಂದ ಪೂರ್ಣಬೋಧ । ಪತಿಸಾಮ ।
ಗಾನಲೋಲನ ಪ್ರಸಾದ । ಪಾದ ॥ ೧ ॥
ಅಣುವಿನೊಳಗಣುವಹನು । ಘನಕೆ ಘನತಮನಹನು । ಅಣುಮಹದ್ದ್ವಯ ಲಕ್ಷಣ ।
ಕಲ್ಯಾಣ ಗುಣಜ್ಞಾನ ಘನಲಕ್ಷಣ । ಸಂಪೂರ್ಣ ಮನಮುಟ್ಟಿ ಕರೆಯೇ ಕ್ಷಣ । ಬಂದೊದಗಿ
ಕುಣಿವ ಲಕ್ಷ್ಮೀ ವಕ್ಷನ । ಅನಪೇಕ್ಷನ ॥ ೨ ॥
ನೋಡಿ ನೋಡಿಸುತಿಹನು । ಬೇಡಿ ಬೇಡಿಸುತಿಹನು । ನೀಡಿ ನೀಡಿಸುವ ಪಿಡಿವ । ಪಿಡಿಸುವನು ।
ಮಾಡಿ ಮಾಡಿಸುವ ಬಡವ । ರೊಡೆಯ ಕೊಂ . ಡಾಡುವರ ಒಡನಾಡುವ ಈ ಮಹಿಮೆ ।
ಗೀಡೆಂದು ಆವ ನುಡಿವ । ಕೆಡುವ ॥ ೩ ॥

ಚೆಲುವರೊಳಗತಿ ಚೆಲುವ । ಸುಲಭರೊಳಗತಿ ಸುಲಭ । ಒಲಿವ ಮನ ಬಂದ
ತೆರದಿ ।
ಗುಣಕರ್ಮ । ಕುಲಶೀಲವೆಣಿಸಮನದಿ । ಭಕುತಿಯಲಿ । ಫಲವ ಕೊಡೆ ತಾ
ತವಕದಿ । ಶಬರಿಯಂ
ಜಲನುಂಡ ಕರುಣ ಶರಧೀ । ಭರದಿ ॥ ೪ ॥
ಎಲ್ಲೆಲ್ಲಿ ನೋಡೆ ಮ । ತ್ತಲ್ಲಲ್ಲಿ ನೆಲಸಿಹನು । ಬಲ್ಲಿದನು ಭಾಗ್ಯವಂತ ।
ನಂಬಿದರಿ ।
ಗಲ್ಲದೇ ಒಲಿಯ ಭ್ರಾಂತ । ದುಷ್ಟಜನ । ರೊಲ್ಲ ನಿಶ್ಚಯ ಮಹಾಂತ ।
ರೊಡೆಯ ಕೈ ।
ವಲ್ಯದಾಯಕನು ಇಂಥಾ । ಪಂಥಾ ॥ ೫ ॥
ಪ್ರಾದೇಶ ಮಾತ್ರಸ್ಥಿತ । ಭೂದೇವಿಯರಸ ಕಾ । ಕೋದರಾ ದ್ಯಮರವ್ರಾತ ।
ಮಹದಾದಿ ।
ದೇವ ಅತ್ಯಂತ ಭೂತ । ದೊಳು ನೆಲೆಸಿ । ಕಾದುಕೊಂಡಿಹ ವಿಧಾತ ।
ಅಂಡತ್ರಿದ ।
ಶಃಧಿಪನ ಸುತನ ಸೂತ । ಚರಿತ ॥ ೬ ॥
ಸ್ವಗತ ಭೇದವಿಶೂನ್ಯ । ನಿಗಮ ಸಂಚಾರ ಶ್ರೀ । ಜಗನ್ನಾಥ ವಿಠಲರೇಯ ।
ತನ್ನ ಪದ
ಯುಗಳ ನಂಬಿದರೆ ನೋಯ । ಗೊಡದಂತೆ । ಹಗಲಿರಳು ಕಾಯ್ವ ಮಾಯಾ ।
ಧವನು ನ ।
ಮ್ಮಗಲಿ ಸ್ಥೈರಿಸನು ಜೀಯಾ ಧ್ಯೇಯ ॥ ೭ ॥

—o—

ಧನಾಸರಿ ಆದಿತಾಳ

ಕಲಿಯುಗದೊಳು ಹರಿ । ನಾಮ ಸ್ಮರಿಸಿದರೆ
ಕುಲಕೋಟಿಗಳುದ್ಧರಿಸುವವು ॥ ಪ ॥
ಸುಲಭದ ಮುಕ್ತಿಗೆ ಸುಲಭನೆಂದೆನಿಸುವ
ಜಲರುಹ ನಾಭನ । ನೆನೆಮನವೇ ॥ ಅ ॥

ಸ್ನಾನವನರಿಯೆನು ಮೌನವನರಿಯೆನು
ಧ್ಯಾನವನರಿಯೆ ನೆಂದೆನಬೇಡ ।
ಜಾನಕಿ ವಲ್ಲಭ ದಶರಥ ನಂದನ
ಗಾನವಿನೋದನ ನೆನೆಮನವೆ ॥ ೧ ॥

ಅರ್ಚಿಸಲರಿಯೆನು । ಮೆಚ್ಚಿಸಲರಿಯೆನು
ತುಚ್ಛನು ನಾನೆಂದೆನಬೇಡ ॥
ಅಚ್ಯುತಾನಂತ ಗೋವಿಂದ ಮುಕುಂದನ
ಇಚ್ಛೆಯಿಂದ ನೀ ನೆನೆಮನವೆ ॥ ೨ ॥

ಜಪವೊಂದರಿಯೆನು ತಪವೊಂದರಿಯೆನು
ಉಪದೇಶವಿಲ್ಲೆಂದೆನಬೇಡ ॥
ಅಪಾರ ಮಹಿಮ ಶ್ರೀ ಪುರಂದರ ವಿಠಲನ
ಉಪಾಯದಿಂದಲಿ ನೆನೆಮನವೇ ॥ ೩ ॥

---

ಸ್ಮರಣೆ ಯೆಂಬುವುದು ಧ್ಯಾನ. ಧ್ಯೇಯ ವಸ್ತುವನ್ನು ಸ್ಮರಿಸುವದಕ್ಕೆ ಧ್ಯಾನವೆಂದು ಹೆಸರು. ಸ್ಮರಣೆಗೆ ವಿಷಯವಾಗಬೇಕಾದರೆ ಧ್ಯೇಯ ವಸ್ತುವಿಗೆ ನಾಮವಿರಬೇಕು. ನಾಮದ ಜೊತೆಯಲ್ಲಿ ರೂಪವಿರಬೇಕು. ತಕ್ಕಂತೆ ಗುಣ ಕ್ರಿಯೆಗಳಿರಬೇಕು. ನಾಮ ರೂಪ ಗುಣ ಕ್ರಿಯೆಗಳಿಲ್ಲದ ವಸ್ತುವಿದೆ ಯೆಂದಾಗಲಿ, ಅದು ಧ್ಯಾನಕ್ಕೆ ವಿಷಯವಾಗುವುದೆಂದಾಗಲಿ, ಹೇಳಿದರೆ ಅದು ಅನುಭವಕ್ಕೆ ಮಾತ್ರ ಬರುವುದಿಲ್ಲ. ಆದುದರಿಂದ ಯಾವ ಮತದ ಉಪಾಸಕ ರಾಗಲಿ, ಉಪಾಸನೆಗೆ ವಿಷಯವಾಗಿರುವವೆಂದು ವೇದ ಕಾಲದಿಂದ ಬಂದಿರುವ ಪಂಚಾಕ್ಷರಿ, ಅಷ್ಟಾಕ್ಷರಿ, ದ್ವಾದಶಾಕ್ಷರಿ ಮೊದಲಾದ ಮಂತ್ರಗಳನ್ನು ಉಪಾಸಿಸಿ ಇಷ್ಟಾರ್ಥಗಳನ್ನು ಪಡೆಯುತ್ತಿರುವರು. ಧ್ಯಾನವೆಂದ ಕೂಡಲೇ ಅದಕ್ಕೆ ತಕ್ಕ ನಿಯಮಗಳಿವೆ. ನಿಯಮಗಳು ಸಂಪ್ರದಾಯವನ್ನನುಸರಿಸಿರುವುದರಿಂದ ಯಾರಾದರೂ ಅದಕ್ಕೆ ಗೌರವ ಕೊಡಲೇ ಬೇಕು. ಕೆಳ ಕಂಡ ಹಾಡಿನಲ್ಲಿ ಎಷ್ಟು ಶಾಸ್ತ್ರಾರ್ಥಗಳು ಅಡಕವಾಗಿವೆ ಯೆಂಬುದನ್ನು ನೋಡಬೇಕು.

ಶಂಕರಾಭರಣ ತ್ರಿಪುಟತಾಳ

ಧ್ಯಾನವನೆ ಮಾಡೊ । ಬಿಂಬ ಮೂರುತಿಯ ॥ ಪ ॥
ಆನಂದದಲಿ ಕುಳಿತು । ಅಂತರಂಗದೊಳಗೆ ॥ ಅ ॥

ಸದಾಚಾರನಾಗಿ ದ್ವಾದಶ ಗುರುಗಳಿಗೆರಗಿ
ಮುದದಿಂದ ಮೂಲ ಮಂತ್ರವನೆ ಜಪಿಸಿ ॥
ಹೃದಯ ನಿರ್ಮಲವಾಗಿ ದೇಹ ಸ್ಥಿತಿಯ ತಿಳಿದು
ಪದುಮಾಸನವ ಹಾಕಿ ಪರಮ ವಿಶ್ವಾಸದಲಿ ॥ ೧ ॥
ಅಂಗಚಲಿಸದೆ ಚೆನ್ನಾಗಿ ದೃಢದಿಂದ
ಕಂಗಳ ಮುಚ್ಚಿ ಇಂದ್ರಿಯಂಗಳ ತಿಳಿದು
ಮಂಗಳ ಶೋಭಿತಾಖಂಡ ಧ್ಯಾನವಂತ
ರಂಗದೊಳಗೆ ಕುಳಿತು ಎಲ್ಲವನೂ ಕಾಣೋ ॥ ೨ ॥
ಭಗವದ್ರೂಪಗಳೆಲ್ಲ । ಒಂದೇ ಸಾರಿ ಸ್ಮರಿಸಿ
ನುಗುಳೆ ಆ ಪರಮ ಗುರುವಿನ ಮೂರುತಿ
ತೆಗೆದು ವಂದನೆ ಮಾಡಿ ಅಲ್ಲಿಂದ ಹರುಷದಲಿ
ಸ್ವಗುರು ಬಿಂಬ ಮೂರ್ತಿಯಲಿ ಐಕ್ಯ ಚಿಂತನೆ ಮಾಡಿ ॥ ೩ ॥
ತಿರುಗಿ ಮೆಟ್ಟಿ ಮೂರು ವೇಗದಿಂದಲಿ ನಿನ್ನ
ವರಮೂರ್ತಿಯಲಿ ಚಿಂತನೆಯ ಮಾಡು
ಭರದಿಂದ ಎಲ್ಲವ ತಂದು ಹೃದಯದಲ್ಲಿ
ಸ್ಥಿರವಾಗಿ ಇಪ್ಪ ಮೂರುತಿಯನ್ನು ಕೂಡಿಸಿ ॥ ೪ ॥
ಆತನೆ ಬಿಂಬ ಮೂರ್ತಿ ಎಂದು ತಿಳಿದುಕೋ
ಆ ತರುವಾಯ ನಾಡಿಗಳ ಗ್ರಹಿಸಿ
ಆ ತೈಜಸನ ಕಂಡು ವಿಶ್ವಮೂರುತಿಯಲ್ಲಿ
ಪ್ರೀತಿಯುಳ್ಳವನಾಗಿ ಪ್ರತೀಕರಿಸು ಮರುಳೆ ॥ ೫ ॥
ಜ್ಞಾನ ಪ್ರಕಾಶದಲಿ ಇದ್ದ ನಿನ್ನ ಹೃದಯ
ಸ್ಥಾನದಲ್ಲಿ ಅಷ್ಟದಳ ಕಮಲ ಮಧ್ಯ
ಶ್ರೀನಿವಾಸನ ಮೂರ್ತಿ ನಿಲಿಸಿ ಬಾಹಿರದಲ್ಲಿ
ಏನೇನು ಪೂಜೆಯೋ ನಿಲ್ಲದಲೆ ಮಾಡಿ ॥ ೬ ॥

ಗುಣ ನಾಲ್ಕರಿಂದಲ್ಲಿ ಉಪಾಸನೆಯ ಮಾಡಿ
ಕ್ಷಣ ಕ್ಷಣಕೆ ಶ್ರೀ ಹರಿಯ ಪಾದವ ನೋಡುತ
ಅಣೋರಣಿ ಚೇತನ ಚೇತನಕ್ಕೆ ನಿಯಾಮಕ
ಫಣಿಶಯನನಲ್ಲದೆ ಮತ್ತೊಬ್ಬರಿಲ್ಲವೆಂದು || ೭ ||

ಮಮತೆಯನ್ನೇ ತೊರೆದು ಮೇಲೊಂದಪೇಕ್ಷಿಸದೆ
ಸಮ ವಿಷಮ ತಿಳಿದೊಂದೇ ಭಕುತಿಯಿಂದ
ಸಮಾಧಿಗೊಳಗಾಗಿ ದೃಷ್ಟಿ ಸರ್ವತ್ರಾನು
ಕ್ರಮದಿಂದಾನಂದ ಭರಿತ ಭಾವುಕನಾಗಿ || ೮ ||

ಈಪರಿ ಧ್ಯಾನಿಸಲು ದೇವ ಕರುಣವ ಮಾಳ್ಪ
ಪಾಪ ಸಂಚಿತವು ಪ್ರಾರಬ್ಧ ನಾಶ
ಅಪರೋಕ್ಷಿತನಾಗೋ ನಿನ್ನ ಯೋಗ್ಯತೆ ಯೆಷ್ಟೋ
ಗೋಪಾಲ ವಿಜಯ ವಿಠಲನಲ್ಲಿ ವಾಲೈಸಿ || ೯ ||

ಈ ದೇವರ ನಾಮವು ಬಹಳ ಅರ್ಥವತ್ತಾದದ್ದು. ೧೭ ತಾಳಗಳುಳ್ಳ ವಿಸ್ತಾರವಾದ ಕಂಕಣಾಕಾರ ಸುಳಾದಿಯಲ್ಲಿ ಇದರ ವ್ಯಾಖ್ಯಾನವನ್ನು ವಿಜಯ ದಾಸರು ಮಾಡಿರುತ್ತಾರೆ. ಮತ್ತೆ ಅದೇ ಸುಳಾದಿಗೆ ಒಂಭತ್ತು ಸುಳಾದಿಗಳು ಟಿಪ್ಪಣಿಗಳಂತೆ ರಚಿತವಾಗಿವೆ. ಈ ಹತ್ತು ಸುಳಾದಿಗಳಲ್ಲಿ ಮಂತ್ರಶಾಸ್ತ್ರ ತಂತ್ರಶಾಸ್ತ್ರ ಯೋಗಶಾಸ್ತ್ರ ಇವೆಲ್ಲದರ ಸಾರಾಂಶವು ವರ್ಣಿತವಾಗಿದೆ. ಈ ಕ್ರಮದಿಂದ ಧ್ಯಾನ ಮಾಡಿದರೆ ಸಾಕ್ಷಾತ್ಕಾರವಾಗುವದೆಂದು ಭರವಸೆ ಕೊಟ್ಟು ಮಹಾನುಭಾವರಾದ ವಿಜಯದಾಸರು

" ಸಿದ್ಧ ಸಾಧನವಿದು ಬಿಂಬ ಕಾಂಬುವದಕ್ಕೆ ।
ಪದ್ಮಿವಲ್ಲಭ ವಿಜಯ ವಿಠಲನ ದಯದಿಂದ "

ಎಂಬದಾಗಿ ಕಂಕಣಾಕಾರ ಸುಳಾದಿಯ ಜತೆಯಲ್ಲಿ ಹೇಳಿರುತ್ತಾರೆ.

## ಪಾದಸೇವನ ಭಕ್ತಿ

ಕಾಂಬೋದಿ ಜಂಪೆತಾಳ

ಭಜಿಸಿ ಬದುಕೆಲೊ ಮಾನವ । ಅಜಸುರೇಂದ್ರಾದಿಗಳು ವಂದಿಸುವ
ಪಾದವನು || ಪ ||

ಪಾಕಶಾಸನ ಗೊಲಿದು ಬಲಿಯ ಮೆಟ್ಟಿದ ಪಾದ । ಶಾಕು ಶಕಟನ ಒದ್ದು
ಕೊಂದ ಪಾದ
ನಾಕಭೀಕರ ಬಕನ ಮೆಟ್ಟಿ ಸೀಳಿದ ಪಾದ । ಲೋಕ ಪಾವನೆ ಗಂಗೆ
ಜನಿಸಿರುವ ಪಾದವನು ॥ ೧ ॥
ಶಿಲೆಯಾದ ಅಹಲ್ಯೆಯ ಶುದ್ಧಿಮಾಡಿದ ಪಾದ । ಒಲಿದು ಪಾರ್ಥನ ರಥವ
ಮೆಟ್ಟಿರ್ದ ಪಾದ
ಕಲಿ ದುರಿಯೋಧನನ ನೆಲಕೆ ಕೆಡಹಿದ ಪಾದ । ಬಲಿದ ಕಾಳಿಂಗನ ಪೆಡೆ
ತುಳಿದ ಪಾದವನು ॥ ೨ ॥
ಗರುಡ ಶೇಷಾದಿಗಳು ಪೊತ್ತು ತಿರುಗುವ ಪಾದ । ಧರಣಿ ಯಿಾರಡಿ ಮಾಡಿ
ಅಳೆದ ಪಾದ
ಶಿರಿ ತನ್ನ ತೊಡೆಯ ಮೇಲಿಟ್ಟು ಒತ್ತುವ ಪಾದ । ಧೊರೆ ಕಾಗಿನೆಲೆಯಾದಿ
ಕೇಶವನ ಪಾದವನು ॥ ೩ ॥

## ಅರ್ಚನೆ ಭಕ್ತಿ

ತನ್ನ ಅಂತರ್ಗತ ಪರಮಾತ್ಮನನ್ನು ಧ್ಯಾನ ಮಾಡಿ ಪ್ರತೀಕದಲ್ಲಿ ಆವಾಹಿಸಿ ಮನೆಗೆ ಬಂದ ಮಾನ್ಯ ಅತಿಥಿಯನ್ನು ಸತ್ಕರಿಸುವಂತೆ ಸತ್ಕರಿಸುವುದಕ್ಕೆ ಅರ್ಚನೆಯೆಂದು ಹೆಸರು. ಆಸನ, ಪಾದ್ಯ, ಅರ್ಘ್ಯ, ಆಚಮನ, ಅಭಿಷೇಕ, ವಸ್ತ್ರ, ಉಪವೀತ, ಗಂಧ, ಅಕ್ಷತ, ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲ, ದಕ್ಷಿಣ, ಫಲ ಸಮರ್ಪಣಗಳು; ಅರ್ಚನಾಂಗಗಳಾದ ಷೋಡಶೋಪಚಾರಗಳು. ಪೂರ್ವಾಂಗ ಉತ್ತರಾಂಗ ಸಹಿತವಾದ ಪೂಜೆಯು ತೀರ್ಥ ಗ್ರಹಣದಿಂದ ಪರಿಸಮಾಪ್ತವಾಗುವುದು. ವಿಧಿ ವಿಧಾನಗಳಿಂದ ಅರ್ಚನೆ ಮಾಡಿ ಪರಮಾತ್ಮನ ಪ್ರಸಾದವನ್ನು ಸಂಪಾದಿಸುವ ಕ್ರಮವನ್ನು ಆಗಮ ಶಾಸ್ತ್ರದಂತೆ ಅಲ್ಲಿ ಸಂಸ್ಕೃತದಲ್ಲಿದ್ದರೆ ಇಲ್ಲಿ ಕನ್ನಡ ಹಾಡುಗಳಾಗಿ ಹಾಡಿ ಸಂಸ್ಕೃತ ತಿಳಿಯದವರಿಗೆ ಹರಿದಾಸರು ಮಹೋಪಕಾರ ಮಾಡಿದರು.

ಅಗ್ನೌ ಕ್ರಿಯಾವತಾಂ ವಿಷ್ಣುಃ ಜ್ಞಾನಿನಾಂ ಹೃದಯೇ ಹರಿಃ
ಪ್ರತಿಮಾ ಸ್ವಪ್ರಬುದ್ಧಾನಾಂ ಸರ್ವತ್ರ ವಿದಿತಾತ್ಮನಾಂ ॥

ಮುಂತಾದ ಶಾಸ್ತ್ರ ವಾಕ್ಯದಲ್ಲಿ ಅಪ್ರಬುದ್ಧರು ಪ್ರತಿಮೆಯಲ್ಲಿ ದೇವರನ್ನು ತಿಳಿಯುವರೆಂದು ಹೇಳಿದ್ದರೂ ಆ ಶಾಸ್ತ್ರ ಪಙ್ಕ್ತಿಯನ್ನು ಬರೆದವರು ಸಹ ಮೂರ್ತಿ

ಪೂಜೆಯನ್ನು ಬಿಟ್ಟಿದ್ದು ಕಂಡುಬಂದಿಲ್ಲ. ಶಂಕರ, ರಾಮಾನುಜ, ಮಧ್ವರಂಥ ಮತಸ್ಥಾಪನಾಚಾರ್ಯರುಗಳು ಕಡೆಯ ತನಕ ಮೂರ್ತಿ ಪೂಜೆಯನ್ನು ಬಿಡಲಿಲ್ಲ. ರಾಮ, ಕೃಷ್ಣ ಮೊದಲಾದ ಅವತಾರ ಪುರುಷರು ಮೂರ್ತಿ ಪೂಜೆ ಮಾಡಿದರೆಂದು ಪುರಾಣಗಳು ಸಾರುತ್ತಿವೆ. ಶಿವನು ರಾಮನನ್ನು ಪೂಜಿಸುವನಂತೆ! ರಾಮನು ಶಿವನನ್ನು ಪೂಜಿಸುವನಂತೆ! ಮೂರ್ತಿ ಪೂಜೆಯನ್ನು ಬಿಡುವುದೆಂದರೆ ಬಾಲ್ಯದಲ್ಲಿ ಕಲಿತ ಕಾಗುಣಿತಾಕ್ಷರಗಳಿಂದಲೇ ಶಾಸ್ತ್ರ ಗ್ರಂಥಗಳನ್ನು ಬರೆಯಬೇಕೇ ಎಂದು ಕೇಳಿದಂತಾಗುತ್ತದೆ. ಲೇಖನದ ವಸ್ತು ಬದಲಾಗುವದಲ್ಲದೆ ಅಕ್ಷರ ಬದಲಾಗುವದಿಲ್ಲ. ಯಾವ ಆಚಾರ್ಯರು ಬಾಹ್ಯ ಮೂರ್ತಿ ಪೂಜೆ ಬಿಟ್ಟು ಮಾನಸಿಕ ಪೂಜೆ ಮಾಡಿದರೆಂದು ತೋರಿಸಿದರೂ ಆ ಮಾನಸ ಪೂಜೆಯಲ್ಲಿ ಮಾನಸಿಕ ಮೂರ್ತಿಯನ್ನು ಅವರು ಕಲ್ಪಿಸಿಕೊಳ್ಳದೆ ಪೂಜೆ ಮಾಡಿಲ್ಲ ಶಿಲೆಯಾದರೇನು, ಲೋಹವಾದರೇನು, ಮಾನಸಿಕವಾದರೇನು, ಅಂತು ಅದು ಮೂರ್ತಿ. ವ್ಯಾಸರಾಯರಂಥಾ ಯತೀಶ್ವರರು ಶಕ್ತಿ ಕುಂದಿದಾಗ–

ಕಲ್ಯಾಣಿ ಜಂಪೆತಾಳ

ಎನ್ನ ಬಿಂಬ ಮೂರ್ತಿಯ ಪೂಜಿಸುವೆ ನಾನು । ಮನಮುಟ್ಟಿ ಅನುದಿನವು
ಮರೆಯದೆ ಜನರೇ ॥ ಪ ॥

ಗಾತ್ರವೇ ಮಂದಿರ ಹೃದಯವೇ ಮಂಟಪ । ನೇತ್ರವೇ ಮಹದೀಪ ಹಸ್ತ
ಚಾಮರವು
ಯಾತ್ರೆ ಪ್ರದಕ್ಷಿಣೆ ಶಯನ ನಮಸ್ಕಾರ । ಶಾಸ್ತ್ರ ಮಾತುಗಳೆಲ್ಲ
ಮಂತ್ರಂಗಳು ॥ ೧ ॥

ಎನ್ನ ಸ್ವರೂಪವೆಂಬುಹುದೆ ರನ್ನಗನ್ನಡಿ । ಎನ್ನ ಮನೋವೃತ್ತಿಯೆಂಬುದೇ
ಭಕುತಿ
ಇನ್ನು ನುಡಿಯುವ ಹರಿನಾಮಾಮೃತವೆ ತೀರ್ಥ । ಎನ್ನ ಮನವೆಂದೆಂಬ
ಸಿಂಹಾಸನ ॥ ೨ ॥

ಅನ್ಯ ದೇವತೆಯೇಕೆ ಅನ್ಯ ಪ್ರತಿಷ್ಠೆಯೇಕೆ । ಅನ್ಯವಾದ ಮಂತ್ರ ತಂತ್ರವೇಕೆ
ಎನ್ನಲ್ಲಿ ಭರಿತ ಸಾಧನೆಗಳು ಇರಲಾಗಿ । ಚೆನ್ನಾಗಿ ಶ್ರೀ ಕೃಷ್ಣಸ್ವಾಮಿಯನು
ಪೂಜಿಸುವೆ ॥ ೩ ॥

ಎಂಬದಾಗಿ ಹಾಡಿದರು.

ಶ್ರೀ ಪುರಂದರ ದಾಸರು—

ಮುಖಾರಿ ಜಂಪೆತಾಳ

ಸುಲಭ ಪೂಜೆಯ ಮಾಡಿ ಬಲವಿಲ್ಲದವರು । ಕಾಲಕಾಲದ ಕರ್ಮ
ಕೇಶವನಿಗರ್ಪಿಸಿ ॥ ಪ ॥
ನುಡಿವ ನುಡಿಗಳೆಲ್ಲ ಪಾಂಡುರಂಗನ ಜಪವು । ಮಡದಿ ಮಕ್ಕಳು ಎಲ್ಲ
ಪರಿವಾರವು
ನಡುಮನೆ ಅಂಗಳವು ಉಡುಪಿ ಭೂವೈಕುಂಠ । ಎಡಬಲದ ಮನೆಯವರೆ
ಕಡುಭಾಗವತರು ॥ ೧ ॥
ಇರುಳು ಹಚ್ಚುವ ದೀಪ ಹರಿಗೆ ನೀರಾಜನವು । ಮಾರಡಿಯ ಧೋತ್ರವೇ
ಪರಮವಸ್ತ್ರ
ತಿರುಗಾಡಿ ದಣಿಯುವುದೆ ಹರಿಗೆ ಪ್ರದಕ್ಷಿಣೆಯು । ಮರಳಿ ಹೊಡೆ ಹೊರಳು
ವದೆ ನೂರು ದಂಡ ॥ ೨ ॥
ಹೀಗೆ ಈ ಕಲಿಯಲ್ಲಿ ದಿನದಿನದಿ ನಡೆಸಿದರೆ । ಜಗದೊಡೆಯ ಶ್ರೀಕೃಷ್ಣ
ಸುಲಭನಹನು
ಬೇಗ ತಿಳಿದುಕೊಳ್ಳಿ ಹೋಗುತಿದೆ ಆಯುಷ್ಯ । ಯೋಗಿ ಪುರಂದರ ವಿಠಲ
ಸಾರಿ ಹೇಳಿದನು ॥ ೩ ॥

ಎಂಬುದಾಗಿ ಹಾಡಿದರು.

ಶ್ರೀ ಗೋಪಾಲ ದಾಸರು—

ನಾನು ಮಾಡುವ ಸ್ನಾನ । ನಿಮಗದೆ ವಿಚಿತ್ರ । ಸ್ನಾನ ಗಂಧಸುವಸನ
ಉಪವೀತ ಸ್ರಕು ಅಜ । ಮಾನ ದೇಹವೆ ಭವನ । ಮನಸಿನ ಬಯಕೆಗಳು
ನಾನಾ ಮಣಿಗಳಾಭರಣ । ದೀಪವೆ ಸುಜ್ಞಾನ ॥
ಕೋಣತ್ರಯ ಹೃದಯಾಬ್ಜ ಪೀಠವು ಈ ನೆರೆದ ಜನರೇ ಆವರಣವು
ಪಾನಉಂಬನ್ನವೆ ನೈವೇದ್ಯವು । ಘ್ರಾಣೇಂದ್ರಿಯ ವಿಷಯ ಧೂಪವು
ಕಾಣಿಕೆ ಭಕುತಿ ಗತಿ ಪ್ರದಕ್ಷಿಣೆ । ಶಯನ ನಮನ ನುಡಿಯೆ ಮಹಾಜಪ
ಏನು ಕಂಡದು ಕೇಳಿದದು ಸುಖ । ಶ್ರೇಣಿ ನಿನ್ನಯ ಪ್ರತಿಮೆಗಳು ಜಗ
ತ್ರಾಣ ಗುರು ಗೋಪಾಲ ವಿಠಲ । ದೀನವತ್ಸಲ ಸಾತ್ವತಾಂಪತಿ
ನೀನಿರುತ ಒಲಿದೆನ್ನ ಪಾಲಿಸು ॥ ೩ ॥ ವಿಜಯ ವಿಠಲರಾಯ ॥

ಎಂಬದಾಗಿ ಹಾಡಿದರು.

ಶ್ರೀ ಜಗನ್ನಾಥ ದಾಸರು—

ವಾರಿಜ ಭವಾಂಡವೆ ಸುಮಂಟಪ
ಮೇರುಗಿರಿ ಸಿಂಹಾಸನವು ಭಾ
ಗೀರಥಿಯೆ ಮಜ್ಜನವು ದಿಗ್ವಸ್ತ್ರ ನುಡಿ ಮಂತ್ರ ||
ಭೂರುಹಜ ಫಲಪುಷ್ಪ ಗಂಧ ಸ
ಮೀರ ಶಶಿರವಿ ದೀಪ ಭೂಷಣ
ತಾರಕೆಗಳಿಂದರ್ಪಿಸಲು ಕೈಕೊಂಡು ಮನ್ನಿಸುವ || ೧ ||

ಮೇದಿನಿಯ ಮೇಲುಳ್ಳ ಗೋಷ್ಪಾ
ದೋದಕಗಳೆಲ್ಲಮಲ ತೀರ್ಥವು
ಪಾದಪಧರಾದ್ರಿಗಳು ಸುಕ್ಷೇತ್ರ ಜೀವಗಣ
ಶ್ರೀಧರನ ಪ್ರತಿಮೆಗಳು ಅವರುಂ
ಬೋದನವೆ ನೈವೇದ್ಯ ನಿತ್ಯದಿ
ಹಾದಿ ನಡೆವುದು ಯಾತ್ರೆ ಯೆಂದವನಂಘ್ರಿಗಳ ಭಜಿಸು || ೨ ||

ಮುಕ್ತಿ ತತ್ವ ಸುವಾಲಿಯಲ್ಲಿ ಭಂಗ್ಯಂತರದಲ್ಲಿ—

ಭೂಮಂಡಲವೆ ಪೀಠ ವ್ಯೋಮ ಮಂಡಲ ಛತ್ರ | ಸೋಮ ಸೂರಿಯರೇ
ಮಹದೀಪ ||
ಮಹದೀಪ ನಕ್ಷತ್ರ ಸ್ತೋಮಗಳೆ ನಿನಗೆ ಉಪದೀಪ || ೧೨ ||
ಮಳೆಯ ಮಜ್ಜನವು ದಿ | ಗ್ವಲಯಗಳು ವಸನಗಳು | ಬೆಳೆವ ಬೆಳಸುಗಳೇ
ನೈವೇದ್ಯ ||
ನೈವೇದ್ಯ ಜನರ ಕಂ | ಗಳ ಕಾಂತಿ ನಿನಗೇ ಆರಾರ್ತಿ || ೧೩ ||
ಭೂರುಹವ ಚಾಮರವ ಮಾಡುವೆನು ಶರಧಿ | ಘೋರ ಗರ್ಜನೆಯೇ
ಮಹವಾದ್ಯ ||
ಮಹವಾದ್ಯ ಜೀವರ ಸಾರ ಸುಸ್ವರವೇ ಸಂಗೀತ || ೧೪ ||
ಪಾತಾಳ ಪಾದುಕ ವಿ | ಧಾತ ಲೋಕವೆ ಮುಕುಟು | ಶ್ವೇತ ದ್ವೀಪಗಳೇ
ಒಡ್ಯಾಣ ||
ಒಡ್ಯಾಣ ವೈಕುಂಠ ಅತ ಪತ್ರಗಳೇ ನಿನಗೀವೆ || ೧೫ ||

ನಡೆವುದೇ ಹರಿ ಯಾತ್ರೆ ನುಡಿವುದೇ ಹರಿನಾಮ । ಕುಡಿವ ನೀರುಗಳೇ
ಅಭಿಷೇಕ ॥
ಅಭಿಷೇಕ ದಿನದಿನದಿ । ಒಡಲಿಗುಂಬುವದೇ ನೈವೇದ್ಯ ॥ ೧೬ ॥

ಎಂಬ ರೀತಿಯಲ್ಲಿ ಮಾನಸ ಪೂಜೆ ಮಾಡಿದರು.

ದೇವರನ್ನು ತಾಯಿಯೆಂದು ಪೂಜಿಸುವರಿದ್ದಾರೆ. ತಂದೆ ಮೊದಲಾದ ಬಂಧುತ್ವದಿಂದ ಪೂಜಿಸುವವರಿದ್ದಾರೆ. ವಿಶ್ವಂಭರನೆಂದು ಪೂಜಿಸುವವರು ದೂರ್ವೆಯಿಂದ ಪೂಜಿಸುತ್ತಾರೆ. ಸರ್ವಮಂಗಳೆಯೆಂದು ಪೂಜಿಸುವವರು ಹರಿದ್ರಾ ಚೂರ್ಣದಿಂದ ಪೂಜಿಸುತ್ತಾರೆ. ಪರಮ ಶಿವನೆಂದು ಪೂಜಿಸುವವರು ಬಿಲ್ವಪತ್ರೆಯಿಂದ ಪೂಜಿಸುತ್ತಾರೆ. ಶ್ರೀ ಹರಿಯೆಂದು ಪೂಜಿಸುವವರು ತುಲಸಿ ಯಿಂದ ಅರ್ಚನೆ ಮಾಡುತ್ತಾರೆ. ಶ್ರೀ ಕೃಷ್ಣನು ಗೀತೆಯಲ್ಲಿ "ಯಾವ ಯಾವನು ಯಾವ ಯಾವ ರೂಪಗಳಲ್ಲಿ ಭಕ್ತಿಯಿಟ್ಟು ಪೂಜಿಸುವನೋ ಅವ ನವನಿಗೆ ಅದದರಲ್ಲೇ ಶ್ರದ್ಧೆಯನ್ನುಂಟುಮಾಡುತ್ತೇನೆ. ವಿಧಿಯಿಂದ ಮಾಡಲಿ ಬಿಟ್ಟು ಮಾಡಲಿ, ಹೇಗೆ ಮಾಡಿದರೂ ಅದು ನನ್ನನ್ನೇ ಸೇರುತ್ತದೆ" ಎಂದು ಮೊದಲಾಗಿ ಹೇಳಿರುವಂತೆ ಪೂಜೆಯೆಲ್ಲವೂ ಶ್ರೀ ಕೃಷ್ಣಾರ್ಪಣವಾಗುತ್ತದೆ. ಪುರಂದರ ದಾಸರು ಶ್ರೀ ಹರಿ ಪೂಜೆಗೆ ತುಲಸಿ ಮುಖ್ಯ ಪೂಜಾ ದ್ರವ್ಯವೆಂಬು ದನ್ನು ತಿಳಿಸಲೋಸುಗ—

ಮೋಹನ ಅಟ್ಟತಾಳ

ಒಲ್ಲನೋ ಕೃಷ್ಣ ಕೊಳ್ಳನೋ । ಎಲ್ಲಾ ವಸ್ತುಗಳಿದ್ದು । ತುಲಸಿ ಯಿಲ್ಲದ
ಪೂಜೆ ॥ ಪ ॥
ಸಿಂಧು ಗೋದಾವರಿ ಗಂಗೆ ಯುದಕವಿದ್ದು । ಗಂಧ ಪರಿಮಳ ವಸ್ತುಗಳಿದ್ದು
ಛಂದುಳ್ಳ ದಿವ್ಯ ಪಂಚಾಮೃತವಿದ್ದು । ವೃಂದಾವನದ ಶ್ರೀ ತುಲಸಿ ಯಿಲ್ಲದ
ಪೂಜೆ ॥ ೧ ॥
ಕಮಲ ಮಲ್ಲಿಗೆ ಜಾಜಿ ಚಂಪಕವಿದ್ದು । ವಿಮಲ ಧೂಪದೀಪ ಕರ್ಪೂರವಿದ್ದು
ಅಮಿತ ಪಂಚಭಕ್ಷ್ಯ ಅಮೃತಾನ್ನಗಳಿದ್ದು । ಕಮಲನಾಭಗೆ ಪ್ರಿಯ ತುಲಸಿ
ಯಿಲ್ಲದ ಪೂಜೆ ॥ ೨ ॥

ಪೂಜೆಯ ಮಾಡಿರೋ ಶ್ರೀ ತುಲಸೀ ದಳದಿ । ಮೂಜಗದೊಡೆಯ
ಮುರಾರಿಯನು
" ರಾಜಾಧಿರಾಜಾಯ " ಮಂತ್ರ ಪುಷ್ಪಗಳಿಂದ । ರಾಜರಾಜ ನಮ್ಮ
ಪುರಂದರ ವಿಠಲನ ॥ ೩ ॥

ಎಂದು ಹಾಡಿರುತ್ತಾರೆ.

ಅರ್ಚನ ಭಕ್ತಿಯ ಪೂಜಾ ವಿಧಾನವೊಂದನ್ನು ತೆಗೆದುಕೊಂಡು ಹರಿದಾಸ ಸಾಹಿತ್ಯದಲ್ಲಿನ ಪದ ಸುಳಾದಿಗಳನ್ನು ಕ್ರಮವಾಗಿ ಕೊಟ್ಟರೆ ಅದೊಂದು ಆಗಮ ಶಾಸ್ತ್ರವಾಗುತ್ತದೆ. ವೇದ ಮಂತ್ರಗಳನ್ನೂ ಪೌರಾಣಿಕ ಸ್ತೋತ್ರಗಳನ್ನೂ ಕನ್ನಡದಲ್ಲಿ ದೇವ ನಾಮಗಳಾಗಿ ನೂರಾರು ನುಡಿಗಳಲ್ಲಿ ಹಾಡಿರುತ್ತಾರೆ.

ಮೂರ್ತಿ ಪೂಜೆಯ ಅರ್ಥವನ್ನು ತಿಳಿಯದೆ ಕಲ್ಲು ಕಂಚುಗಳೇ ದೇವರೆಂದು ಭ್ರಮಿಸಿದರೆ, ಬೆಳ್ಳಿ ಭಂಗಾರಗಳೇ ಲಕ್ಷ್ಮಿಯೆಂದು ಭ್ರಮಿಸಿದರೆ, ಹರಿದಾಸರಂತೆ ಪೆಟ್ಟು ಕೊಟ್ಟವರು ಮತ್ತೊಬ್ಬರಿಲ್ಲ. " ಶಿಲಾದಿ ವಿಗ್ರಹ ಥಳಾಸೆ ಹರಿಯೆಂಬಿಲಾ ಕೇವಲ ಸುಳ್ಳೋ ಮತ್ತು " ಲೋಹ ಕಲ್ಲ ಪ್ರತಿಮೆ ಪೂಜಿಸಿದರೆ ಅಲ್ಲೇನಿಲ್ಲ " ಎಂಬ ಮಾತುಗಳಿಗಿಂತ ಈ ಮಾದರೀ ಗ್ರಂಥದಲ್ಲಿ ಈ ಬಗ್ಗೆ ಹೆಚ್ಚು ಬರೆಯಬೇಕಾಗಿಲ್ಲ.

---

## ವಂದನ ಭಕ್ತಿ

ಮಧ್ಯಮಾವತಿ  ಆದಿತಾಳ

ನಾರಾಯಣತೇ ನಮೋ ನಮೋ । ನಾರದ ಸನ್ನುತ ನಮೋ ನಮೋ ॥ ಪ ॥
ಮುರಹರ ಭವಹರ ಮುಕುಂದ ಮಾಧವ । ಗರುಡ ಗಮನ ಪಂಕಜನಾಭ
ಪರಮಪುರುಷ ಭವಭಂಜನ ಕೇಶವ । ನರ ಮೃಗ ಶರೀರ ನಮೋ ನಮೋ
॥ ೧ ॥
ಜಲಧಿ ಶಯನ ರವಿಚಂದ್ರ ವಿಲೋಚನ । ಜಲರುಹ ಭವನುತ ಚರಣಯುಗ
ಬಲಿಭಂಜನ ಗೋವರ್ಧನ ಗಿರಿಧರ । ನಳಿನನಾಭ ತೇ ನಮೋ ನಮೋ ॥ ೨ ॥
ಆದಿದೇವ ನಿಗಮಾಗಮ ಪೂಜಿತ । ಪಾದ ತ್ರಿಜಗ ಮೋಹನ ರೂಪ
ವೇದೋದ್ಧಾರಕ ವೆಂಕಟನಾಯಕ । ಪುರಂದರ ವಿಠಲ ತೇ ನಮೋ ನಮೋ ॥ ೩ ॥

## ದಾಸ್ಯ ಭಕ್ತಿ

ಶಬ್ದ ಶ್ರವಣ ಮಾತ್ರದಿಂದ ದಾಸ್ಯ ಭಕ್ತಿಯು ಸಾಮಾನ್ಯವಾದುದೆಂದು ಕಂಡುಬರಬಹುದು. ದಾಸ್ಯ ಭಕ್ತಿ ಅಷ್ಟು ಸುಲಭವಾದುದಲ್ಲ. ದಾಸನೆಂದು ಕರೆದುಕೊಂಡ ಮಾತ್ರಕ್ಕೆ ಅವನು ದಾಸನಾಗುವುದಿಲ್ಲ. ಹಿಂದೆ ಉಗಾಭೋಗಗಳ ಜೊತೆಯಲ್ಲಿ ಕೊಟ್ಟಿರುವ—

ದಾಸನಾಗುವೆನೆಂದು ಆಶೆ ಮಾಡಲು ಬಲು ಕ್ಲೇಶವ ಬಡಿಸುವ । ಆ ।
ಭಾಸವ ನುಡಿಸುವ ನಾಶ ಮಾಡುವ ಸಕಲೈಶ್ವರ್ಯಗಳನೆಲ್ಲ
ಗ್ರಾಸವಾಸಕೆ ತರಲೀಸನು ಪರರಿಂದ ಮೋಸವಾದ ಭವ
ಕ್ಲೇಶಪಾಶದಿ ಬಿಗಿದು ದ್ವೇಷವ ಮಾಡಿಸುವ ನೀಚರ ಕೈಯಿಂದ
ಕಾಸಿನವನ ಮಾಡಿ ಬೀಸಿ ಬಿಸಾಡುವ ಲೇಸು ಕೊಡುವ ನಮ್ಮ
ವಿಜಯ ವಿಠಲನ
ದಾಸನಾಗುವನಿಗೆ ಕ್ಲೇಶ ಬಡಿಸದೆ ಒಲಿಯ ॥

ಎಂಬಂತೆ ದಾಸತ್ವ ದೊರಕುವುದು ಮಾನವ ಜೀವಿತದ ವಿಷ ಪರೀಕ್ಷೆ. ಹರಿದಾಸನು ಹೇಗಿರಬೇಕು ಅಥವ ಹೇಗಿದ್ದರೆ ಹರಿದಾಸ ಎಂಬುದನ್ನು ವಿಜಯ ದಾಸರ ಸುಳಾದಿಯಿಂದ ತಿಳಿಯುವುದು ಮೇಲು.

### ಹರಿದಾಸ ಲಕ್ಷಣ ಸುಳಾದಿ

### ಧೃವತಾಳ

ಹರಿದಾಸ ಲಕ್ಷಣವಿರಬೇಕು ಈ ಪರಿ
ಗರುವ ಕೋಪ ಮದ ಮತ್ಸರ ಬಿಡಬೇಕು ।
ಗುರು ಹಿರಿಯರಿಗಾದರ ಪೂರ್ವಕದಿಂದ
ಕರವ ಮುಗಿದು ನಮಸ್ಕರಿಸುತಲಿರಬೇಕು ।
ನೆರೆಹೊರೆಯವರಿಗೆ ನಿರುತವಿದ್ದರು ಬೇ
ಸರ ಗೊಳಿಸದೆ ಸಂಚರಿಸುತಿರಬೇಕು ।
ಹರಣ ಹರಿಯಾಧೀನ ನೆರೆದ ಸತೀ ಸುತರು
ನಿರುತ ಹರಿಗೆ ದಾಸರೆಂದು ಗಣಿಸಬೇಕು ।

ಹರಿದಿವಸ ಹರಿಚರಿತೆ ಹರಿಸ್ಮರಣೆ ಹರಿಪೂಜೆ
ಹರಿಶ್ರವಣ ಅಂತರ ಶುದ್ಧಿಯಿರಲಿಬೇಕು ।
ಹರಿ ಪರದೇವತೆ ವಿಜಯ ವಿಠಲಗತಿ
ಸುರರಾದ್ಯರಿಗೆ ಎಂದು ಉರವಣಿಸಿ ನುಡಿಯಬೇಕು ॥ ೧ ॥

## ಮಟ್ಟತಾಳ

ಪರಧನ ಪರಸತಿ ಪರನಿಂದ್ಯದವರ
ಸರಸದಲ್ಲಿರದೆ ಚರಿಸಬೇಕು ದೂರ ।
ನರರು ಬೈದರೆ ಆದರವೆಂದು ತಿಳಿದು
ಹರುಷ ಬಡಲಿಬೇಕು ನಿರುತದಲಿ ।
ಸುರತರು ದೊರೆತಂತೆ ಕರೆದು ಮನ್ನಿಸಿದರು
ಹಿರಿಹಿರಿ ಹಿಗ್ಗದೆ ಬರಡು ತಾನಿರಬೇಕು ।
ನೆರೆದ ಸಂದಣಿಯೊಳು ಚರಿಸಬಾರದು ಪೋಗಿ
ಬುದ್ಧಿ ಕುಳಿತು ಹಾಳು ಹರಟೆಯನಾಡದೆ ।
ಮರಿಯಾದೆಯ ಸೊಲ್ಲು ಇರಬೇಕು ತನ್ನೊಳು
ಪರಮ ತತ್ವವ ತಿಳಿದು ಅರುಹರಿಗರುಹುತ್ತ ।
ಸುರಿಯಬೇಕು ಸುಖ ಮರಳಿ ಮರಳಿ ನೆನೆದು
ಪರಮ ಗುಪ್ತನಾದ ವಿಜಯ ವಿಠಲನ
ನೆರೆನಂಬಲಿಬೇಕು ಕುರುಹು ಕಾಣಿಸುವಂತೆ ॥ ೨ ॥

## ತ್ರಿಪುಟತಾಳ

ಲೇಸಾದರೂ ಹರಿಯ ಕಾರುಣ್ಯವೆನಬೇಕು
ಲೇಸಾಗದೆ ಬಲು ಕ್ಲೇಶ ಬಂದೊದಗಲು ।
ಏಸು ಜನ್ಮದ ಪಾಪರಾಶಿ ಬಂದೊದಗಿತೊ
ಈ ಶರೀರಕೆ ಬಂದು ಪ್ರಾಪುತವಾದದ್ದು ।
ನೀಸದೆ ಬಿಡದೆಂದು ಸತ್ಯದಿಂದಿರಬೇಕು
ಲೇಶವಾದರು ದುಃಖ ಹಚ್ಚಿಕೊಳ್ಳದೆ ಮಹಾ ।

ತೋಷದಲ್ಲಿರಬೇಕು ನೋಯದಲೆ
ಶ್ರೀಶನೆ ಗತಿಯೆಂದು ಬೇಸರದಲೆ ಬಂದ |
ಕ್ಲೇಶಗಳುಣಬೇಕು ಬಂದಾಗಲೂ
ದೇಶಕಾಲಗುಣ ಪರಿಪೂರ್ಣ ಹರಿಯಿರೆ |
ಘಾಸಿ ಎಲ್ಲಿಯದೆಂದು ನಲಿಯಬೇಕು
ನಾಶವಾಗದು ಭೇದ ಸಿದ್ಧವೆಂದೆನಬೇಕು |
ವಾಸುದೇವ ನಮ್ಮ ವಿಜಯ ವಿಠಲನ
ದಾಸಾನು ದಾಸರ ದಾಸನಾಗಲಿಬೇಕು || ೩ ||

ಅಟ್ಟತಾಳ

ಬಡತನ ಬಂದರೆ ಹಿಗ್ಗುತಲಿರಬೇಕು
ಜಡನಾಗಿ ಬಾಹಿರದಲ್ಲಿ ತೋರಬೇಕು |
ಅಡಿಗಡಿಗೇ ಲಜ್ಜೆಗೆಡಬೇಕು ಸರ್ವದಾ
ಒಡಲಿಗೆ ಚಿಂತೆ ಮಾಡದೆ ದೃಢವಿರಬೇಕು |
ಒಡವೆವಸ್ತು ತಂದೆತಾಯಿ ಈ ಲೋಕದ
ಒಡೆಯ ಕೃಷ್ಣನೆಂದು ಬಿಡದೆ ನಂಬಲಿಬೇಕು |
ಎಡೆಗೆ ಪರಿಮಿತಿ ಧಾನ್ಯ ತರಲಿಬೇಕು
ಕೊಡಬೇಕು ಕೊಡಬೇಕು ಒಬ್ಬರಿಗದರೊಳು |
ಕಡುಗಲಿ ವಿಜಯ ವಿಠಲನ ಪಾದ
ಪಿಡಿದು ಭಜಿಸಬೇಕು ನಲಿನಲಿನಾಡುತ || ೪ ||

ಆದಿತಾಳ

ಉಟ್ಟದಕಿಂತ ಮೇಲು ಇಟ್ಟದಕಿಂತ ಮೇಲು
ಕೊಟ್ಟದಕಿಂತ ಮೇಲು ವಿಠಲನ ಸ್ಮರಣೆ ಮನ |
ಮುಟ್ಟಿ ಬಹಿರದಲ್ಲಿ ಅಟ್ಟಹಾಸದಿಂದ
ಚಿಟ್ಟಿಕ್ಕಿ ಕೂಗುವದು ಇಷ್ಟು ಸಾಧನೆ ಮೊದಲು |
ದಟ್ಟಡಿಯಿಂದ ತಿಳಿದು ನಿಷ್ಠೆಯಿಂದಿರಲು
ಇಷ್ಟ ಪ್ರಾಪುತ ಆವಗೆ ಅರಿಷ್ಟ ಪರಿಹರ |

ಹುಟ್ಟುಸಾವಿಲ್ಲದ ವಿಜಯ ವಿಠಲನು
ಕೊಟ್ಟು ಸಾಕುವ ದಯವಿಟ್ಟು ದಾಸನ ಮಾಡಿ ॥ ೫ ॥

ಜತೆ

ಈಪರಿ ಯಿದ್ದವಗೆ ಅನಂತ ಜನುಮಕ್ಕು ।
ತಾಪತ್ರಯಗಳಿಲ್ಲ ವಿಜಯ ವಿಠಲ ಬಲ್ಲ ॥ ೧ ॥

ಹೀಗಿರದೆ ದಾಸ ವೇಷ ಧರಿಸಿದರೆ ಅವನನ್ನು ಈಶ ಒಪ್ಪುವುದಿಲ್ಲ. ಆ ಮಾತನ್ನು ಸಹ ವಿಜಯ ದಾಸರು

ಪಾಮರ ಮನುಜರು ದಾಸ ವೇಷವ ಧರಿಸಿ
ನೇಮ ನಿಷ್ಠೆಗಳಿಲ್ಲ ಪೋಗಾಡಿಕೊಂಡು ।
ಕಾಮಚಾರಿಗಳಾಗಿ ಕಂಡಲ್ಲಿ ಸಂಚರಿಸಿ
ಮಾಮನೋಹರನ ಲೀಲೆಯ ಪೇಳಿದರೇನು ।
ಈ ಮಹಿಯೊಳು ಮೃಷ್ಟಾನ್ನ ಭೋಜನ ವಸನ
ಇದೇ ಮಹಾ ಫಲವೆಂದು ಹಿಗ್ಗಿ ಕೆಟ್ಟುಪೋಗುವನು ।
ಸ್ವಾಮಿ ತನ್ನ ನಿಜದಾಸನೆಂದವನಿಗೆ ನಾಮ ಸುಧೆಯನಿತ್ತು
ಸಲಹುತಿಪ್ಪ ॥

ಎಂದು ಮೊದಲಾಗಿ ಒಂದು ಉಗಾಭೋಗದಲ್ಲಿ ಹೇಳಿರುವರು.

ದಾಸ್ಯ ಭಕ್ತಿಯ ಪರಮಾವಧಿಯನ್ನು ಮುಟ್ಟಿದವನೆಂದರೆ ಒಬ್ಬ ಮಾರುತಿ ರಾಯ. ಅವನ ಮಾರ್ಗವನ್ನನುಸರಿಸಿ ಸಾಧನೆ ಮಾಡಿ ಸಿದ್ಧ ಪುರುಷರೆಂದೆನಿಸಿದವರು ಹರಿದಾಸರುಗಳು.

ಪುರಂದರ ದಾಸರು ಮಾರುತಿಯನ್ನು ನೋಡಿ ದಾಸ್ಯ ಭಕ್ತಿಯನ್ನು ವಿವರಿಸಿರುವದರ ಸೊಬಗನ್ನು ಕೆಳಕಂಡ ದೇವರ ನಾಮದಲ್ಲಿ ನೋಡಬಹುದು.

ರಾಗ ಮಧ್ಯಮಾವತಿ — ಆದಿತಾಳ

ಸೇವಕತನದ ರುಚಿಯನರಿತೆ । ದೇವ ಹನುಮರಾಯ । ವೈರಾಗ್ಯ ಬೇಡಿದೆ ॥ಪ॥
ಉದಧಿಯ ದಾಟಿ ಸೀತೆಯ ಕ್ಷೇಮ ತಂದಾಗ । ಮದುವೆಯ ಮಾಡೆನ್ನ
ಬಾರದಿತ್ತೇ

ಪದದಿ ಪಾಷಾಣವ ಪೆಣ್ಣು ಮಾಡಿದವಗೆ । ಇದು ಏನಸಾಧ್ಯವೋ ಹನುಮ
ಒಲ್ಲದ್ಹೋದೆ ॥ ೧ ॥
ಕ್ಷಣದಲಿ ಸಂಜೀವನಗಿರಿ ತಂದಾಗ ಹಣಹೊನ್ನು ಬೇಡಲು ಕೊಡದಿದ್ದನೇ ।
ರಾಮ ।
ವಿನಯದ ವಿಭೀಷಣಗೆ ರಾಜ್ಯವಿತ್ತವನಿಗೆ । ಏನಸಾಧ್ಯವೊ ಇದು ಹನುಮ
ಒಲ್ಲದೆ ಹೋದೆ ॥ ೨ ॥
ಸಾರ್ವಭೌಮನು ಮೆಚ್ಚಿದಾಗಲೆ ನೀ ಪೋಗಿ । ಊರ್ವಿಯ ಬೇಡಲು ಕೊಡ
ದಿದ್ದನೇ । ರಾಮ ।
ಸರ್ವವ ತೊರೆದು ಶ್ರೀ ಪುರಂದರ ವಿಠಲನ । ನಿರ್ವ್ಯಾಜದ ಸೇವೆ
ಮಾಡಿದೆಯೊ ಹನುಮಾ ॥ ೩ ॥

—— o ——

## ಸಖ್ಯಭಕ್ತಿ

ಭಕ್ತಿಯ ಒಂದೊಂದು ಅಂತಸ್ತಿನಲ್ಲೂ ಹರಿದಾಸರು ಅಭ್ಯಾಸ ಮಾಡಿ ತಮ್ಮ ಅನುಭವಗಳನ್ನು ಬರೆದಿರುತ್ತಾರೆ. ಸಖ್ಯಭಕ್ತಿಯಲ್ಲಿ ದಾಸ್ಯಭಾವ ವಿರುವುದಿಲ್ಲ. " ಇಟ್ಟಂತೆ ಇರುವೆನು " ಎಂದು ದಾಸ್ಯ ಭಕ್ತರು ನುಡಿದರೆ " ಇದ್ದಂತೆ ಇರುವೆನು " ಎಂದು ಸಖ್ಯ ಭಕ್ತರು ನುಡಿಯುವರು. " ಅಸ್ಮದಿಷ್ಟೈಕ ಕಾರ್ಯಾಯ ಪೂರ್ಣಾಯ ಹರಯೇ ನಮಃ " ಎಂಬದಾಗಿ ದೇವರ ಸಖನ ಸ್ಥಾನದಲ್ಲಿ ನಿಂತು ಬಲು ಭರವಸೆಯಿಂದ ಶ್ರೀಮದಾಚಾರ್ಯರು ನುಡಿದಿರುತ್ತಾರೆ. ವಾದಿರಾಜರು " ನಮ್ಮನ್ನೊಲ್ಲದ ಹಯವದನ ಎಲ್ಲಿದ್ದರೇನು " ಎಂದು ಉಗಾಭೋಗದಲ್ಲಿ ಇತರ ದೃಷ್ಟಾಂತಗಳೊಡನೆ ಕೊನೆ ಮಾತಾಗಿ ಹಾಡಿದ್ದಾರೆ. ಪುರಾಣ ಕಾಲದಲ್ಲಿ ಅರ್ಜುನನು ನನ್ನ ಪ್ರತಿಜ್ಞೆ, ತನ್ನದಲ್ಲವೆಂದು ಕೃಷ್ಣನು ಹೇಳಿದರೆ ಅವನನ್ನೆ ಎದುರಿಸುವೆನೆಂದು ಯುದ್ಧಕ್ಕೆ ಹೊರಟಿದ್ದಾನೆ. ಸಖನ ಸುಖವನ್ನು ನೋಡಿ ದೇವರಾದವನು ಸಂತೋಷಪಡದಿದ್ದರೆ–ಸಖನ ದುಃಖವನ್ನು ನೋಡಿ ದೇವರಾದವನು ಮರುಗದಿದ್ದರೆ–ಆ ಯಾರಗೊಡವೆಗೂ ಬರದ, ಜಗದ್ವ್ಯಾಪಾರ ವರ್ಜ್ಯ, ಚಿದಾತ್ಮಕ ದೇವರು, ಬೆಳ್ಳಿಯಾದರೂ ಸಲ್ಲದ ನಾಣ್ಯದಂತೆ! ಎಂಬುವುದು ಸಖ್ಯಭಕ್ತರ ಮತ. ಪಾಂಡವರ ಸಖ್ಯಭಕ್ತಿಗೆ ಮೆಚ್ಚಿ ಶ್ರೀ ಕೃಷ್ಣನು—

## ಲಾವಣಿ

ಹದಿನಾಲ್ಕು ಲೋಕಕೆ ದಾತ । ಹರಿ । ಪಾಂಡವರ ಮನೆ ದೂತ ॥ ಪ ॥

ಚತುರ ಹಸ್ತದಿಂದೆಂಜಲ ತೆಗೆವ । ಅತುಲಿತ ಕಟ್ಟಿತಾ ಎಲ್ಲ ಬಿಸುಡುವ
ಘೃತದಧಿ ಕ್ಷೀರಾದ್ಯಮೃತ ಸುರಸವ । ಸತಿ ವಕ್ಷ ಕೌಂಸ್ತುಭಕಧಿಕೆಂದರಿವ
ಹಿತದಿ ಪೀತಾಂಬರ ಪತನಾನ್ನವ ಶ್ರೀಪತಿ ಚಿತ್ರಾಕೃತಿಗತಿಶಯ ತಿಳಿದು
ಸತತ ಸದನದಲಿ ಕೆಲಸಕೊದಗುವ ॥ ೧ ॥

ಘರ್ಮಚೆಳ್ಳಿ ಚಿತ್ತಂಗಳ ಪಿಡಿವ । ಪ್ರೇಮಯಿಂದ ತಾ ವದಗಿ ನಿಂತಿರುವ
ನಿರ್ಮಲವಾಗಿ ಕುದುರೆ ತೊಳೆತರುವ । ಮರ್ಮವರಿತು ಕಸಕೋದಕ ಕೊಡುವ
ಕರ್ಮಕಾರನಂದದಿ ಕಾದಿರುವ । ಶರ್ಮದಿಂದ ರಥಕಟ್ಟಿ ಸಾರಥ್ಯವ
ಧರ್ಮಾನುಜ ಹೊರಟಾಗ ನಡೆಸುತ ॥ ೨ ॥

ಕಾಸುವೀಸ ಸಂಬಳವನೆ ಬಯಸ । ಸಾಸಿರನಾಮದೊಡೆಯ ಶಿರಿಯರಸ
ಕಾಸಿಸೆಯಪ್ಪಾಯಾಸವ ಪಡಿಸ । ದಾಸರ ಮನೆ ಕೆಲಸಕೆ ಅತಿಹರುಷ
ಈಶ ನಮಯವರಿತು ಪಾಲಿಸ ಪುಣ್ಯಪುರುಷ । ಭಾಸುರ ಗುಣಗಣ
ವೇಂಕಟ ಪತ
ಕ್ಲೇಶ ಸದಾ ಭಕ್ತರಬಳಿ ಸರಸ ॥ ೩ ॥

ಕರ್ಮಯೋಗಿಗಳು ತಾವಾಚರಿಸಿದ ಯಜ್ಞಾದಿ ಕರ್ಮಗಳಿಗೆ ದೇವರೊಲಿಯದಿದ್ದರೆ, ಮತ್ತೆ ಯಜ್ಞಗಳನ್ನಾಚರಿಸಿರುವುದುಂಟು. ಜ್ಞಾನ ಯೋಗಿಗಳು ದೇವರ ಸಾಕ್ಷಾತ್ಕಾರವಾಗದಿದ್ದರೆ, ಮತ್ತೆ ತಪಸ್ಸು ಮಾಡುವುದುಂಟು. ಸಖ್ಯ ಭಕ್ತರ ಮಾತು ಹಾಗಿಲ್ಲ. ತಮ್ಮಂತೆ ದೇವರು ಬರದಿದ್ದರೆ ನಿಂದಿಸುವದಕ್ಕವರು ಹಿಂದೆಗೆದಿಲ್ಲ. ಭಕ್ತರ ನಿಂದೆ ದೇವರಿಗೆ ವಂದನೆಯಾಗಿ ಬಿಟ್ಟಿದೆ. ಪುರಂದರ ದಾಸರು ಸಖ್ಯಭಕ್ತಿಯಲ್ಲಿ ಆಡಿರುವ ಮಾತುಗಳನ್ನು ನೋಡೋಣ !

ಸೌರಾಷ್ಟ್ರ ಅಟ್ಟತಾಳ

ಏನೆಂತೆಂದೊಲಿವೆ ನಿನ್ನವರಂತೆ ಕೆಡಬುದ್ಧಿ ಎನ್ನೊಳಿಲ್ಲ ।
ಗುಣಹೀನರಲ್ಲದೆ ದೀನರ ಪಾಲಿಪ ಬುದ್ಧಿ ನಿನ್ನೊಳಿಲ್ಲ ॥ ಪ ॥

ತರಳ ಪ್ರಹ್ಲಾದನಂದದಿ ನಿನ್ನ ರೂಪವ ಕೆಡಿಸಲಿಲ್ಲ
ನರನಂತೆ ಬಂಡಿಯ ಬೋವನ ಮಾಡಿ ನಾ ಹೊಡೆಸಲಿಲ್ಲ
ಸುರನದೀಸುತನಂತೆ ನೊಸಲೊಳು ಬಾಣವ ನೆಡಿಸಲಿಲ್ಲ
ವರ ಅಂಬರೀಷನಂತೆ ಈರೈದು ಜನ್ಮವ ಪಡಿಸಲಿಲ್ಲ ॥ ೧ ॥

ನಾರದನಂತೆ ಕಂಡವರ ಕೊಂಡೆಯ ಮಾತನಾಡಲಿಲ್ಲ ।
ಪರಾಶರನಂತೆ ನದಿಯೊಳಂಬೀಗರ ಹೆಣ್ಣ ನಾ ಕೂಡಲಿಲ್ಲ ॥
ಆ ರುಕ್ಮಾಂಗದನಂತೆ ಮಗನ ಕೊಲ್ಲಲು ದೃಢನಾಡಲಿಲ್ಲ
ಮಾರುತಿಯಂತೆ ನೀನುಣಕುಳಿತೆಡೆಯ ಕೊಂಡೋಡಲಿಲ್ಲ ॥ ೨ ॥

ಅವಿಹಿತದಲಿ ವಿಭೀಷಣನಂತೆ ಅಣ್ಣನ ಕೊಲಿಸಲಿಲ್ಲ
ಯುವತಿ ದ್ರೌಪದಿಯಂತೆ ಶಾಖ ಪತ್ರವನೊಂದನುಣಿಸಲಿಲ್ಲ ॥
ತವಪುಂಡರೀಕನಂತೆ ಇಟ್ಟಿಗೆ ಮೇಲೆ ನಾನಿಲಿಸಲಿಲ್ಲ
ಅವರಂತೆ ಪುರಂದರ ವಿಠಲ ನಿನ್ನನು ನಾ ಮೆಚ್ಚಿಸಲಿಲ್ಲ ॥ ೩ ॥

ಪುರಂದರ ದಾಸರ ಮಾತು ಹೀಗಿದ್ದರೆ ವಿಜಯ ದಾಸರು ಇನ್ನೂ ಒಂದು ಹೆಜ್ಜೆ ಮುಂದಿಟ್ಟು ಹಾಡಿದ ಸುಳಾದಿ ಕೆಳಕಂಡಂತಿದೆ.

## ಧೃವತಾಳ

ಅಂಜಿಸುವದೇನೊ ಪರಂಜಳವಾಗಿದೆ
ಕೆಂಜಡೆಯನೊಡೆಯ ಯಾದವರೇಯ ।
ಯಂಜಲನುಂಡು ಗುಲುಗಂಜಿ ದಂಡೆಯ ಮುಡಿದು
ಗಂಜಿಗೂಳನು ಕುಡಿದದ್ದು ಮರಾತೆಯ ।
ಭುಂಜಿಸಿಪರವ ಮಾಡಿ ತಂದವಾಗರವ
ಅಂಜದೆ ಏಳುದಿನ ಗಿರಿಯಪೊತ್ತೆ ।
ಕಂಜನಾಭನೆ ನಿನಗಂಜಲ್ಯಾತಕೊ ಧ
ನಂಜಯನಾಮ ಶಿರಿವಿಜಯ ವಿಠಲ ಗೊಲ್ಲ ॥ ೧ ॥

ತ್ರಿವಿಡೆ ತಾಳ

ಬಾಲಕತನದಲ್ಲಿ ಹಾಲು ಮೊಸರು ಕದ್ದು
ಕೋಲುಗುದಿಗೆಯಿಂದ ಕೊಲೆಯ ಕೊಲಿಸಿಕೊಂಡೆ ।
ಕಾಲನು ಒರಳಿಗೆ ಬೀಳ ಕಟ್ಟಿಸಿಕೊಂಡೆ
ಚಾಲಿವರಿದೆ ಗೊಲ್ಲ ಬಾಲೆಯರಿಗೆ ಎಲ್ಲಾ ।
ಮೂಲೋಕಕ ಬಿಡದೆ ಆಳುವ ಧೊರೆತನ
ಏಳಲವಾಯಿತೊ ವಿಜಯ ವಿಠಲರಾಯ ॥ ೨ ॥

ರೂಪಕ ತಾಳ

ರಕ್ಕಸಗಂಜಿ ಮುಚುಕುಂದನ ಮೊರೆಬಿದ್ದೆ
ರಕ್ಕಸಗಂಜಿ ಸಾಗರದಿ ಪುರವ ಬಿಗಿದೆ ।
ರಕ್ಕಸಗಾಗಿ ವಿಕಾರವೊಗನಾದೆ
ರಕ್ಕಸಗಾಗಿ ಕೋಡಗ ಬಲನೆರಹಿದೆ ।
ರಕ್ಕಸಾಂತಕ ನಿನ್ನ ಮಕ್ಕಳಾಟಕೆ ದೇ
ವಕ್ಕಳು ಮನಸಿಗೆ ಸಿಕ್ಕದೆಂಬೋರೋ ।
ಮುಕ್ಕಣ್ಣನೊಲಿಸಿ ಮಕ್ಕಳ ಬೇಡಿದೆ
ಠಕ್ಕು ಮಾಯಾತನ ಕಕ್ಕಜಗೊಂಬೆನೊ ।
ಚಿಕ್ಕವನನ್ನು ಹಿರಿಯನ್ನ ಮಾಡಿ ಪುಣ್ಯ
ದಕ್ಕಿಸಿಕೊಂಡೆ ವಿಜಯ ವಿಠಲ ಪುಂಡ ॥ ೩ ॥

ಜಂಪೆತಾಳ

ಅಳುಕುವವಗೆ ಕಾವಳದೊಳು ಹುಲುಸರವೆ
ತುಳಿದರೆ ಮನಸಿಗೆ ಪೊಳೆವೋದು ಫಣಿಯೆಂದು
ಅಳುಕದಗೇ ಶರಧಿ ಮೊಳಕಾಲುದ್ದವೊ
ಅಳುಕುವದ್ಯಾಕೋ ನಿನ್ನಯ ಭೀತಿಗೆ
ಕುಲಿಶ ಪಾಪದ ಗಿರಿಗೆ ವಿಜಯ ವಿಠಲರೇಯ
ಕಲಕಾಲದಂತೆ ನೋಡದ ಪರಿಯೇನೋ ॥ ೪ ॥

### ತ್ರಿಪುಟ ತಾಳ

ಬಾಗಿಲ ಕಾಯಿಸಿದ ಹಾಗ ಕೊಡದೆ ಬಲಿ
ಯೋಗಿ ನಾರದನು ಸ್ತ್ರೀಯಳ ಶೋಧಿದ ।
ಭಾಗೀರಥೀ ಸುತನು ನಿನ್ನ ಪಂಥವಕಳೆದ
ಅನುಜೆಯ ಕದ್ದೊಯ್ದ ಜೋಗಿಯಾಗಿ ಪಾರ್ಥ ।
ನಾಗರಾಜನು ನಿನ್ನ ಕಚ್ಚಿ ಕಂಗೆಡಿಸಿದ
ಹೀಗಿದ್ದವರ ಬಿರಳ ಬಾಗಿಸಿದ್ದದ್ದೇನೋ ।
ನೀಗತಿ ಯೆಂದರೆ ಎನ್ನ ನಂಜಿಸದ್ಯಾಕೊ
ಭಾಗವತ ಜನಪ್ರಿಯ ವಿಜಯ ವಿಠಲರೇಯ ॥ ೩ ॥

### ಅಟ್ಟ ತಾಳ

ಸೂತಪತಿಯ ಉದುರದಿ ಬಂದವನಿಗೆ
ಖ್ಯಾತಿಯಾತಕೊ ಇಷ್ಟು ಭೂತಳದೊಳಗೆ ।
ದೂತನಾಗಿ ಪೋಗಿ ಹಸ್ತಿನ ಪುರದಲ್ಲಿ
ಬೂತಿಗಳಿಂದಲಿ ಬಿಗಿಸಿ ಕಟ್ಟಿಸಿಕೊಂಡೆ ।
ಯಾತಕೊ ನಿನಗಿಷ್ಟು ಬಿಂಕದ ಮಾತಿನ್ನು
ಭೀತಿಗೊಂಡವರಿಗೆ ತೃಣ ಮೇರುವಾದಂತೆ ।
ಕೋತಿ ಕೊರವಂಗೆ ಸಿಕ್ಕಿದಂತಿಹೆ ನಾನು
ಈ ತೆರದಲಿ ಎನ್ನ ಕಾತುರಗೊಳಿಪರೆ ।
ಜಾತಿಯಿಲ್ಲದ ನಿತ್ಯ ಜಾತರಹಿತ ಮಹಾ
ಭೂತ ವಿಜಯ ವಿಠಲ ನೀತವೆ ನಿನಗಿದು ॥ ೪ ॥

### ಆದಿ ತಾಳ

ಒದ್ದವನು ಒದ್ದೇಪೋದ । ಮೆದ್ದವನು ಮೆದ್ದೇಪೋದ
ಕದ್ದವನು ಕದ್ದೇಪೋದ । ಗೆದ್ದವನು ಗೆದ್ದೇಪೋದ ।
ಇದ್ದವನು ಇದ್ದೇಪೋದ । ಗದ್ದುಗೆ ನೀಡಿದವ
ಹೊದ್ದಿದ ನಿನ್ನ ಮರೆಯು । ಸಿದ್ಧದಾಯಕ ವಿಜಯ ವಿಠಲ ।
ಬಿದ್ದೆ ನಿನ್ನ ಬಲಿಗೆ ಪೊದ್ದು ಎನ್ನ ಕಾಣೆ । ನಿ
ಷಿದ್ಧವೆಂದಿಗು ಕಾಣೆ ॥ ೫ ॥

**ಜತೆ**

ಕಂಡವರಿಗೆ ಮುನ್ನೇ ಪ್ರಾಯಶ್ಚಿತವೆ ಇಲ್ಲ
ಕುಂಡಲಿ ಶಯನ ಶ್ರೀ ವಿಜಯ ವಿಠಲ ಗೊಲ್ಲ || ೧ ||

ಲೋಕದಲ್ಲಿ ಜ್ಞಾನಿಗೂ ಭಕ್ತನಿಗೂ ಮಹದಂತರವಿರುತ್ತದೆ. ಜ್ಞಾನಿಯ ಪರಮಾವಧಿ ಜ್ಞಾನವೆಂದರೆ ತನ್ನ ಬಿಂಬರೂಪಿ ಪರಮಾತ್ಮನನ್ನು ತನ್ನೊಳಗೆ ನೋಡುವುದು. ಯೋಗಿಗಳ ಮಾತಿನಿಂದ ಹೇಳಿದರೆ ಜ್ಯೋತಿ ದರ್ಶನ ಮಾಡುವುದು. ಅಂದರೆ ತನ್ನೊಳಗಿರುವ ಆತ್ಮಜ್ಯೋತಿ ಮಿಂಚಿನಂತೆ ಹೊಳೆವುದನ್ನು ಕಾಣುವುದು. ಆ ಜ್ಯೋತಿಯನ್ನು ವೇದದಲ್ಲಿ— "**ಸ ಬ್ರಹ್ಮಾ ಸ ಶಿವಃ ಸ ಹರಿಃ ಸೇಂದ್ರಃ ಸೋಽಕ್ಷರಃ ಪರಮಃ ಸ್ವರಾಟ್**" ಎಂಬದಾಗಿ ಸರ್ವ ಶಬ್ದ ವಾಚ್ಯವೆಂದು ಕರೆದಿರುವರು. ಇಂತಹ ತೇಜೋ ದರ್ಶನ ಮಾಡಿದ ಜ್ಞಾನಿಯು ಜನನ ಮರಣ ರಹಿತನಾಗಿ ತೃಪ್ತನಾಗಿ ಇರುತ್ತಾನೆ. ಯಾವ ಪುರಾಣೇತಿಹಾಸಗಳಲ್ಲಿ ನೋಡಿದರೂ ಜ್ಞಾನಿ ಮೌನಿಯಾಗಿರುವುದು ಕಂಡು ಬರುತ್ತದೆ. ಜ್ಞಾನಿ ಭಕ್ತನೂ ಆಗಿದ್ದರೆ ಜನರೊಡನಾಡುತ್ತಾನೆ. ಹೆಚ್ಚು ಪ್ರಮಾಣದಿಂದ ಜನರ ಉದ್ಧಾರ ಮಾಡುತ್ತಾನೆ; ಭಕ್ತನೆಂದೇ ಪ್ರತ್ಯೇಕ ಕರೆಸಿಕೊಂಡವನು ಜ್ಞಾನಿಯಂತೆ ತನ್ನೊಳಗೂ ದೇವರನ್ನು ಕಾಣುತ್ತಾನೆ; ಹೊರಗೂ ದೇವರ ದಿವ್ಯ ಲೀಲಾ ವಿಭೂತಿಗಳನ್ನನುಭವಿಸುತ್ತಾನೆ; ಮತ್ತು ಲೋಕವನ್ನುದ್ಧರಿಸುತ್ತಾನೆ. ಅಂತಹ ಭಕ್ತನಿಗೆ ದೇವರೂ ಭಕ್ತನಂತೆ ನಡೆದುಕೊಳ್ಳುತ್ತಾನೆ. ಹಾಗೆ ನಡೆದುಕೊಂಡ ಚರಿತ್ರೆಗಳು ಹರಿದಾಸರ ಜೀವಿತದಲ್ಲಿ ಅವರವರೇ ಹಾಡಿದ ದೇವರ ನಾಮಗಳಿಂದ ತಿಳಿದುಬರುತ್ತವೆ.

ನಾಹಂ ವಸಾಮಿ ವೈಕುಂಠೇ ನ ಯೋಗೀ ಹೃದಯೇ ರವೌ
ಮದ್ಭಕ್ತಾ ಯತ್ರ ಗಾಯಂತೇ ತತ್ರ ತಿಷ್ಠಾಮಿ ನಾರದ ॥ ೧ ॥

ತಾ॥ ನಾನು-ವೈಕುಂಠದಲ್ಲಿ ವಾಸಮಾಡುವದಿಲ್ಲವೆಂದಲ್ಲ, ಯೋಗಿಗಳ ಹೃದಯದಲ್ಲಿ ವಾಸ ಮಾಡುವದಿಲ್ಲವೆಂದಲ್ಲ, ಸೂರ್ಯನಲ್ಲಿ ವಾಸ ಮಾಡುವದಿಲ್ಲವೆಂದಲ್ಲ; ನನ್ನ ಭಕ್ತರು ಎಲ್ಲಿ ಗಾನ ಮಾಡುವರೋ ಅಲ್ಲಿ ವಿಶೇಷತಃ

ವಾಸಮಾಡುತ್ತೇನೆ, ಎಂಬಂತೆ ಈ ಸಂದಿಗ್ಧ ವಿಷಯದ ಅರ್ಥವನ್ನು ಮಾಡಿ ಕೊಳ್ಳಬೇಕು. ಈ ದೃಷ್ಟಿಯಿಂದ ಭಕ್ತನ ದೊಡ್ಡಸ್ತಿಕೆಯನ್ನು ನೋಡ ಬೇಕು. ಭಕ್ತಿಯ ಸ್ಥಾನಮಾನಗಳನ್ನು ಅರ್ಥಮಾಡಿಕೊಳ್ಳಬೇಕು.

ಭಕ್ತನು ಹೇಗಿದ್ದರೂ ದೇವರಿಗೆ ಬೇಕಾದವ. ದೇವರಿಗೆ ಬೇಕಾದವನಲ್ಲಿ ದೋಷಗಳಿರುವುದಿಲ್ಲ. ಲೌಕಿಕ ಗುಣ ದೋಷಗಳ ಅಳತೆಯಲ್ಲಿ ಭಕ್ತನನ್ನು ಅಳೆಯುವುದು ಉಚಿತವಲ್ಲ. ಲೋಕ ದೃಷ್ಟಿಯ ದೋಷಗಳು ದೇವರ ದೃಷ್ಟಿ ಯಲ್ಲಿ ದೋಷಗಳಲ್ಲವೇ ಎಂಬ ಸಂಶಯವಿದ್ದರೆ ಅದು ಕೆಳಕಂಡ ವಿಜಯ ದಾಸರ ಸುಳಾದಿಯಿಂದ ಪರಿಹಾರವಾಗುತ್ತದೆ.

### ಸುಳಾದಿ

#### ಧ್ರುವ ತಾಳ

ಎಲ್ಲಿದ್ದರೇನು ಶಿರಿವಲ್ಲಭನ ತೊಂಡರಿಗೆ
ಇಲ್ಲವಿಲ್ಲವೊ ದೋಷ ಎಳ್ಳನಿತಾದರು ।
ಕೊಳ್ಳಿಗೆ ಕ್ರಿಮಿಗಳು ಚಲ್ಲವರಿದು ಮುತ್ತಿ
ನಿಲ್ಲದೆ ಬದುಕಿ ತಾವೆಲ್ಲ ಪೋಪುದುಂಟೆ ?
ಸೊಲ್ಲು ಸೊಲ್ಲಿಗೆ ರಂಗನಲ್ಲ ದಿನ್ನಿಲ್ಲವೆಂಬ
ಬಲ್ಲಿದ ಭಕ್ತಿಯುಳ್ಳ ಭಕ್ತರಿಗೆ ।
ಎಲ್ಲಿಯ ದೋಷ ಮತ್ತೆಲ್ಲಿಯ ಜನನ
ಬಲ್ಲವರಿಗೆ ಧ್ಯಾನದಲ್ಲಿ ಆನಂದವು ।
ಚಿಲ್ಲರೆ ಮಾರ್ಗ ಬಿಡಿಸಿ ವಿಜಯ ವಿಠಲರೇಯ
ಸಲ್ಲಿಸುವನು ತನ್ನಲ್ಲಿ ಮನವನಿಡಲು ॥ ೧ ॥

#### ಮಟ್ಟತಾಳ

ತಪ್ಪದೆ ಎಣ್ಣೆಯ ಕೊಪ್ಪರಿಗೆಯೊಳವನ
ಅಪ್ಪನು ಬಿಸುಡಿಸಲು ಪುಷ್ಪಗಳಾದವು ।
ಸರ್ಪತಲ್ಪನ ಭಜಿಸುತಿಪ್ಪ ಮಹಾತ್ಮರಿಗೆ
ಕಪ್ಪು ಕಲುಷ ಹಾರುತಿಪ್ಪವು ಪುಡಿಯಾಗಿ ।

ಮುಪ್ಪಿಲ್ಲದ ದೈವ ವಿಜಯ ವಿಠಲ್ಲ ಶ್ರೀ
ನ್ಯಾಪ್ಪನ ನೆನೆಯಲು | ಟಪ್ಪುದು ಕೈವಲ್ಯ ॥ ೨

### ತ್ರಿಪುಟತಾಳ

[illegible] ನಜಿಹರ್ಯೇನು ಧರ್ಮ ಮಾಡಿದರೇನು
[illegible] ನಿತ್ಯ ತಿರುಗಲೇನು |
[illegible] ಹೊತ್ತರೇನು [illegible] ಮಾಡಿದರೇನು
[illegible] ಮಾಡನಾಡಲೇನು |
ವಾರಿಗ್ಯವರ ಕೂಡ ಹರಿದಾಡಿದರೇನು
ನೀರ ಕಾವಡಿ ನಿತ್ಯ ಹೊತ್ತರೇನು |
ನೂರಾರು ಬಾರಿಗೆ ಉಂಡು ತಿಂದರೇನು
ನಾರಿಯೊಡನೆ ಸಂಸಾರ ಮಾಡಿದರೇನು |
ಪೋರರೊಡನೆ ಕೂಡಿ ಕುಣಿದಾಡಿದರೇನು
ಆರ ಸೇರಿದರೇನು ಆರ ಸೇವಿಸಲೇನು |
ನಾರಾಯಣನ ಪಾದದಲ್ಲಿ ಹಗಲು ಇರುಳು
ಸೇರುತ ಮನವಿಟ್ಟ ದಾಸರಿಗೆ |
ಸೂರೆ ವೈಕುಂಠವೊ ಅವರ್ಹಿಂದೆ ಸುತ್ತಲು
ದಾರಿಯೊ ಕನಕದ ಮಳೆ ಕಾಮಧೇನುವೊ |
ಸಾರ ಹೃದಯರೊಳಿಪ್ಪ ವಿಜಯ ವಿಠಲನ
ಕಾರುಣ್ಯವಾದರೆ ಘೋರ ಕರ್ಮಗಳುರಟಿ ॥ ೩

### ಅಟ್ಟತಾಳ

ಜಾತ ರಹಿತ ಶ್ರೀನಾಥನ ಪಾದವ
ಆತುಮದೊಳಗಿಟ್ಟು ಮಾತು ಮಾತಿಗೆ ಬಲು |
ಪ್ರೀತೀಲಿ ಲಕುಮಿಶ ಮಾತಾಪಿತನು ಸರ್ವ
ವೀತನೆ ನಮಗೆಂದು ತಾ ತಿಳಿದವರಿಗೆ |
ಯಾತಕೆ ಸ್ನಾನ ಸಂಧ್ಯಾನ ಕರ್ಮಂಗಳು
ಪ್ರಾತರಾರಂಭ ದಿನಾಂತವಿಡಿದು ಮುಯ್ಯ |

ಘಾತಿಸಿಕೊಂಡೀಗ ಬತ್ತಿ ಬಳಲುವದ್ಯಾಕೆ
ದಾತನಂತಿಪ್ಪನು ವಿಜಯ ವಿಠಲ ಸುರ ।
ವ್ರಾತಕ್ಕೆ ಮೀರಿದ ಆತನೆ ಸರ್ವೇಶ ॥ ೪ ॥

ಆದಿತಾಳ

ನಿಂತಲ್ಲಿ ಕುಳಿತಲ್ಲಿ ಪಜ್ಜೆ ಸಾಗಿದಲ್ಲಿ
ಪಂಥದಲ್ಲಿ ಏಕಾಂತದಲಿ ।
ಕಾಂತೆ ಸಂಗಡದಲ್ಲಿ ಸಂತರ ಬಳಿಯಲ್ಲಿ
ತಂತಿನಲ್ಲಿ ವನಾಂತದಲಿ ।
ತಂತು ವಾಸಗಳಲ್ಲಿ ಪಂಥ ಮಾಡುವಲ್ಲಿ
ಭ್ರಾಂತಿಯಲಿ ನಿಶ್ಚಿಂತೆಯಲಿ ।
ಸಂತತ ಹರಿಪಾದಾ ಕ್ರಾಂತನಾಗಿ ತನ್ನ
ಸಂತರಿಸುವನ ನಿರಂತರದಲ್ಲಿ ।
ಅಂತರಂಗದೊಳಿಟ್ಟು ಅಂತರಮುಖನಾಗಿ
ಸಂತತ ಪಾಡುವ ಅಂತ್ಯಜಗೂ ಭಯ ।
ವೆಂತುಂಟು ಪೇಳಿರೊ ವಿಜಯ ವಿಠಲನಂಘ್ರಿ
ಚಿಂತೆ ಮಾಡುವ ಕುಲವಂತಗೆ ಭಯವೇ ॥ ೫ ॥

ಜತೆ

ಹ್ಯಾಗಾದರಿರಲಿ ಶ್ರೀ ವಿಜಯ ವಿಠಲನಂಘ್ರಿ
ಯೋಗದಲ್ಲಿದ್ದವನೆ ಮುಕ್ತಿ ಪಥಕೆ ಯೋಗ್ಯ ॥ ೧ ॥

——೦——

## ಆತ್ಮನಿವೇದನ ಭಕ್ತಿ

ಆತ್ಮನಿವೇದನವು ಎಲ್ಲಕ್ಕೂ ಹಿರಿದಾದ ಕಡೆಯ ಭಕ್ತಿ. "ನಾಹಂ ಕರ್ತಾ ಹರಿಃ ಕರ್ತಾ ತತ್ಪೂಜಾ ಕರ್ಮ ಚಾಖಿಳಂ" ಎಂಬುದರಲ್ಲಿ ಆತ್ಮ ನಿವೇದನ ಭಕ್ತಿ ಅಡಗಿದೆ. "ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ

ಶರಣಂ ವ್ರಜ। ಅಹಂ ತ್ವಾ ಸರ್ವ ಪಾಪೇಭ್ಯೋ ಮೋಕ್ಷ ಯಿಷ್ಯಾಮಿ ಮಾಶುಚಃ" ಎಂಬ ಗೀತೆಯ ಚರಮ ಶ್ಲೋಕಕ್ಕೆ "ಆತ್ಮನಿವೇದನ" ಎಂಬ ಶಬ್ದವು ಸೂತ್ರದಂತಿದೆ. "ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿಯುತ್। ಯತ್ತಪಸ್ಯಸಿ ಕಾಂತೇಯ ತತ್ಕುರುಷ್ವಮದರ್ಪಣಂ" ಎಂಬ ಶ್ಲೋಕಾರ್ಥಕ್ಕೆ ಫಲರೂಪವಾಗಿರುವುದು ಆತ್ಮನಿವೇದನ ಭಕ್ತಿಯಾಗಿದೆ. ಶ್ರೀಮದ್ರಾಮಾಯಣದಲ್ಲಿ ಶ್ರೀ ರಾಮಚಂದ್ರನು ಅಪ್ಪಣೆ ಕೊಡಿಸಿದ "ಸಕೃ ದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ। ಅಭಯಂ ಸರ್ವಭೂತೇ ಭ್ಯೋ ದದಾಮ್ಯೇ ತದ್ವ್ರತಂ ಮಮ" ಎಂಬ ಶ್ಲೋಕಾರ್ಥದಂತೆ ದೊರೆ ಯುವ ಅಭಯವು ಆತ್ಮನಿವೇದನದ ಫಲವಾಗಿದೆ. ವಾತ್ಸಲ್ಯಾದಿ ಇತರ ಭಾವ ಗಳಿಂದ—ಸ್ತಂಭನ, ಸ್ವೇದ, ರೋಮಾಂಚ, ಸ್ವರಭಂಗ, ವೈವರ್ಣ್ಯ, ಅಶ್ರು, ಪ್ರಲಯ, (ಸ್ತ್ರೀಯಾಗಿದ್ದರೆ) ಸ್ತನ್ಯ ಸ್ರವಗಳುಂಟಾಗುತ್ತವೆ. ಆತ್ಮನಿವೇದನ ಭಕ್ತಿಯಿಂದ ಹಿಂದೆ ನಾಶವಾಗಿದ್ದ ಸಂಚಿತಾಗಾಮಿ ಕರ್ಮಗಳ ಜೊತೆಗೆ ಪ್ರಾರಬ್ಧವೂ ನಷ್ಟವಾಗಿ ತನ್ನನ್ನು ತಾನು ಮರೆದ ನಿತ್ಯಾನಂದದ ಸ್ಥಿತಿ ಪ್ರಾಪ್ತ ವಾಗುತ್ತದೆ. ಮತ್ತವನಿಗೆ ಕರ್ಮ ಲೇಪವಾಗುವುದಿಲ್ಲ; ವಾಸನೆಗಳಿರುವುದಿಲ್ಲ. ಅನೇಕ ಜನ್ಮಗಳಲ್ಲಿ ಮಾಡಿದ ಭಕ್ತಿಸಾಧನೆಗೆ ಫಲ ಈ ಮಹಾನಂದ. ಇಂತಹ ಭಕ್ತನಿಗೆ ಪುನರ್ಜನ್ಮವಿಲ್ಲ.

ಆದರೆ—ಈ ಪದವಿಗೇರಿದ ಭಕ್ತನು ಮತ್ತೆ ಪ್ರಪಂಚದಲ್ಲಿರುವದಿಲ್ಲವೆ? ಜನರೊಡನೆ ವ್ಯವಹರಿಸುವುದಿಲ್ಲವೆ? ಆರ್ತರಾದ ಪಾಮರರಿಗೆ ಮಾರ್ಗದರ್ಶಕ ನಾಗುವುದಿಲ್ಲವೆ? ಎಂಬ ಪ್ರಶ್ನೆ ಸಹಜವಾಗಿ ಬರಬಹುದು. ಉತ್ತರವು ನಿರಾಶೆಯನ್ನುಂಟುಮಾಡುವಂತಿಲ್ಲ. ಈ ಬಗೆಯ ಭಕ್ತರು ಪರಮಾನಂದ ಸಾಮ್ರಾಜ್ಯವನ್ನನುಭವಿಸುತ್ತಿದ್ದರೂ ಪರಮಾತ್ಮನ ಇಚ್ಛೆಯಿಂದ ಪ್ರಪಂಚದ ಲ್ಲಿರುತ್ತಾರೆ. ತಮ್ಮ ವೇಷ ಭಾಷೆಗಳಿಂದ ತಮ್ಮನ್ನು ಇತರರಿಗೆ ತಿಳಿಸಿಕೊಳ್ಳ ದಂತಿರುತ್ತಾರೆ. ಮೂಕರಂತೆ ಬಧಿರರಂತೆ ಕಾಣಿಸುತ್ತಾರೆ. ಇದ್ದಕ್ಕಿದ್ದ ಹಾಗೆ ನಗುತ್ತಾರೆ, ಅಳುತ್ತಾರೆ, ನಲಿಯುತ್ತಾರೆ. ಯೋಗ್ಯ ಭಕ್ತ ದೊರೆತರೆ ಅವನನ್ನೂ ತಮ್ಮಂತೆ ಮಾಡಿ ಕೃತಾರ್ಥನಾದೆನೆನ್ನುತ್ತಾರೆ. ಈ ಭಕ್ತರ ಇರು ವಿಕೆಯನ್ನು ಜಗನ್ನಾಥ ದಾಸರು ಹೀಗೆಂದು ವರ್ಣಿಸಿರುತ್ತಾರೆ.

ರಾಗ ಪೀಲು ಆದಿತಾಳ

ರಂಗ ನಿನ್ನ ಕೊಂಡಾಡುವ ಮಂಗಳಾತ್ಮರ । ಸಂಗ ಸುಖವಿತ್ತು ಕಾಯೊ
ಕರುಣಾಸಾಗರ ॥ ಪ ॥

ಅರಿಯರೊ ನೀನಲ್ಲದೆ ಮತ್ತನ್ಯ ದೇವರ । ಮರೆಯರೋ ನೀ ಮಾಡಿದಂಥ
ನಿತ್ಯೋಪಕಾರ
ತೊರೆಯರೊ ನಿನ್ನಂಘ್ರಿಸೇವ ಪ್ರತಿವಾಸರ । ಅರಿಯರೊ ಪರತತ್ವವಲ್ಲದೆ
ಇತರ ವಿಚಾರ ॥ ೧ ॥

ಮೂಕ ಬಧಿರರಂತಿಪ್ಪರು ನೋಳ್ಪ ಜನಕೆ । ಕಾಕು ಯುಕುತಿಗಳನವಹು
ತಾರರೋ ಮನಕೆ
ಸ್ವೀಕರಿಸರನರ್ಪಿತ ಒಂದು ಕಾಲಕ್ಕೇ । ಆ ಕೈವಲ್ಯ ಭೋಗಸುಖ ಆವರಿಗೆ
ಬೇಕೇ ॥ ೨ ॥

ಜಯಾಜಯ ಲಾಭಾಲಾಭ ಮಾನಾಪಮಾನ । ಪ್ರಿಯಾಪ್ರಿಯ
ನಿಂದಾಸ್ತುತಿಗಳನುದಿನ
ಭಯಾಭಯ ಸುಖದುಃಖ ಲೋಷ್ಟಕಾಂಚನ । ಶ್ರೀಯರಸ ಚಿಂತಿಸುವರು
ನಿನ್ನ ಅಧೀನ ॥ ೩ ॥

ಈಶಿತವ್ಯರೆಂಬರು ಏಕಾಂತ ಭಕ್ತರು । ದೇಶಕಾಲೋಚಿತ ಧರ್ಮಾಕರ್ಮಾಸಕ್ತರು
ಆಶಾಕ್ರೋಧ ಲೋಭ ಮೋಹ ಪಾಶ ಮುಕ್ತರು । ಈ ಸುಜನರೇ
ಶಾಪಾನುಗ್ರಹ ಶಕ್ತರು ॥ ೪ ॥

ಕಂಡ ಕಂಡಲ್ಲಿ ವಿಶ್ವರೂಪ ಕಾಂಬರು । ಉಂಡು ಉಣಿಸಿದ್ದು ನಿನ್ನ
ಯಜ್ಞವೆಂಬರು
ಬಂಡುಣಿಯಂದದಿ ನಾಮಾಮೃತವ ಸವಿವರು । ಹೆಂಡರು ಮಕ್ಕಳು ನಿನ್ನ
ದಾಸರೆಂಬರು ॥ ೫ ॥

ಬಿಡರು ತಮ್ಮ ಸ್ವಧರ್ಮಗಳ ಏನು ಬಂದರು । ಬಡರು ದೈನ್ಯ ಒಬ್ಬರಿಗು
ಲೋಕವಂದ್ಯರು
ಪಿಡಿಯರು ನಿನ್ನ ದ್ವೇಷಿಗಳಿಂದ ಏನು ಬಂದರು । ಕೊಡುವರು ಬೇಡಿ
ದಿಷ್ಟಾರ್ಥ ನಿತ್ಯಾನಂದರು ॥ ೬ ॥

ನಗುವರೊ ರೋದಿಸುವರೊ ನಾಟ್ಯವಾಡೋರೋ । ಬಗೆಯರು ಬಡತನ ಭಾಗ್ಯ ಭಾಗವತರು
ತೆಗೆಯರೊ ನಿನ್ನಲ್ಲಿ ಮನ ವಮ್ಮೆಗಾದರು । ಜಗನ್ನಾಥ ವಿಠಲ ನಿನ್ನ ವರೇನು ಧನ್ಯರೊ ॥ ೭ ॥

ಇಂತಹ ಭಕ್ತರ ಮಾತುಗಳು ಹೇಗಿರುವವೆಂಬುದನ್ನು ಕೆಳಕಂಡ ವಿಜಯ ದಾಸರ ಸುಳಾದಿಯಲ್ಲಿ ನೋಡಬಹುದು.

### ಧ್ರುವತಾಳ

ನೀ ನುಡಿದರಾವು ನುಡಿವೆವಯ್ಯ
ನೀ ನಡೆದರಾವು ನಡೆವೆವಯ್ಯ ।
ನೀ ಪಿಡಿದರಾವು ಪಿಡಿವೆವಯ್ಯ
ನೀ ತಡೆದರಾವು ತಡೆವೆವಯ್ಯ ।
ನೀ ನಿರ್ದಯನಾಗೆ ಅಜಭವಾದಿಗಳು
ಕಾಣಿಗೆ ಬಾರದೆ ಪೋಪರಯ್ಯ ।
ನೀನೆ ಸ್ವತಂತ್ರ ಅನಾದಿ ಪುರುಷನಯ್ಯ
ನೀನೆ ಜ್ಞಾನಗಮ್ಯ ವಿಜಯ ವಿಠಲರೇಯ ॥ ೧ ॥

### ಮಟ್ಟತಾಳ

ಅನ್ಯರೊಳು ನೀನೆ । ನಿನ್ನೊಳು ನೀನೆ
ಎನ್ನೊಳು ನೀನೆ । ತನ್ಮಯ ನೀನೆ ।
ಧ್ಯಾನ ಗಮ್ಯನು ನೀನೆ । ಜ್ಞಾನ ಮಹಿಮನು ನೀನೆ
ವಿಜಯ ವಿಠಲ ನೀನೆ । ಅಣುರೇಣು ನೀನೆ ।
ಘನತಮನು ನೀನೆ ॥ ೨ ॥

### ತ್ರಿಪುಟತಾಳ

ಬಂದವನು ನೀನೆ ಭಕತರಾ ಹೃದಯ
ಮಂದಿರಾದಲ್ಲಿ ವಿಠಲಮೂರ್ತಿ ನೀನೆ ।

ನಿಂದವನು ನೀನೆ ಶೇಷ ಪರ್ವತದಲ್ಲಿ
ಛಂದದ ಸುಂದರ ತಿರುವೆಂಗಳಾ ನೀನೆ ।
ಒಂದೆರಡುಮೂರು ಎರಡು ಒಂದು ಎನಿಸಿ
ಮಂದಮತಿಗೆ ಆಶ್ಚರ್ಯ ತೋರುವ ನೀನೆ ।
ಒಂದಕ್ಕೊಂದಾನಂತ ವಿಜಯ ವಿಠಲ ನೀನೆ ॥ ೩ ॥

### ಜಂಪೆತಾಳ

ನಿನಗೆ ನೀನೆ ಐಕ್ಯ । ನಿನಗೆ ನೀನೆ ಭೇದ
ನಿನಗೆ ನೀನೆ ಮಾತು । ನಿನಗೆ ನೀನೆ ಕಥೆ ।
ನಿನಗೆ ನೀನೆ ಸ್ತ್ರೀಯು । ನಿನಗೆ ನೀನೆ ಪುರುಷ
ನಿನಗಲ್ಲದೆ ಉಂಟೆ । ಬಿನುಗು ದೈವಂಗಳಿಗೆ ।
ಅನಘ ವಿಜಯ ವಿಠಲ ।
ನಿನಗೆ ನೀನೆ ಆಳು । ನಿನಗೆ ನೀನೆ ಧೊರೆಯು ॥ ೪ ॥

### ಜತೆ

ನೀನೆ ನೀನೆ ನೀನೆ ನಾನೆಂಬ ಮಾತಿಲ್ಲ
ನೀನೆ ನೀನೆ ವಿಜಯ ವಿಠಲ ಎಲ್ಲಾ ನೀನೆ ॥ ೧ ॥

### ಇದೇ ಅರ್ಥದಲ್ಲಿ ಇನ್ನೊಂದು ಸುಳಾದಿ
### ಧ್ರುವತಾಳ

ಸರ್ವ ಸಮರ್ಪಣೆ ಮಾಡಿ ಮುಕ್ತನಾಗು
ಸರ್ವಾಧಿಷ್ಠಾನದಲ್ಲಿ ಹರಿಯ ತಿಳಿದು ।
ದರ್ವಿ ಯಂದದಿ ಸರ್ವ ವಿಷಯಂಗಳೊಳಗಿದ್ದು
ನಿರ್ವಾಹ ಕರ್ತನಾಗು ಮನ ವೊಪ್ಪಿಸಿ ।
ಓರ್ವನಿಂದಲಿ ಎಲ್ಲಾ ಸುಖದುಃಖ ಬಪ್ಪುದೆಂದು
ನಿರ್ಲೇಪನಾಗಿ ನೀ ತಿರುಗುತಿರು ।
ಸರ್ವೋತ್ಕೃಷ್ಟಮೂರ್ತಿ ವಿಜಯ ವಿಠಲನು
ಸರ್ವಭಾರ ವಹಿಸಿ ನಿನ್ನ ಪೊರೆವ ॥ ೧ ॥

### ಮಟ್ಟತಾಳ

ನಾನೆ ಸರ್ವ ಕರ್ತನೆಂಬುವ ತಮಸಿ
ನಾನೆ ಹರಿಯೊಡನೆ ಮಾಳ್ಪೆನೆಂಬನೆ ಬದ್ಧ ।
ನಾನೆ ಪಾಪಕೆ ಕರ್ತ ಹರಿ ಪುಣ್ಯಕೆಂದು
ಈ ನುಡಿ ನುಡಿದವನು ಸತ್ವಗುಣದವನು ।
ನಾನ್ಯಾತಕೂ ಸಲ್ಲೆ ಹರಿ ಎನ್ನೊಳು ನಿಂತು
ಹೀನ ಲೇಸುಗಳೆಲ್ಲ ಹಿತ ಅಹಿತವನೆಲ್ಲ ।
ನಾನಾ ರೂಪದಿ ನಿಂದು ತಾನೆ ಕರ್ತನಾಗಿ
ಮಾಣದೆ ನಡೆಸುವನೆಂದವ ನಿರ್ಗುಣ ।
ಸ್ವಾನುಭವಕೆ ತಂದು ಈ ವಿವರವನೆಲ್ಲ
ಅನ್ನಂತ ವಿಜಯ ವಿಠಲಗೊಪ್ಪಿಸು ನೀನು || ೩ ||

### ತ್ರಿಪುಟತಾಳ

ಹಿಟ್ಟು ಗಾಳಿಗೆ ತೂರಿ ಮರಳಿ ಕೂಡಿಸಿಕೊಂಡು
ರೊಟ್ಟಿ ಸುಟ್ಟುಕೊಂಡು ಉಂಬೆನೆಂದು ।
ಅಟ್ಟಹಾಸ ಮಾಡಿ ದಿನ ಪ್ರತಿದಿನದಲ್ಲಿ
ಕಷ್ಟಪಟ್ಟಂದು ಫಲವಾಹದೆ ।
ಸೃಷ್ಟಿಯೊಳಗೆ ಮನುಜ ಸರ್ವ ಬಗೆಯಿಂದ
ಶಿಷ್ಟನಾಗಿ ಇದ್ದು ಆಚಾರವ ।
ಎಷ್ಟು ಮಾಡಿದರೇನೋ ನಿರ್ಗುಣನಾಗಿ ಮನ
ಮುಟ್ಟಿ ಸರ್ವಾರ್ಪಿತವೆನ್ನದನಕ ।
ಕೃಷ್ಣ ಮೆಚ್ಚನು ಕಣೋ ಗತಿಗೆ ಸಾಧಕವಲ್ಲ
ಇಷ್ಟರೊಳಗೆ ಅವ ಸುತ್ತುತಿಪ್ಪ ।
ಕಟ್ಟಕಡೆಗೆ ಇದೇ ಮುಕ್ತಿಗೆ ಜ್ಞಾನವೆಂದು
ಪುಟ್ಟದಲ್ಲದೆ ಬಿಂಬ ದರುಶನವಾಗದು ।
ಎಟ್ಟಮಾನವರಿಗೆ ಒರೆದೊರೆದು ಕೇವಲ
ಗುಟ್ಟು ತಿಳುಪಿದರಿಂದಲೇನಹದೋ ।
ಧಿಟ್ಟ ದೈವಗಳರಸ ವಿಜಯ ವಿಠಲ ಜಗ
ಜಟ್ಟಿಗೆ ಪಾಪದ ಲೇಪವೆಲ್ಲಿಹದೋ || ೩ ||

### ಅಟ್ಟತಾಳ

ಮುಜ್ಜಗದೊಳು ಹರಿ ನಿಬ್ಬಿಡೀಕೃತನಾಗಿ
ತಜ್ಜೀವಿಗಳಂತೆ ವ್ಯಾಪಾರ ಮಾಡುವ ।
ನಿರ್ಜರ ವಿಡಿದು ತೃಣಾಂತ ನೋಡಲಾಗಿ
ಪೂಜ್ಯ ಭಾವವು ಪ್ರತ್ಯೇಕವಾಗಿಪ್ಪುದು ।
ದುರ್ಜನ ಹರಹರಿ ಇನಿತು ಭಜನೆ ಕೆಲವು
ಸಜ್ಜನರಿಂದಲಿ ಕೈಕೊಳುತಿಪ್ಪನಿದಕೆ ।
ವ್ಯಾಜ್ಯಮಾಡಿದರೆ ಹರಿಗೆ ವ್ಯಥೆಯುಂಟೇ
ಅಬ್ಜ ಪೋಣಿಸಲು ಗಡಾರಿ ತರವಲ್ಲ ।
ಅಬ್ಜಭವನಯ್ಯ ವಿಜಯ ವಿಠಲರೇಯ
ಲಜ್ಜೆ ಬಿಡದವಗೆ ಲಂಪಟ ಕಟ್ಟುವ ॥ ೪ ॥

### ಆದಿತಾಳ

*ಬಂದರೆ ಬರುವೆನೆಂದು ಇದೆ ಆರಂಭಿಸಿ
ಒಂದೊಂದು ಮಾತುಗಳ ಯಾವಜ್ಜೀವ ।
ತಂದುಕೊಳಲಿಬೇಕು ಮನಸಿಗೆ ಬಿಡದನು
ಸಂಧಾನವನು ಅವಲ್ಲಿ ಪೋದಲ್ಲಿ ।
ಬಂದಲ್ಲಿ ನಿಂದಲ್ಲಿ ಕುಳಿತಲ್ಲಿ ನುಡಿವಲ್ಲಿ
ನಂದವಾಗಲಿ ಅತಿ ಕ್ಲೇಶವಾಗಲಿ ಗೋ ।
ವಿಂದ ನಿನ್ನ ಪ್ರೀತಿಯೆನಬೇಕು ನಗಬೇಕು
ಹಿಂದೆ ಇಂದು ಮುಂದೆ ಸಂಸಾರವೆಂಬ ।
ಸಂದಣಿಯೊಳಗಿರೆ ನಿರ್ಭಯದವ ನಿವ
ಸಂದೇಹ ಪೋಗಾಡುವ ವಿಜಯ ವಿಠಲರೇಯ ।
ಎಂದೆಂದಿಗೆ ತನ್ನ ದಾಸನ ಪೊರೆವ ॥ ೫ ॥

---

*ಬಂದರೆ ಬರುವೆ—ಹರಿ ಬಂದರೆ ಬರುವೆ. [illegible] ಸ್ವಾತಂತ್ರ್ಯದ ಮಾತಾಡಬೇಡ. ಹೀಗಿರಬೇಕು ಆತ್ಮ ನಿವೇದನ [illegible] ಅಭಿಪ್ರಾಯ.

ಜತೆ

ಸಾಧನಾಸಾಧನ ಹರಿಗೆ ಒಪ್ಪಿಸಿಕೊಟ್ಟು
ಮೋದದಲಿರು ವಿಜಯ ವಿಠಲನ ನೆರೆನಂಬಿ ‖ ೧ ‖

—o—

ಪರಮಾತ್ಮನ ಪ್ರೇಮ-ರಸದಲ್ಲಿ ಮುಳಗಿ "ರಸೋವೈಸಃ" ಎಂಬ ಉಪನಿಷದ್ವಾಕ್ಯದಂತೆ ಅವನೇ ಪ್ರೇಮ, ಪ್ರೇಮವೇ ಅವನು; ಅವನಿಗೂ ಅವನ ಗುಣಗಳಿಗೂ ಅಭೇದ; ಎಂದು ಭಗವಂತನನ್ನು ಉಪಾಸಿಸಿದ ಭಕ್ತರು, ತಮ್ಮ ಸ್ಥಾನವೇನು, ತಮಗಿರುವ ಸ್ವಾತಂತ್ರ್ಯವೇನು, ಎಂಬುದನ್ನು ಕೆಳಕಂಡಂತೆ ವಿವರಿಸುತ್ತಾರೆ.

ಸುಳಾದಿಯ ಒಂದು ತಾಳ

ತ್ರಿಪುಟ

ಕಲ್ಲು ಪ್ರತಿಮೆ ನಿಂದಿಪ್ಪುದಲ್ಲದೆ ತಾನು
ಸೊಲ್ಲು ಪೇಳುವದಿಲ್ಲ ನಗುವದಿಲ್ಲ ।
ಮೆಲ್ಲನೆ ಕಿವಿಗೊಟ್ಟು ಕೇಳುವದಿಲ್ಲ
ನಿಲ್ಲದೆ ಕೈತಿರುಹಿ ಕರೆವುದಿಲ್ಲ ।
ಎಲ್ಲಿಂದಲೋ ಜನರು ಪೋಗಿ ಬರುತ ನಿಂದು
ಪೊಳ್ಳಾಗದಂತೆ ವರವ ಕೊಡೆಂಬರು ।
ಬೆಲ್ಲ ಕಾಣಿಕೆಯಿತ್ತು ನಮಿಸುವರು ಮತ್ತೆ
ಸುಳ್ಳಾದರೆ ನೋಡದೆ ಹೋಗುವರು ।
ಕಲ್ಲು ಪ್ರತಿಮೆ ಯಿಂಥಾ ವರವ ಕೊಟ್ಟಿತೇನು
ಅಲ್ಲಿದ್ದ ಲಕುಮಿಶ ಅವರವರ ।
ಸೊಲ್ಲಿನೊಳಗೆ ತಿಳಿದು ಭಕುತಿಗೆ ವಶನಾಗಿ
ಸಲ್ಲಿಸುವನು ವರವ ಮನಸಿನಂತೆ ।
ಎಲ್ಲರು ಒಂದಾಗಿ ಕೊಡದಿರೆ ಸೈರಿಸದೆ
ಕಲ್ಲ ಬೈದರೆ ಅದು ಚಲಿಸುವದೆ ।

ಹಲ್ಲು ನಾಲಿಗೆ ಬಾಯಿ ಆಡಿತಲ್ಲದೆ ಜನಕೆ
ಎಳ್ಳನಿತು ಫಲವಿಲ್ಲ ವೀಚಾರಿಸೆ ।
ಕಲ್ಲಿನ ಪ್ರತಿಮೆಯಂದದಲಿ ಕಾಣೊ ನಾನು
ಬಲ್ಲವನೆನದಿರಿ ಅಜ್ಞಾನಿಯು ।
ಕಲ್ಲಿಗು ಎನಗೂ ಹೆಚ್ಚು ಕೊರತೆಯೆಂಬು
ದಿಲ್ಲವೊ ಇಲ್ಲವೊ ಚೇಷ್ಟೆ ಮಾತರವುಂಟು ।
ಮಲ್ಲಮರ್ದನ ನಮ್ಮ ವಿಜಯ ವಿಠಲರೇಯ
ಎಲ್ಲ ವಾಣಿಯ ನುಡಿಸಿ ಆರಾಧನೆಗೊಂಬ ॥ ೧ ॥

ಮೇಲ್ಕಂಡ ಸುಳಾದಿಯಿಂದ ವಿಜಯ ದಾಸರು ಜೀವನ ಸ್ವಾತಂತ್ರ್ಯ ವನ್ನು ಸ್ಪಷ್ಟೀಕರಿಸಿದ್ದಾರೆ. ಹೀಗೆ ನವವಿಧ ಭಕ್ತಿಗಳಲ್ಲಿ, ತದಂಗಗಳಾದ ವಾತ್ಸಲ್ಯ ವಿರಹ ಮಧುರ ಭಾವಗಳಲ್ಲಿ, ಸಾಧಕರಂತೆ ಸಾಧನೆ ಮಾಡಿ ಸರ್ವ ಸಮರ್ಪಣೆಯಿಂದ ಸಿದ್ಧರಾಗಿ, ಅಗಣಿತವಾಗಿ ದೇವರನಾಮ ಸುಳಾದಿ ಉಗಾ ಭೋಗಗಳನ್ನು ಹರಿದಾಸರು ಹಾಡಿ ಕನ್ನಡವನ್ನು ಕನ್ನಡಿ ಮಾಡಿಟ್ಟಿದ್ದಾರೆ. ಗಹನವಾದ ಶಾಸ್ತ್ರ ತತ್ವಗಳು ಅವರ ಭಾಷೆಯಲ್ಲಿ ಲಲಿತವಾಗಿ ಧಾರಳವಾಗಿ ಹರಿದು ಬಂದಿವೆ. ಉಪಲಬ್ಧವಿರುವವುಗಳಿಗೆ, ವೇದ ಶೃತಿಗಳನ್ನೂ ಶಾಸ್ತ್ರ ಪಙ್ತಿ ಗಳನ್ನೂ ಉದಹರಿಸಿ ಏಕ ವಾಕ್ಯತೆಯನ್ನು ತೋರಿಸಿ, ನೂರಾರು ವಹಿಗಳಲ್ಲಿ ಬರೆದು ಮುದ್ರಿಸಬೇಕೆಂದರೂ ಮುಗಿಯುವಂತಿಲ್ಲ. ಈ ಗ್ರಂಥದಲ್ಲಿ ನೋಡ ಬೇಕಾಗಿರುವುದು ತಂಬಿಗೆ ತೀರ್ಥದಲ್ಲಿ ಉದ್ಧರಣೆಯಷ್ಟು ಆಪೋಶನ ಹಾಕಿ ಕೃಷ್ಣಾರ್ಪಣವೆನ್ನುವಷ್ಟು ಮಾತ್ರ.

---

# ಅಧ್ಯಾಯ ೩

## ಜೀವನ ಸ್ವಾತಂತ್ರ್ಯ ಮತ್ತು ಸಾಧನೆ.

ಹಿಂದಿನ ಅಧ್ಯಾಯದಲ್ಲಿ ಮುಖ್ಯ ಹರಿದಾಸರುಗಳ ನೂರು ಉಗಾಭೋಗಗಳನ್ನು ಮಾದರಿಗಾಗಿ ಕೊಡಲ್ಪಾಯಿತು. ಹರಿದಾಸರ ಜ್ಞಾನ ಭಕ್ತಿ ವೈರಾಗ್ಯಗಳನ್ನು ಅವರ ಸುಳಾದಿಗಳಿಂದ ತಿಳಿಸಿದ್ದಾಯಿತು. ನವವಿಧ ಭಕ್ತಿಗಳ ಲಕ್ಷಣವನ್ನೂ ಮುಕ್ತಿಗೆ ಭಕ್ತಿಯೇ ಕಾರಣವೆಂಬುದನ್ನೂ ಅನೇಕ ಪದ ಸುಳಾದಿಗಳಿಂದ ವಿವರಿಸಲಾಯಿತು. ಆತ್ಮನಿವೇದನ ಭಕ್ತಿ ವಿವರಣೆಯ ಕೊನೆಯಲ್ಲಿ ಪ್ರಸಕ್ತ ಅಧ್ಯಾಯಕ್ಕೆ ಬೀಜಭೂತವಾದ ಜೀವ ಸ್ವಾತಂತ್ರ್ಯದ ಮಾತೆತ್ತಿ, ಆ ಅಧ್ಯಾಯವನ್ನು ಮುಗಿಸಿದುದಾಯಿತು ಈ ಅಧ್ಯಾಯದಲ್ಲಿ ಜೀವನ ಸ್ಥಾನಮಾನಗಳೇನು, ಅವನಿಗಿರುವ ಸ್ವಾತಂತ್ರ್ಯವೆಂತಹದು, ಎಂದು ಮೊದಲಾದ ಸಂಗತಿಗಳ ವಿವರವನ್ನು ಹರಿದಾಸರ ಮಾತುಗಳಿಂದಲೇ ತಿಳಿಸಲು ಪ್ರಯತ್ನಿಸುತ್ತೇವೆ.

" ತಸ್ಮಾತ್ ಶಾಸ್ತ್ರಂ ಪ್ರಮಾಣಂತೇ ಕಾರ್ಯಾಕಾರ್ಯ ವ್ಯವಸ್ಥಿತೌ " ಎಂಬ ರಾಜದಂಡದಂತಿರುವ ಭಗವದ್ವಾಕ್ಯದಂತೆ, ವೇದ ಶಾಸ್ತ್ರ ಪುರಾಣೇತಿಹಾಸಗಳಲ್ಲಿ ಹೇಳಿರುವ ಸೃಷ್ಟಿಮೊದಲಾದ ತತ್ವಗಳನ್ನು ನಂಬಿದವರು ಹರಿದಾಸರು. ವೇದಗಳಿಗೆ ಶಿರಸ್ಸಿನಂತಿರುವುದು ದಶೋಪನಿಷತ್ತುಗಳು. ಸಕಲ ವೇದಾರ್ಥಗಳನ್ನೂ ಅಡಗಿಸಿ ತಿಳಿಸುವುವು ಬ್ರಹ್ಮ ಸೂತ್ರಗಳು. ಉಪನಿಷತ್ತುಗಳ ಮತ್ತು ಬ್ರಹ್ಮ ಸೂತ್ರಗಳ ವ್ಯಾಖ್ಯಾನದಂತೆ ಸರಳ ಸುಂದರ ಭಾಷೆಯಲ್ಲಿ ಹರಿದು ಬಂದಿರುವುದು ಶ್ರೀಕೃಷ್ಣನ ಭಗವದ್ಗೀತೆ. ಈ ಮೂರು ಗ್ರಂಥಗಳನ್ನೂ ಪ್ರಸ್ಥಾನತ್ರಯಗಳೆಂದು ಗೌರವಿಸಿ, ಸಕಲ ವೈದಿಕ ಮತಾಚಾರ್ಯರುಗಳೂ ತಮ್ಮ ತಮ್ಮ ರೀತಿಯಿಂದ ಭಾಷ್ಯಗಳನ್ನು ಬರೆದಿರುತ್ತಾರೆ. ಭರತಖಂಡದ ಮತವೆಂದರೆ—ಹಿಂದೂ ಮತವೆಂದರೆ—ಇದಕ್ಕೆ ಬೇರೆಯಾದುದಿಲ್ಲ. ಭಾಷ್ಯಕಾರರಲ್ಲಿ ಸಹ ಕೆಲವು ಸೂಕ್ಷ್ಮ ತತ್ವಗಳಲ್ಲಿ ಅಭಿಪ್ರಾಯ ಭೇದವಿರು

ವದರ ವಿನಾ ಒಟ್ಟು ಶಾಸ್ತ್ರದಲ್ಲಿ ಭಿನ್ನಾಭಿಪ್ರಾಯವಿರುವುದಿಲ್ಲ. ಬ್ರಹ್ಮಸೂತ್ರಗಳಿಗಿಂತ, ಉಪನಿಷತ್ತುಗಳಿಗಿಂತ, ಪ್ರಶ್ನೋತ್ತರ ರೂಪವಾಗಿ ವಿರಳ ಸರಳವಾಗಿರುವ ಶ್ರೀಮದ್ಭಗವದ್ಗೀತೆಯಲ್ಲಿ ಜೀವಾತ್ಮರ ವಿಷಯವಾಗಿ ಅರ್ಜುನನಿಗೆ ಉಪದೇಶ ಮಾಡಿರುವ, ಕಾಠಕೋಪನಿಷತ್ತಿಗೆ ಭಾಷ್ಯದಂತಿರುವ—

ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ
ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ ॥ ೧೧ ॥

ನತ್ವೇವಾಹಂ ಜಾತುನಾಸಂ ನತ್ವಂನೇಮೇ ಜನಾಧಿಪಾಃ
ನಚೈವ ನಭವಿಷ್ಯಾಮಃ ಸರ್ವೇವಯ ಮತಃ ಪರಂ ॥ ೧೨ ॥

ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವ್ವನಂ ಜರಾ
ತಥಾದೇಹಾಂತರ ಪ್ರಾಪ್ತಿಃ ಧೀರಸ್ತತ್ರ ನಮುಹ್ಯತಿ ॥ ೧೩ ॥

ಅವಿನಾಶಿತು ತದ್ವಿದ್ಧಿ ಏನ ಸರ್ವಮಿದಂತತಂ
ವಿನಾಶಮವ್ಯಯಾ ಸ್ಯಾಸ್ಯ ನ ಕಶ್ಚಿತ್ಕರ್ತು ಮರ್ಹತಿ ॥ ೧೭ ॥

ನಜಾಯತೇ ಮ್ರಿಯತೇವಾ ಕದಾಚಿತ್
ನಾಯಂಭೂತ್ವಾ ಭವಿತಾವಾನ ಭೂಯಃ
ಅಜೋ ನಿತ್ಯ ಶ್ಯಾಶ್ವತೋಽಯಂ ಪುರಾಣಃ
ನ ಹನ್ಯತೇ ಹನ್ಯ ಮಾನೇ ಶರೀರೇ ॥ ೨೦ ॥

ನೈನಂ ಛಿಂದಂತಿ ಶಸ್ತ್ರಾಣಿ ನೈನಂದಹತಿ ಪಾವಕಃ
ನಚೈನಂ ಕ್ಲೇದಯಂತ್ಯಾಪೋ ನಶೋಷಯತಿ ಮಾರುತಃ ॥ ೨೩ ॥

ಅಚ್ಛೇದ್ಯೋಽಯ ಮದಾಹ್ಯೋಽಯ ಮಕ್ಲೇದ್ಯೋಽಶೋಷ್ಯ ಏವಚ
ನಿತ್ಯಃ ಸರ್ವಗತಸ್ಥಾಣುಃ ಅಚಲೋಽಯಂ ಸನಾತನಃ ॥ ೨೪ ॥

ಎಂಬಂತೆ ಜೀವನು ಪರಮಾತ್ಮನಂತೆ ನಿತ್ಯನಾದವನು. ಜೀವರಲ್ಲಿ ಪರಸ್ಪರ ಭೇದಗಳಿರದಿದ್ದರೆ ಯುದ್ಧ ಪ್ರಸಕ್ತಿ ಬರುತ್ತಿರಲಿಲ್ಲ.

ಬಹೂನಿಮೇವ್ಯತೀತಾನಿ ಜನ್ಮಾನಿ ತವಚಾರ್ಜುನ
ತಾನ್ಯಹಂ ವೇದ ಸರ್ವಾಣಿ ನತ್ವಂ ವೇತ್ಥಪರಂತಪ ॥ ೫ ॥

ಎಂಬ ಭಗವದ್ವಾಕ್ಯದಂತೆ ಜೀವನು ಅಜ್ಞಾನಿ.

ಈಶ್ವರಃ ಸರ್ವಭೂತಾನಾಂ ಹೃದ್ದೇಶೇರ್ಜುನ ತಿಷ್ಠತಿ
ಭ್ರಾಮಯರ್ನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥ ೬೧ ॥
ತಮೇವ ಶರಣಂ ಗಚ್ಛ ಸರ್ವ ಭಾವೇನ ಭಾರತ
ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ ॥ ೬೨ ॥

ಎಂಬ ವಾಕ್ಯಗಳಂತೆ ಜೀವನು ಅಸ್ವತಂತ್ರ. ಆದುದರಿಂದ ಜೀವನ ಅಸ್ವಾತಂತ್ರ್ಯವೆಂಥಾದ್ದೆಂಬುದನ್ನು ದಾಸರ ಮಾತುಗಳಿಂದ ತಿಳಿಯಬೇಕಾದುದು ಈ ಅಧ್ಯಾಯದ ಮೊದಲ ವಿಚಾರ.

## ಜೀವ ಕರ್ತೃತ್ವ ಸುಳಾದಿ

ಸೂಚನೆ:—ಈ ಸುಳಾದಿ ದೊಡ್ಡದಿರುವುದರಿಂದ, ಮುಖ್ಯ ಮಾತುಗಳನ್ನು ಮಾತ್ರ ಆರಿಸಿಕೊಡಲಾಗಿದೆ.

### ಮಟ್ಟತಾಳ

ಪ್ರಥಮ ಸಾಧನ ಜೀವ ಅಸ್ವಾತಂತ್ರತ್ವ
ದ್ವಿತೀಯ ಸಾಧನ ಹರಿ ಸ್ವಾತಂತ್ರ್ಯ ಸ್ಮೃತಿ ।
ತೃತೀಯ ಸಾಧನ ಜಡ ಚೇತನ ಜ್ಞಾನ
ಚತುರ ಸಾಧನ ತತ್ವಪೂರ್ಣ ಅಪೂರ್ಣವು ।
ಚತುರ ಸಾಧನದೊಳಗೆ ಸರ್ವ ಸಾಧನ ವಡಕ
ಮತಿಯಿಂದಲಿ ಮತ್ತೆ ಇದನು ವಿಸ್ತರಿಸಲು ।
ಶತಸಹಸ್ರವು ಆಗಿ ಸಾಧನವುಣಿಪವು........
ಚ್ಯುತ ದೂರ ಚೆಲ್ವ ಗೋಪಾಲ ವಿಠಲ ।
ಸ್ವತಃ ಒಲಿದರೊಲಿವ ಯತನಕಗೋಚರ ॥ ೨ ॥

### ರೂಪಕ ತಾಳ

ಕರ್ತೃ ತಾನೆಂದರೆ ದೋಷ ಫಲವು ಪ್ರಾಪ್ತಿ,
ಕರ್ತನಲ್ಲೆಂದರೆ ಸಾಧನಕೆ ಫಲವಿಲ್ಲ ।
ವ್ಯರ್ಥ ಸುಮ್ಮನಿಪ್ಪುವದಕೆ ಜೀವ ಜಡನಲ್ಲ
ಕರ್ತ್ರ ಜೀವೆಂಬುದು ಶ್ರುತಿ ಸ್ಮೃತಿಗಳಲಿ ಸಿದ್ಧ ।

ಕರ್ತೃತ್ವವೆಂಬುದು ಜೀವಸ್ವಾಧೀನಲ್ಲ
ಕರ್ತೃನಿಷ್ಠ ಧರ್ಮ ಕೊಟ್ಟರಿವನಿಗುಂಟು ।
ಕೊರತೆ ಮಾಡುವನಲ್ಲ ಕೊಟ್ಟ ಕರ್ತೃತ್ವ ತ
ನ್ನಿಷ್ಠವಾಗಿ ಜೀವಕ್ಕೆ ಹತ್ತಿಪ್ಪುದು ।
ಸ್ಫೂರ್ತಿ ಬಂದರೆ ಅರಿವ ಅ । ಸ್ಫೂರ್ತಿ ಬಂದರೆ ಮರೆವ
ಗಾತ್ರ ಹಸಿದರಳುವ ಗಾತ್ರ ತುಂಬಲು ನಲಿವ ।
ಕೀರ್ತಿ ಅಪಕೀರ್ತಿ ತನದೆಂದು ಹಿಗ್ಗುವ
ವ್ಯರ್ಥ ಇದರಿಂದ ಆನಂದವಾಚರಿಪ ।
ಕರ್ತೃಕಾರ್ಯಕವಿಷ್ಣು ಗೋಪಾಲ ವಿಠಲ
ಪಾತ್ರಾಪಾತ್ರವನರಿತು ಫಲವನೀವ ॥ ೩ ॥

ಅಡ್ಡಗೋಡೆಯ ಮೇಲಿಟ್ಟ ದೀಪದಂತೆ ಜೀವನ ಕರ್ತೃತ್ವವಿದೆ. ಶ್ರೀಮದ್ಭಾಗವತದಲ್ಲಿ ನೋಡಲಿ, ಗೀತೆಯಲ್ಲಿ ನೋಡಲಿ, ಜೀವನಿಗೆ ಇದಕ್ಕಿಂತ ಹೆಚ್ಚಾದ ಕರ್ತೃತ್ವ ಕೊಟ್ಟಿಲ್ಲ. ವೇದಾಂತ ಪಂಚದಶಿಯಲ್ಲಿ ಅದ್ವೈತ ಮತ ರೀತ್ಯಾ ಜೀವನನ್ನು ಚಿದಾಭಾಸನೆಂದು ಕರೆಯುತ್ತಾರೆ. ಅಲ್ಲಿ ನೋಡಿದರೂ ಜೀವನಿಗಿರುವ ಸ್ವಾತಂತ್ರ್ಯವಿಷ್ಟೆ ! ಇಲ್ಲದ ಸ್ವಾತಂತ್ರ್ಯವನ್ನು ಯಾರುತಾನೇ ಕೊಡಬಲ್ಲರು ?

ಪರಮ ಸಾಹಸಿಗಳೂ ಮಾತು ಮಾತಿಗೆ ಭಾರತೀಯರಂತೆ ದೇವರ ಹೆಸರನ್ನು ಉಪಯೋಗಿಸದವರೂ ಆದ ಪಾಶ್ಚಾತ್ಯ ವೇದಾಂತಿಗಳನ್ನು ವಿಚಾರಿಸಿದರೆ—ಆ ವೇದಾಂತಿಗಳಲ್ಲಿ ಎಲ್ಲರ ವೇದಾಂತವನ್ನೂ ಹೃದ್ಗತ ಮಾಡಿಕೊಂಡು, ಇಪ್ಪತ್ತನೇ ಶತಮಾನದ ೧೯೪೩ ರಲ್ಲೂ ಜೀವಂತನಾಗಿರುವ ತತ್ವಶಾಸ್ತ್ರ ನಿಪುಣನಾದ ಭಕ್ತ ಗಿಲ್ಬರ್ಟ ಮರ್‍ರೇ ಮಹಾಶಯನು ಸಹ, ಜೀವನ ಸ್ವರೂಪವನ್ನು ವರ್ಣಿಸಲು ಹೊರಟು, ಅದೊಂದು ಗಾಳಿಯೆಂದು ಕರೆದು, ಕಡೆಗೆ ಭಗವದ್ಗೀತೆಯ "ಮಮೈವಾಂಶೋ ಜೀವಲೋಕೇ ಜೀವಭೂತ ಸ್ಸನಾತನಃ" ಎಂಬಷ್ಟು ಅರ್ಥವುಳ್ಳ ಪರಮಾತ್ಮನ ಒಂದು ಸೂಕ್ಷ್ಮಾಂಶ ಅಥವ ಕಿಡಿ, ಮತ್ತು ಅಸ್ವತಂತ್ರ, ಎನ್ನುವುದಕ್ಕಿಂತ ಹೆಚ್ಚು ತಿಳಿಯಲು ಸಮರ್ಥನಾಗಿಲ್ಲ. ದೇಹ ನಾಶವಾದರೂ ಜೀವನು ನಿತ್ಯವೆಂಬ ಸಿದ್ಧಾಂತವನ್ನು ಮಾತ್ರ ಅವನು ಭಾರತೀಯರಂತೆ ಪ್ರತಿಪಾದಿಸಿರುತ್ತಾನೆ.

ಮತ್ತೂ, ವಿಚಾರಿಸಿದರೆ ದೇಹ ನಾನೆಂದು ಭ್ರಮಿಸುವ ಜೀವನು ದೇಹ ವೊದಲೇ ಅಲ್ಲ, ದೇಹದ ದುರವಸ್ಥೆ ನೋಡಿದರೆ—ದಿವದಿನವೂ ಬೆಳೆಯುತ್ತದೆ, ಸಾಯುತ್ತದೆ, ವಿಕಾರ ಹೊಂದುತ್ತದೆ. ಶಾಶ್ವತವಾಗಿಯಾದರೂ ಇರವು ದೆಂದರೆ ಮುದಿಯಾಗುತ್ತಲೇ ಮೃತವಾಗುತ್ತದೆ. ನಾನಾ ರೋಗಗಳು, ನಾನಾ ದುಃಖಗಳು, ನಾನಾ ದಾರಿದ್ರ್ಯಗಳು! ಇಂತಹ ದೇಹದಲ್ಲಿ "ನಾನು" ಎನ್ನುವ ಜೀವನಿಗೆ ಸಾಲದುದಕ್ಕೆ ನಿತ್ಯತ್ವ. ಏನು ಮಾಡಿದರೂ ಸಾಯುವುದಿಲ್ಲ. ದೇಹದ ಅಭಿಮಾನದಿಂದ ಎಲ್ಲಾ ನಾನು ಎಂದರೆ ಆ ದೇಹ ಇಪ್ಪತ್ತುನಾಲ್ಕು ತತ್ವಗಳಿಂದ ಸೃಷ್ಟಿಯಾಗಿದೆ. ಒಂದೊಂದು ತತ್ವಕ್ಕೆ ಒಬ್ಬೊಬ್ಬ ಅಭಿಮಾನಿ ದೇವತೆಯಿದ್ದಾನೆ. ರಾಜ್ಯಾಂಗದ ಮುಖ್ಯ ಶಾಖೆಗಳಲ್ಲಿ ಅಧಿಕಾರಿಗಳು ಕುಳಿತು ರಾಜ್ಯವಾಳುವಂತೆ ಅವರು ದೇಹರಾಜ್ಯವಾಳುತ್ತಾರೆ. ಯಾರು ವಿಮುಖ ರಾದರೂ ಜೀವಕ್ಕೆ ಸುಖವಿಲ್ಲ. ಶಾಸ್ತ್ರಕಾರರು ಇಂತಿಂಥವರು ತತ್ವ ನಿಯಾ ಮಕರೆಂಬುದನ್ನರಿತು ಗೀರ್ವಾಣ ಭಾಷೆಯಲ್ಲಿ ಹೇಳಿರುವುದನ್ನು ಹರಿದಾಸರು ಕನ್ನಡದಲ್ಲಿ ಈ ರೀತಿ ತಿಳಿಸುತ್ತಾರೆ.

### ಅಟ್ಟತಾಳ

ನುಡಿವನು ವರುಣನು । ಮೇಲುವನು ಪಾವಕ
ಕೇಳುವ ದಿಗ್ದೇವ । ಬಿಡದಪ್ಪಿ ಕೊಂಬುವ ಅಹಂಕಾರಿಕ ಪ್ರಾಣ ।
ನಡೆವನು ಜಯಂತ । ನೋಡುವ ಸೂರ್ಯನು
ಒಡನೆ ಗುಹ್ಯದಲ್ಲಿ ಮನು ಮಿತ್ರ ಮನದಲ್ಲಿ ।
ಬಿಡದೆ ಇಂದ್ರನು ಇಪ್ಪ ಅಹಂಕಾರದಲಿ ರುದ್ರ
ಪೊಡವಿಯೊಳಗ್ಗೆ ನಿನಗಾವದು ಅಧೀನ ?
ಕಡಲಶಯನ ನಮ್ಮ ವಿಜಯ ವಿಠಲನಲ್ಲಿ
ದೃಢ ಭಕುತಿಯ ಮಾಡು ಇದೆ ಸಾಧನ ಸಿದ್ಧ॥—

ಈ ತಾಪತ್ರಯದಲ್ಲಿ ಸಿಕ್ಕಿರುವ ಜೀವನು ದೇಹ ಭ್ರಾಂತಿಯಿಂದ ಹಿರಿಹಿರಿ ಹಿಗ್ಗುವುದನ್ನು ನೋಡಿ—

ಭೈರವಿ ಅಟ್ಟತಾಳ

ಹಿಗ್ಗುವೆ ಯಾಕೋ । ಈ ದೇಹಕ್ಕೆ ॥ ಪ ॥
ಹಿಗ್ಗುವೆ ತಗ್ಗುವೆ ಮುಗ್ಗುವೆ ನೆಗ್ಗುವೆ । ಅಗ್ನಿಯೊಳಗೆ ಬಿದ್ದು ದಗ್ಧವಾಗುವ
ದೇಹಕೆ ॥ ಅ ॥
ಸತಿಪುರುಷರು ಕೂಡಿ ರತಿಕ್ರೀಡೆಗಳ ಮಾಡಿ । ಪತನವಾದಿಂದ್ರಿಯದ
ಪ್ರತಿಮೆಯ ದೇಹಕ್ಕೆ ॥ ೧ ॥
ಆಗ–ಭೋಗಂಗಳ ಆಗುಮಾಡುತಲಿಪ್ಪ । ರೋಗ ಬಂದರೆ ಬಿದ್ದು
ಹೋಗುವ ದೇಹಕೆ ॥ ೨ ॥
ಪರರ ಸೇವೆಯಮಾಡಿ ನರಕಭಾಜನನಾಗಿ । ಉರುಳುರುಳಿ ಬಿದ್ದು
ನರಳುವ ದೇಹಕೆ ॥ ೩ ॥
ಸೋರುವ ಒಂಭತ್ತು ಬಾಗಿಲಿಂದಲಿ ಮಲ । ನೀರಿಲ್ಲದಿದ್ದರೆ ನಾರುವ
ದೇಹಕೆ ॥ ೪ ॥
ಪುರಂದರ ವಿಠಲನ ಚರಣ ಕಮಲಕ್ಕೆ । ಎರಗದೆ ಇರುತಿಹ ಗುರುವಾದ
ದೇಹಕೆ ॥ ೫ ॥

ಎಂಬದಾಗಿ ಪುರಂದರ ದಾಸರು ಬುದ್ಧಿ ಹೇಳಿರುತ್ತಾರೆ. ಬೌದ್ಧ ಜೈನ ಮತಗಳಲ್ಲಿ ನೋಡಲಿ, ಇಸಾಯಿ ಇಸ್ಲಾಂ ಮತಗಳಲ್ಲಿ ನೋಡಲಿ, ಜೀವನಿಗೆ ಸ್ವಾತಂತ್ರ್ಯವಿಲ್ಲ. ಬೌದ್ಧರೂ ಜೈನರೂ ಜನ್ಮಾಂತರಗಳುಂಟೆಂಬುದನ್ನು ಸ್ಪಷ್ಟವಾಗಿ ವೈದಿಕ ಮತೀಯರಂತೆ ಹೇಳಿದ್ದರೆ, ಇಸಾಯಿ ಮತದಲ್ಲಿ ಸಹ ಜೀವನಿಗೆ ಜನ್ಮ ಬರುವುದೆಂಬ ಸೂಚನೆಯನ್ನು ಅಸ್ಪಷ್ಟವಾಗಿ ಹೇಳಿದ್ದಾರೆ. ನಾಸ್ತಿಕ ಮತದಲ್ಲಿದ್ದು ಸುಖಿಸೋಣವೆಂದರೆ ಸುಖವೆಂಬುವುದು ಅಲ್ಲೂ ದೊರೆಯುವುದಿಲ್ಲ. ದೇಹ ತಾನೆಂದಪೂ, ಮರಣವೂ ಅದರಿಂದಾಗಬಹುದಾದ ದುಃಖವೂ ಬಿಟ್ಟಿದ್ದಲ್ಲ. ದೇಹವಾಗಿ ಸುಖವಿಲ್ಲ, ಜೀವನಾಗಿ ಸ್ವಾತಂತ್ರ್ಯವಿಲ್ಲ. ಇದು ಜೀವನ ಸ್ಥಿತಿ.

ಗೋಪಾಲ ದಾಸರು ಜೀವನ ಅಸ್ವಾತಂತ್ರ್ಯ ನೋಡಿ, ಕರ್ಮಶಾಸನೆಯಿಂದ ಜನ್ಮಗಳೆತ್ತಬೇಕಾಗುವ ದುರ್ಗತಿಗೆ ಬೇಸತ್ತು—

ಕಾಂಬೋದಿ ಜಂಪೆತಾಳ

ಈಪರಿಯ ಅಧಿಕಾರ ಒಲ್ಲೆನಾನು । ಶ್ರೀಪತಿಯೆ ನೀನೊಲಿದು ಏನು ಕೊಟ್ಟರು
ಸಾಕು ॥ ಪ ॥

ಚಿರಕಾಲ ಕಾದು ತಿರುಗಿದ್ದುದಕೆ ನೀನು । ಕರುಣದಿಂದ ರಚಿಸಿ ಈ ದುರ್ಗದಿ
ಇರಪೇಳಿದುದಕೆ ನಾ ತಿರುಗಿ ನೋಡಿದೆ ನೊಳಗೆ । ಹುರುಳು ಲೇಶವು
ಕಾಣೆ ಕರೆಕರೆ ಬಹಳ ॥ ೧ ॥

ದಾರಿಯಲಿ ಪೋಗಿಬರುವರ ಉಪಟಳವು ಘನ । ಚೋರ ರಟ್ಟುಳಿಗಂತು
ನೆಲೆಯೆ ಇಲ್ಲ
ವೈರಿವರ್ಗದ ಜನರು ಒಳಗೆ ಬಲು ತುಂಬಿಹರು । ಮಾರಿ ದಿನಗಳು ಬರಲು
ಊರ ನಿಲಗೊಡರು ॥ ೨ ॥

ನಾಮಾಂಕಿತಕೆ ಮಾತ್ರ ಅಧಿಕಾರ ಎನಗಿತ್ತಿ । ಸ್ವಾಮಿತ್ವವನು ನೋಡು
ಮನೆಮನೆಯೊಳು
ಭೀಮ ವಿಕ್ರಮರವರು ದುರ್ಬಲಾಗ್ರಣಿ ನಾನು । ಗ್ರಾಮ ಒಪ್ಪಿಸಿ ನಮಿಪೆ
ಸರಿಬಂದುದನೆ ಮಾಡೊ ॥ ೩ ॥

ಸರಿಬಂದ ವ್ಯಾಪಾರ ತಾವು ಮಾಡಿ ಎನ್ನ । ಬರಿಯ ಲೆಕ್ಕಕೆ ಮಾತ್ರ
ಗುರಿಯ ಮಾಡಿ
ಕರೆಕರೆಯ ಪಡಿಸಬೇಕೆಂದು ಯೋಚಿಸುತಿಹರು । ಕರೆಸಿ ವಿಚಾರಿಸಿ
ನ್ಯಾಯ ಮಾಡಿಸೊ ಧೊರೆಯೆ ॥ ೪ ॥

ಕಾಲಕ್ಕೆ ಕರೆಯ ಬಂದವರಿಗೆ ಒಳಗಾಗಿ । ಪಾಳೆಯವನೊಪ್ಪಿಸಿ ಕೊಡುವೆವೆಂದು
ಆಲೋಚಿಸಿ ಇಹರು ಈಗಲೇ ನಿನ್ನ ನಿಜ । ಆಳುಗಳ ಬಲಮಾಡಿ । ಎನ್ನ
ರಕ್ಷಿಸೊ ಧೊರೆಯೆ ॥ ೫ ॥

ಕ್ಷಣಕೆ ನೂರುಪಟಳ ಈ ಕೋಟೆಗೆಲ್ಲೊರಾಯ । ಅನುವಾದ ಸರಕು
ಒಂದಾದರಿಲ್ಲ
ಎನಗಾರ ಬಲವಿಲ್ಲ ಇದ್ದವರು ವಶವಿಲ್ಲ । ಮನದಂದು ಗ್ರಾಮ ಕಾಪಾಡುವ
ಬಗೆಯೆಂತೊ ॥ ೬ ॥

ಎನಗೆ ಬಲುನಾಯಕರ ಕೊಂಪೆಯೊಳಗೆ ವಾಸ । ವನು ಬಿಡಿಸಿ ನಿನ್ನ
ನಿಜ ಪಟ್ಟಣದೊಳು

ಮನೆಮಾಡಿ ಕೊಡಲು ನಾ ನಿನ್ನನೇ ನೋಡುತ್ತ । ಅನುಗಾಲ ಬದುಕುವೆನೊ
ಗೋಪಾಲ ವಿಠಲ ॥ ೬ ॥

ಎಂಬದಾಗಿ ಹಳಹಳಿಯಿಂದ ಹಾಡಿ ಮೊರೆ ಬಿದ್ದಿರುತ್ತಾರೆ.

ಜೀವನು ಆಶ್ರಯಿಸಿರುವ ದೇಹವನ್ನು ನೋಡಿ ದೇಹದಾಕಾರ ಜೀವನ ದೆಂದು ಭ್ರಮಿಸಲು ಅವಕಾಶವಿರಬಾರದೆಂದು "ತತ್ವಸಾರ" ವೆಂಬ ಗ್ರಂಥದಲ್ಲಿ--

ಅಶ್ವವಾಲಾಗ್ರ ಮಾದಾಯ ವಿಭಜ್ಯ ಶತಧಾಹಿತತ್
ಪುನಶ್ಚ ಶತಧಾ ಭಿನ್ನಂ ಕಿ ಯನ್ಮಾತ್ರಂ ಭವಿಷ್ಯತಿ
ತಾವದ್ಬ್ರಹ್ಮಾದಿ ಜೀವಾನಾಂ ಪರಿಮಾಣಂ ಪ್ರಕೀರ್ತಿತಂ

ಎಂಬದಾಗಿ ಹೇಳಿರುವುದನ್ನು ಜಗನ್ನಾಥದಾಸರು ಕನ್ನಡ ಭಾಮಿನೀ ಷಟ್ಪದಿಯಲ್ಲಿ—

ಕುದುರೆ ಬಾಲದ ಕೊನೆಯ ಕೂದಲ
ತುದಿಯ ಭಾಗವ ಮಾಡಿ ಶತವಿಧ
ವದರೊಳೊಂದನು ನೂರು ಭಾಗವ ಮಾಡಲೆಂತಿಹುದೊ
ವಿಧಿಭವಾದಿ ಸಮಸ್ತ ಜೀವರ
ಮೊದಲು ಮಾಡಿ ತೃಣಾಂತ ಜೀವರೊ

ಳಧಿಕ ನ್ಯೂನತೆ ಇಲ್ಲವೆಂದಿಗು ಜೀವ ಪರಿಮಾಣ ॥೭॥ ಹ.ಕ.ಸಾ. IX
ಎಂಬದಾಗಿ ತಿಳಿಸಿರುತ್ತಾರೆ. ಇಷ್ಟು ಸೂಕ್ಷ್ಮರೂಪಿ ಜೀವನ ಹೃದಯಾ ಕಾಶದಲ್ಲಿ ಪರಮಾತ್ಮನು ವಾಸಮಾಡುತ್ತಾನೆಂಬುದನ್ನು ಕಾಠಕೋಪನಿ ಷತ್ತಿನ—

ಅಣೋರಣೀಯಾನ್ಮಹತೋಮಹೀಯಾ ನಾತ್ಮಸ್ಯ ಜಂತೋರ್ನಿಹಿ
ತೋ ಗುಹಾಯಾಂ
ತಮಕ್ರತುಃ ಪಶ್ಯತಿ ವೀತಶೋಕೋ ಧಾತು ಪ್ರಸಾದಾನ್ಮಹಿಮಾ
ನಮಾತ್ಮನಃ ॥ ೨೦ ॥ ೧. ೨.

ಎಂಬ ಮಂತ್ರಾರ್ಥದಂತೆ ಕನ್ನಡ ಪದ್ಯಗಳಲ್ಲಿ ಭಾಷ್ಯವನ್ನೇ ಅನುಸರಿಸಿ ಸುಲಭವಾಗಿ ತಿಳಿಯುವಂತೆ ಹೇಳಿರುತ್ತಾರೆ. ಇಂತಹ ಜೀವನ ಸ್ವರೂಪಕ್ಕೆ ಜನನ ಮರಣಗಳಿಗೆ ಕಾರಣವಾದ ಗುಣತ್ರಯಾತ್ಮಕವಾದ ಒಂದು ಆವರಣವಿದ್ದು ಅದು ಲಿಂಗದೇಹವೆಂದು ಕರೆಸಿಕೊಳ್ಳುತ್ತದೆ. ಆ ಮಾತನ್ನು ಜಗನ್ನಾಥ ದಾಸರು—

ಜೀವನಿಗೆ ತುಷದಂತೆ ಲಿಂಗವು
ಸಾವಕಾಶದಿ ಪೊಂದಿಸುತ್ತಲು
ಪ್ರಾವರಣ ರೂಪದಲಿ ಇಪ್ಪದು ಭಗವದಿಚ್ಛೆಯಲಿ ||

ಎಂದಿರುತ್ತಾರೆ. ಇಂತಹ ಲಿಂಗದೇಹವು ಷೋಡಶ ಕಳಾತ್ಮಕವಾಗಿರುತ್ತದೆ. ಈ ಶರೀರ ಮತ್ತು ಇದನ್ನಾವರಿಸಿರುವ ಮತ್ತೊಂದು ಸೂಕ್ಷ್ಮ ಶರೀರಕ್ಕೂ ಮಧ್ಯದಲ್ಲಿ ಜೀವನಿಗೆ ತನ್ನ ಸ್ವರೂಪವನ್ನು ಮರೆಮಾಡಿರುವ ಸ್ವಗುಣಾಚ್ಛಾದಿಕವೆಂಬ ಪೊರೆಯೂ, ಪರಮಾತ್ಮನ ಸ್ವರೂಪವನ್ನು ಮರೆಮಾಡಿರುವ ಪರಮಾಚ್ಛಾದಿಕವೆಂಬ ಪೊರೆಯೂ ಅಡ್ಡವಾಗಿರುತ್ತವೆ. ಈ ಎರಡು ಪೊರಗಳು ಕಳಚಬೇಕಾದರೆ ಜೀವನು ಬಹು ವಿಧ ಸಾಧನೆಗಳನ್ನು ಮಾಡಿ ಭಕ್ತನಾಗಬೇಕು.

ಇಂತಹ ಜೀವನ ಹೃದಯಾಕಾಶದಲ್ಲಿ ವಾಸಮಾಡುವ ಪರಮಾತ್ಮನು ಹೃದಯ ಕಮಲದ ಅಷ್ಟದಳಗಳಲ್ಲಿ ಕಟಾಕ್ಷ ಬೀರಿದಾಗ ಒಂದೊಂದು ದಳದಲ್ಲಿ ಒಂದೊಂದು ಪ್ರಕಾರದ ಬುದ್ಧಿ ಜೀವನಿಗುಂಟಾಗುತ್ತದೆ. ಅದರ ವಿವರವನ್ನು ಜಗನ್ನಾಥ ದಾಸರು—

ಸುರಪನಾಲಯಕ್ಕೈದಿದರೆ ಮನ
ವೆರಗುವುದು ಸತ್ಪುಣ್ಯ ಮಾರ್ಗದಿ
ಬರಲು ವಹ್ನಿಯ ಮನೆಗೆ ನಿದ್ರಾಲಸ್ಯ ಹಸಿತೃಷೆಯು
ತರಣಿ ತನಯ ನಿಕೇತನದಿ ಸಂ
ಭರಿತ ಕೋಪಾಟೋಪ ತೋರುವು
ದರವಿದೂರನು ನಿರುತಿಯಲ್ಲಿರೆ ಪಾಪಗಳ ಮಾಳ್ಪ || ೨೨ ||

ವರುಣನಲ್ಲಿ ವಿನೋದಹಾಸ್ಯವು
ಮರುತನೊಳು ಗಮನಾಗಮನ ಹಿಮ
ಕರಧನಾಧಿಪರಲ್ಲಿ ಧರ್ಮದ ಬುದ್ಧಿ ಜನಿಸುವುದು
ಹರನ ಮಂದಿರದಲ್ಲಿ ಗೋಧನ
ಧರಣಿ ಕನ್ಯಾದಾನಗಳ, ಓಂ
ದರಘಳಿಗೆ ತಡೆಯದಲೆ ಕೊಡುತಿಹ ಚಿತ್ತವುಟ್ಟುವುದು || ೨೩ || ೯.

ಹೃದಯದೊಳಗೆ ವಿರಕ್ತಿಕೇಸರ
ಕೊದಗೆ ಸ್ವಪ್ನ ಸುಷುಪ್ತಿಲಿಂಗದಿ
ಮಧುಹಕರ್ಣಿಕೆಯಲ್ಲಿ ಬರೆಜಾಗ್ರತೆಯು ಪುಟ್ಟುವುದು
ಸುದರಿಶನ ಮೊದಲಾದ ಅಷ್ಟಾ
ಯುಧವ ಪಿಡಿದಾಶಾಧಿಪತಿಗಳ
ಸದನದಲಿ ಸಂಚರಿಸುತೀಪರಿ ಬುದ್ಧಿಗಳ ಕೊಡುವ || ೨೪ || ೧೦.

ಈ ರೀತಿ ಜೀವಾತ್ಮನು ಪರಮಾತ್ಮನಿಗೆ ಪ್ರತಿಯೊಂದು ವಿಷಯದಲ್ಲಿ ಅಧೀನನಾಗಿರುತ್ತಾನೆ. ಹೀಗೇಕಿರಬೇಕೆಂದರೆ ಇರುವುದೇ ಹಾಗೆ ಎಂಬುದಕ್ಕಿಂತ ಬೇರೆ ಉತ್ತರ ದೊರೆಯುವುದಿಲ್ಲ. ಇಷ್ಟಾದರೂ ಪರಮಾತ್ಮನು ಅನ್ಯಾಯ ಮಾಡಿರುವನೇ ಎಂದರೆ, ಆದರಿಂದ ಅವನಿಗೆ ಯಾವ ಪ್ರಯೋಜನವೂ ಇಲ್ಲ. ಜೀವರಿಂದಾಗಲಿ ಪ್ರಪಂಚದಿಂದಾಗಲಿ ಅವನು ಪಡೆಯಬೇಕಾದುದು ಯಾವದೂ ಇಲ್ಲ. ಸ್ವಭಾವ ಬದಲಾಗುವುದಿಲ್ಲ. ವೈಜ್ಞಾನಿಕನ ಕೊಡತಿಗೆ ಸಿಕ್ಕುವುದು ಇದು ಅಲ್ಲ. ಹೋಗಲಿ, ಜೀವರಾದರೂ ಒಂದೇ ರೀತಿ ಏಕಿಲ್ಲವೆಂದರೆ ಅವರಿರುವುದು ಹಾಗೆ ಎನ್ನುವುದಕ್ಕಿಂತ ಉತ್ತರ ಸಿಗುವುದಿಲ್ಲ. ಇಷ್ಟು ಅಸ್ವತಂತ್ರರಾಗಿದ್ದರೂ ದೇವರನ್ನು ದ್ವೇಷಿಸುವವರಿದ್ದಾರೆ, ದೇವರನ್ನು ಉದಾಸೀನದಿಂದ ನೋಡುವವರಿದ್ದಾರೆ, ದೇವರಲ್ಲಿ ಭಕ್ತಿ ಮಾಡುವವರಿದ್ದಾರೆ. ಹಾಗೆ ಮಾಡುವುದು ಅವರಿಗೆ ಸ್ವಭಾವ. ಹಾಗಿರದಿದ್ದರೆ ರಾಮರಾವಣರ ಯುದ್ಧವಾಗುತ್ತಿರಲಿಲ್ಲ. ಕೌರವ ಪಾಂಡವರ ಯುದ್ಧವಾಗುತ್ತಿರಲಿಲ್ಲ. ಭಗವದ್ಗೀತೆಯಂಥಾ ಶಾಸ್ತ್ರವನ್ನು ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸುತ್ತಿರಲಿಲ್ಲ.

ದೇವರು ಒಬ್ಬನು. ಅವನು ಸರ್ವಾಂತರ್ಯಾಮಿ. ಅವನು ಸರ್ವಸಾಕ್ಷಿ. ಆದ್ದರಿಂದ ಎಲ್ಲವನ್ನೂ ನೋಡುತ್ತಾನೆ. ಜೀವರ ಪ್ರವೃತ್ತಿಗಳಂತೆ ಫಲ ಗಳನ್ನು ಕೊಡುತ್ತಾನೆ. ತಾನು ನಿರ್ಲಿಪ್ತನಾಗಿರುತ್ತಾನೆ. ಈ ಅರ್ಥವನ್ನು ಮನಸ್ಸಿನಲ್ಲಿಟ್ಟುಕೊಂಡು ಜಗನ್ನಾಥದಾಸರು—

ವಾರಿದನು ಮಳೆಗರೆಯೆ ಬೆಳೆದಿಹ
ಭೂರುಹಂಗಳ ಚಿತ್ರಫಲರಸ
ಬೇರೆ ಬೇರಿಪ್ಪಂತೆ ಬಹುವಿಧ ಜೀವರೊಳಗಿದ್ದು
ಮಾರಮಣನವರವರ ಯೋಗ್ಯ
ತಾರದಲೆ ಗುಣಕರ್ಮಗಳನನು
ಸಾರ ನಡೆಸುವ ದೇವನಿಗೆ ವೈಷಮ್ಯವೆಲ್ಲಿಹುದು || ೨೩ || ೩.

ವಾರಿಜಾಪ್ತನ ಕಿರಣಮಣಿಗಳ
ಸೇರಿ ತತ್ತದ್ವರ್ಣಗಳನು ವಿ
ಕಾರಗೈಸದೆ ನೋಳ್ಪರಿಗೆ ಥಳಥಳಿಸುವಂದದಲಿ
ಮಾರಮಣ ಲೋಕತ್ರಯದೊಳಿಹ
ಮೂರು ವಿಧ ಜೀವರೊಳಗಿದ್ದು ವಿ
ಹಾರ ಮಾಡುವನವರ ಯೋಗ್ಯತೆ ಕರ್ಮವನುಸರಿಸಿ || ೨೪ || ೩.

ಕಾದ ಕಬ್ಬಿಣ ಹಿಡಿದು ಬಡಿಯಲು
ವೇದನವು ಲೋಹಕ್ಕೆ ಅಲ್ಲದೆ
ಆದುವೇನೈ ಅನಲಗಾವ್ಯಥೆ ಏನಮಾಡಿದರು
ಆದಿ ದೇವನು ಸರ್ವ ಜೀವರ
ಕಾದುಕೊಂಡಿಹ ನೊಳಹೊರಗೆದು
ಖ್ಖಾದಿಗಳು ಸಂಬಂಧವಾಗುವವೇನು ಚಿನ್ಮಯಗೆ || ೨೭ || ೩.

ಎಂಬದಾಗಿ ಹೇಳಿರುತ್ತಾರೆ. ಜೀವರ ಸ್ಥಿತಿ ಹೀಗಿದ್ದ ಮೇಲೆ, ಅವರು ನಿತ್ಯ ರಾಗಿದ್ದ ಮೇಲೆ, ಅವರೇಕೆ ಜನ್ಮವೆತ್ತಿ ದುಃಖವನ್ನನುಭವಿಸಬೇಕು ಎಂದರೆ ಜನ್ಮವೆತ್ತುವುದು ಅವರ ಸ್ವಾಧೀನದಲ್ಲಿಲ್ಲ. ದೇವರ ಸಹಾಯವಿಲ್ಲದೆ ಸ್ವಯಂ

ಜನ್ಮತಾಳಿ ಬರಲು ಅವರಿಗೆ ಸ್ವತಂತ್ರವಿಲ್ಲ. ಬಿತ್ತನೆಯ ಬೀಜ ಬಿತ್ತಿದಲ್ಲದೆ ಮೊಳೆಯುವುದಿಲ್ಲ. ಇದ್ದ ಕಡೆಯಿರಲಿ, ಗಿಡವಾಗಲಿ, ಎಂದು ಪೆಟ್ಟಿಗೆಯಲ್ಲಿ ಬಿಟ್ಟಿದ್ದರೆ, ಅದು ಗಿಡವಾಗುವುದಿಲ್ಲ. ಜೀವರು ದೇಹದಲ್ಲಿ ಬರದಿದ್ದರೂ ಅವರಲ್ಲಿ ಒಂದು ಬಗೆಯ ಪ್ರವೃತ್ತಿಯಿರುತ್ತದೆ. ಆ ಪ್ರವೃತ್ತಿಗೆ ಅನಾದಿ ಕರ್ಮ ಅಥವ ವಾಸನಾ ಎನ್ನುತ್ತಾರೆ. ಅದು ಅಭಿವ್ಯಕ್ತಿಗೆ ಬರಲು ದೇವರು ಸಹಾಯ ಮಾಡುತ್ತಾನೆ. ಸೃಷ್ಟಿಗೆ ತರುತ್ತಾನೆ. ಆ ಪಾರುಪತ್ಯವಾದರೂ ದೇವರಿಗೇಕೆಂದರೆ—It is the pleasure of the Government ಎಂದರೆ ಮಾನ್ಯ ಸದಸ್ಯರು ಬಾಯಿ ಮುಚ್ಚುವಂತೆ-ಇದು ದೇವರ ಇಚ್ಛೆ, ದೇವರ ದಯೆ ಎಂಬುದಕ್ಕಿಂತ ಉತ್ತರವಿಲ್ಲ. ಜಗನ್ನಾಥದಾಸರು:—

ಮಳಲ ಮನೆಗಳ ಮಾಡಿ ಮಕ್ಕಳು
ಕೆಲವು ಕಾಲದಲಾಡಿ ಮೋದದಿ
ತುಳಿದು ಕೆಡಿಸುವ ತೆರದಿ ಲಕುಮಿಾರಮಣ ಲೋಕಗಳ
ಹಲವು ಬಗೆಯಲಿ ನಿರ್ಮಿಸುವ ನಿ
ಶ್ಚಲನು ತಾನಾಗಿದ್ದು ಸಲಹುವ
ಎಲರುಣಿಯವೊಲು ನುಂಗುವನಿಗೆಲ್ಲಿಹದು ಸುಖ ದುಃಖ || ೨೮ || ೩.

ಎಂದಿದ್ದಾರೆ.

ದೇವರಂತೆ ಜೀವರೂ ನಿತ್ಯರಾದ ಮೇಲೆ ದೇವರನ್ನು ದಂಡಿಸಿ ಏಕೆ ಸ್ವತಂತ್ರರಾಗಬಾರದೆಂದರೆ ಅದಕ್ಕೂ ವಿಜಯದಾಸರು ಒಂದು ಸುಳಾದಿಯಲ್ಲಿ—ಲಕ್ಷ ಸೂಜಿಗಳು ಜಾತ್ಯಾ ಸಮವಾಗಿದ್ದರೂ ಒಂದು ಗಡಾರಿಯನ್ನು ಏನೂ ಮಾಡಲಾರವು. ಗಡಾರಿ ಮುನಿದರೆ ಮಾತ್ರ ಸೂಜಿಗಳ ಪರಿಣಾಮವಾಗಲಿಕ್ಕಿಲ್ಲ ; ಎಂಬದಾಗಿ ಹೃದಯಂಗಮವಾಗುವಂತೆ ವರ್ಣಿಸಿರುತ್ತಾರೆ.

ಅದ್ವೈತಮತರೀತ್ಯಾ ಜೀವನು ಬ್ರಹ್ಮನಲ್ಲಿ ಐಕ್ಯ ಹೊಂದಬೇಕಾದರೂ, ದ್ವೈತಮತರೀತ್ಯಾ ಜೀವನು ಮುಕ್ತಿ ಪಡೆಯಬೇಕಾದರೂ, ಒಂದೇ ಗರಡಿಯಲ್ಲಿ ಸಾಧನೆ ಮಾಡಬೇಕು. ಮಾಡುವ ಸಾಧನೆ ಬಲು ದೂರದವರೆಗೆ ಒಬ್ಬರಿಗೊಂದು ಮತ್ತೊಬ್ಬರಿಗೊಂದು ಇಲ್ಲ. ಶಂಕರಾಚಾರ್ಯರು "ಮೋಕ್ಷ

ಸಾಧನ ಸಾಮಗ್ರ್ಯಾಂ ಭಕ್ತಿ ರೇವಗರೀಯಸೀ" ಎಂದು ಭಕ್ತಿಗೇ ಮಹತ್ವ ಕೊಟ್ಟಿದ್ದಾರೆ. ಭಕ್ತಿಯನ್ನು ಬಿಟ್ಟು ಯಾವ ವೈದಿಕಮತದಲ್ಲೂ ಮುಕ್ತಿಗೆ ದಾರಿಯಿಲ್ಲ. ಭೇದ ನಷ್ಟವಾಗಿ ಅಭೇದ ಸ್ಥಿರವಾದರೂ, ಆ ಅಭೇದವು "ನಾಥತವಾಹಂ ನಮಾಮಕೀನಸ್ತ್ವಂ" ಎಂಬಂತೆ ನಿನ್ನಿಂದ ನಾನು, ನನ್ನಿಂದ ನೀನಲ್ಲ ; ಎಂಬ ಅಭೇದ. ಸಮುದ್ರದಿಂದ ತರಂಗ, ತರಂಗದಿಂದ ಸಮುದ್ರವಲ್ಲ ; ಎಂಬಂತೆ.

ಪರಿಸ್ಥಿತಿ ಹೀಗಿರಲು, ಪರಾಧೀನನಾದ ಜೀವನು ಮಾಡಬೇಕಾದು ದೇನು ? ಸರ್ವಶಕ್ತನಾದ ಭಗವಂತನ ಕೃಪೆಯನ್ನು ಸಂಪಾದಿಸಿ, ದುಃಖಮಯ ಜನನ ಮರಣಗಳಿಂದ ಮುಕ್ತನಾಗಲು ಸಾಧನಮಾರ್ಗ ಹುಡುಕುವುದಕ್ಕಿಂತ ಉಳಿದಿರುವುದಾದರೂ ಏನು ?

ಈ ಪರಿಯ ಪರಿತಾಪ ಯಾರ ಮನಸ್ಸಿಗಾದರೂ ಬಂದರೆ ಅಂಥವರಿಗೆ ಸಾಧನದ ದಾರಿಯನ್ನು ಕನ್ನಡ ಹರಿದಾಸರು ತೋರಿಸಿರುತ್ತಾರೆ. ಯೋಗ ಸಾಧನೆ ಮಾಡುವವನಿಗೆ ಹಿಂದು ಮುಂದು ನೋಡದೆ ನಮಸ್ಕಾರ ಹಾಕುವ ಅಭ್ಯಾಸ ಹೇಗೆ ಮೊದಲಿನದೋ, ಹಾಗೆ ಭಕ್ತಿಸಾಧನೆ ಮಾಡಬೇಕೆಂಬವನಿಗೆ ನಾಮಸ್ಮರಣೆ ಮಾಡುವುದು ಮೊದಲಿನದು. ನಾಮ ಭಜನೆಯಿಂದ ದೇಹೇಂದ್ರಿಯಗಳು ಪವಿತ್ರವಾದ ವಿನಾ ಭಕ್ತನಿಗೆ ಸಾಧನವಾಗುವುದಿಲ್ಲ. ಕೃಷ್ಣಾಮೃತ ಮಹಾರ್ಣವದಲ್ಲಿ—ಶ್ರೀಮಧ್ವಾಚಾರ್ಯರವರು

ನಾಮ್ನೋಽಸ್ತಿಯಾವತೀಶಕ್ತಿಃ ಪಾಪ ನಿರ್ಹರಣೇಹರೇಃ
ತಾವತ್ಕರ್ತುಂ ನ ಶಕ್ನೋತಿ ಪಾತಕಂ ಪಾತಕೀ ಜನಃ ||

ತಾ|| "ಪರಮಾತ್ಮನ ನಾಮಕ್ಕೆ ಪಾಪ ಪರಿಹಾರ ಮಾಡುವುದರಲ್ಲಿ ಎಷ್ಟು ಶಕ್ತಿಯಿದೆಯೋ, ಪಾಪಿಗಳು ಅಷ್ಟು ಪಾಪಗಳನ್ನು ಮಾಡುವದಕ್ಕೆ ಸಮರ್ಥರೇ ಆಗುವುದಿಲ್ಲ" ವೆಂಬದಾಗಿ ಹೇಳಿರುತ್ತಾರೆ. ಕನ್ನಡ ಹರಿದಾಸರುಗಳು "ನೀನ್ಯಾಕೋ ನಿನ್ನ ಹಂಗ್ಯಾಕೋ ನಿನ್ನ ನಾಮದ ಬಲವೊಂದಿದ್ದರೆ ಸಾಕೊ" ಎಂದು ಮೊದಲಾಗಿ ಒಬ್ಬೊಬ್ಬರೂ ಹಾಡಿದ್ದಾರೆ. ಮಹಾರಾಷ್ಟ್ರ ಭಕ್ತರು ನಾಮ ಭಜನೆಗೆ ಬಹಳ ಮಹತ್ವ ಕೊಟ್ಟು ನಿರಂತರ ನಾಮಕಥನ

ಮಾಡುವುದು ಇಂದಿಗೂ ಆ ದೇಶದಲ್ಲಿ ಕಂಡು ಬರುತ್ತದೆ. ಬೆಳಗಾಗಿ ಏಳುತ್ತಲೇ—"ಹರೇರಾಮ ಹರೇರಾಮ ರಾಮ ರಾಮ ಹರೇ ಹರೇ ॥ ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ" ಎಂಬುವುದು ನಮ್ಮ ಜನರ ನಿತ್ಯ ಪಾಠದಲ್ಲಿದೆ. ಹರೇರ್ನಾಮೈವ ನಾಮೈವ ನಾಮೈವ ಮಮ ಜೀವನಂ ॥ ಕಲೌನಾಸ್ತ್ಯೇವ ನಾಸ್ತ್ಯೇವ ನಾಸ್ತ್ಯೇವ ಗತಿರನ್ಯಥಾ ಎಂಬದಾಗಿ ಪುರಾಣವು ಸಾರುತ್ತಿದೆ. "ಗೇಯಂ ಗೀತಾ ನಾಮಸಹಸ್ರಂ ಧ್ಯೇಯಂ ಶ್ರೀಪತಿ ರೂಪ ಮಜಸ್ರಂ" ಎಂಬದಾಗಿ ಶಿಷ್ಯರು ಹಾಡಿದರೆ "ಭಜಗೋವಿಂದಂಭಜಗೋವಿಂದಂ ಭಜಗೋವಿಂದಂ ಮೂಢಮತೇ" ಎಂಬದಾಗಿ ಶಂಕರಾಚಾರ್ಯರು ನಾಮ ಭಜನೆಗೆ ಮಹತ್ವ ಕೊಟ್ಟಿದ್ದಾರೆ. ಇದೇ ರೀತಿ ರಾಮಾನುಜಾಚಾರ್ಯರು ವಲ್ಲಭಾಚಾರ್ಯರು ಎಲ್ಲ ಮತಾಚಾರ್ಯರೂ ನಾಮ ಮಾಹಾತ್ಮ್ಯವನ್ನು ಕೊಂಡಾಡಿದ್ದಾರೆ. ಚೈತನ್ಯ ಮಹಾಪ್ರಭುವಿಗೆ 'ಹರಿಹರಿ ಹರಿಹರಿ' ಎಂದು ಎಷ್ಟು ಭಜಿಸಿದರೂ ಮನದಣಿಯಲಿಲ್ಲ. ರಾಮನಾಮವನ್ನು ಬರೆದ ಮಾತ್ರಕ್ಕೆ ಶಿಲೆಗಳು ಸಮುದ್ರದಲ್ಲಿ ತೇಲಿದವೆಂದೂ ತಮ್ಮ ಕಾಠಿಣ್ಯವನ್ನು ತ್ಯಜಿಸಿದವೆಂದೂ ಮೋರೋಪಂತರು ಅತಿಶಯೋಕ್ತಿಯಿಂದ ಹಾಡಿದ್ದಾರೆ. ಸಾಧಕನಿಗೆ ಮೊದಲಿನಿಂದ ಕಡೆಯುತನಕ ನಾಮಕಥನವೇ ಸಾಧನೆಯಾಗಿ ಅವನು ಸಿದ್ಧನಾಗಿದ್ದಾನೆ. ಉತ್ತರ ಭಾರತದ ಸಂಕೀರ್ತನವೆಲ್ಲಾ ನಾಮಭಜನೆಯಾಗಿದೆ. ಏಳುವಾಗ ಸ್ಮರಣೆ ಮಾಡಲು ಕಲಿತನಾಮವು ಮರಣ ಕಾಲದಲ್ಲಿಯೂ ನಾಮಸ್ಮರಣೆಯಿಂದಲೇ ಮುಕ್ತಿಗೆ ದಾರಿಯಾಗಿದೆ. ಹರಿದಾಸರು ಮಾತುಮಾತಿಗೂ ನಾಮಸ್ಮರಣೆಯಿರಲೆಂದು ಪ್ರತ್ಯೇಕ ದೇವರ ನಾಮಗಳನ್ನೇ ಅಗಣಿತವಾಗಿ ಬರೆದಿದ್ದಾರೆ.

ಕನಕದಾಸರು ಉತ್ತರ ಕರ್ಣಾಟಕದ ಚಿಕ್ಕದೊಂದು ಪಾಳ್ಯಪಟ್ಟಿನ ಧೊರೆತನ ಮಾಡುತ್ತಿದ್ದರು. ವಿಜಯನಗರದ ಅರಸರು ಹೇಳಿದಾಗ ಸಾವಿರ ಕಾಲಾಳು ಬಲದೊಡನೆ ಶತ್ರುರಾಜರಮೇಲೆ ದಂಡಯಾತ್ರೆಮಾಡಿ ಗೆದ್ದರಾಜ್ಯವನ್ನು ಕರ್ಣಾಟಕ ಸಾಮ್ರಾಜ್ಯಕ್ಕೆ ಸೇರಿಸುತ್ತಿದ್ದರು. ಇಂಥವರಿಗೆ ಮನಸ್ಸು ಪರಿವರ್ತನೆಯಾಯಿತು. ಹರಿದಾಸರಾಗಿ ಕವಿತೆಗೆ ಆರಂಭಿಸಿದ ಕೂಡಲೇ ಕೇಶವಾದಿ ಚತುರ್ವಿಂಶತಿ ನಾಮಗಳ ಕೀರ್ತನೆಯನ್ನು ಹಾಡಿದರು. ಅವರು

ತಿರುಪತಿಯಲ್ಲಿ ಹಾಡಿದ ಹಾಡಿನಲ್ಲಿ ಮಾತುಮಾತಿಗೆ ನಾಮಸ್ಮರಣೆಯಿರಲೆಂದು ಕೆಳಕಂಡಂತೆ ಹಾಡಿದರು.

ತುತಿಸಬಲ್ಲೆನೆ ನಾನಿನ್ನ ಎಂಬಂತೆ

ಗೋವಿಂದ | ಸಲಹೆನ್ನನು | ಸದಾನಂದ | ಗೋವಿಂದ || ಪ ||
ಗೋವಿಂದ ಸಲಹೆನ್ನ ಕುಮುದಲೋಚನ ನಿನ್ನ |
ಸ್ನಾನಕರಡಿಯ ಸೇವಕನಯ್ಯ ಗೋವಿಂದ || ಅ ||
ತಮನ ಸಂಹರಿಸಿ ವೇದವ ತಂದ ಗೋವಿಂದ |
ಅಮರರಿಗಮೃತ ಪಾನವನಿತ್ತ ಗೋವಿಂದ
ರಮಣಿಯ ತಂದ ವರಹಾರೂಪ ಗೋವಿಂದ |
ಭ್ರಮಿಸಿ ಕಂಭದೊಳುದುಭವಿಸಿದ ಗೋವಿಂದ
ಕ್ಷಮೆ ತಾಳಿ ಬ್ರಹ್ಮಚಾರಿಯಾದೆ ಗೋವಿಂದ |
ಸಮರದೊಳಖಿಳರಾಯರ ಕೊಂದೆ ಗೋವಿಂದ
ಕಮಲಾಕ್ಷ ಕಡಲಕಟ್ಟಿದ ಧಿಟ್ಟ ಗೋವಿಂದ |
ಮಮತೆಯೊಳಿಳೆಯ ಗೋಗಳ ಕಾದೆ ಗೋವಿಂದ
ರಮಣೇರಿಗೊಲಿದು ಬೆತ್ತಲೆನಿಂತೆ ಗೋವಿಂದ |
ವಿಮಲ ತುರಗವನೇರಿದ ಕಲ್ಕಿ ಗೋವಿಂದ
ನಮಿಪರೊಳಿಹೆ ಗೋವಿಂದ ||
ನಿಂದಿಪರಿಗೆ ಶಮನನಂತಿಹೆ ಗೋವಿಂದ
ಎಲ್ಲರೊಳಿಪ್ಪ ಅಮಿತ ಮಹಿಮ ಗೋವಿಂದ |
ಇಂಗಡಲೊಳಿಂಗಮನ ನಿರ್ಜಿತ ಗೋವಿಂದ
ಅಚ್ಯುತ ಸರ್ವೋತ್ತಮನೆ ಚಿನ್ಮಯ ಗೋವಿಂದ |
ಅಚಲಮುಕ್ತಿ ಕ್ರಮವ ಬೋಧಿಸು ಗೋವಿಂದ
ನಮೋ ಲಕ್ಷ್ಮೀರಮಣ ದಶಾವತಾರವ ತಾಳ್ದ ಗೋವಿಂದ || ೧ ||

ಮನವೆನ್ನ ಮಾತುಕೇಳದು ಕಾಣೋ ಗೋವಿಂದ |
ಮನವ ಗೆಲ್ಲುವ ಬಗೆ ಎನಗಿಲ್ಲ ಗೋವಿಂದ

ಕನಸಿನಂಥ ದೇಹ ಸ್ಥಿರವಲ್ಲ ಗೋವಿಂದ ।
ಬಿನುಗು ಬುದ್ಧಿಗಳನ್ನು ಬಿಡಿಸಯ್ಯ ಗೋವಿಂದ
ನೆನಹ ನಿನ್ನೊಳಗಿಟ್ಟು ಸಲಹಯ್ಯ ಗೋವಿಂದ ।
ನೆನೆವ ದಾಸರ ಮನದೊಳಗಿಹ ಗೋವಿಂದ
ಘನಮಹಿಮನೆ ನಿನ್ನ ಮೊರೆಹೊಕ್ಕೆ ಗೋವಿಂದ ।
ನಿನಗಿಲ್ಲದಪಕೀರ್ತಿ ನನಗೇನೋ ಗೋವಿಂದ
ಜನನ ರಹಿತ ಗೋವಿಂದ ।
ನಿನ್ನಡಿಗಳ ನೆನಹು ಕೊಡೋ ಗೋವಿಂದ
ದುರ್ವಿಷಯ ವಾಸನೆ ಬಿಡಿಸೊ ಗೋವಿಂದ ।
ಕುತ್ಸಿಕ ಕೆಟ್ಟತನವ ಬಿಡಿಸೊ ಗೋವಿಂದ
ಸದ್ಗುಣವೆಂಬ ಧನವ ತುಂಬಿಸೊ ಗೋವಿಂದ ।
ಇದಕೆ ಬಡತನವೆ ನಿನಗೆ ಗೋವಿಂದ
ಸದಾ ನಿನ್ನ ಘನ ಸ್ಮರಣೆಕೊಡು ಗೋವಿಂದ ।
ಸದಾನಂದ ಸನಕ ಸನಂದಾರ್ಚಿತ ಗೋವಿಂದ ॥ ೨ ॥

ನರಬೊಂಬೆಗಳ ಮಾಡಿ ಕುಣಿಸುವ ಗೋವಿಂದ ।
ನರರ ನೋಡಿ ನೋಡಿ ನಗುತಿಪ್ಪ ಗೋವಿಂದ
ಅರಿಯದಂತಖಿಳರೊಳಡಗಿಪ್ಪ ಗೋವಿಂದ ।
ಅರಿಯಾಡಂಬರಗಳ ಹೊಡೆದಂಥ ಗೋವಿಂದ
ಅರಿಯದ ಮುನಿಸತಿಗೊಲಿದಂಥ ಗೋವಿಂದ ।
ತರಳನ ಕರೆದು ಆದರಿಸಿದ ಗೋವಿಂದ
ಸುರಬ್ರಹ್ಮಾದಿಗಳಿಗೆ ದೊರೆಯು ನೀ ಗೋವಿಂದ ।
ಪರಮಪಾವನನೆಂಬ ಬಿರುದುಳ್ಳ ಗೋವಿಂದ
ಪರಮ ಪುರುಷ ಪುರುಷೋತ್ತಮ ಗೋವಿಂದ ।
ಪರಬ್ರಹ್ಮ ಪರಾತ್ಪರ ಶ್ರೀಶ ಗೋವಿಂದ
ಮರೆಹೊಕ್ಕ ಭಕ್ತರ ಸಲಹುವ ಗೋವಿಂದ ।
ಕರಿರಾಜ ಕರೆಯಲೊದಗಿ ಬಂದೆ ಗೋವಿಂದ

ಗರುಡ ಗಮನ ಗೋವಿಂದ ।
ಕಿನ್ನರ ಸಿದ್ಧ ಗರುಡ ಸನ್ನುತ ಗೋವಿಂದ
ಅಪರಿಮಿತ ಕರುಣಾಸಾಗರ ಗೋವಿಂದ ।
ಅರಿಯದಂಥ ಪರಮಜ್ಯೋತಿಯೆ ಗೋವಿಂದ
ಗಂಗೆಯ ಪೆತ್ತ ಚರಣ ನಿರ್ಗುಣ ಗೋವಿಂದ ।
ತೆತ್ತೀಸಕೋಟಿ ಸುರರ ಪೊರೆವ ಗೋವಿಂದ
ಶ್ರೀವೈಕುಂಠ ಪುರದೊಳಗಿಹ ಗೋವಿಂದ ।
ಸರ್ವಾನಂದ ಶರಣು ಕನಕ ಆದಿಕೇಶವ ಗೋವಿಂದ ಶ್ರೀ ೩ ॥

—— ೦ ——

ಪುರಂದರದಾಸರು ನಾಮಕೀರ್ತನೆ ಮಾಡುವವರಿಗೆ ನರಕಭಯವಿಲ್ಲ ಎಂಬುದಾಗಿ ಬಲು ಭರವಸೆಯಿಂದ ಕೆಳಕಂಡ ನಾಮವನ್ನು ಹಾಡಿರುತ್ತಾರೆ.

ಧನಾಸರಿ ಆದಿತಾಳ

ನಾಮಕೀರ್ತನೆ । ಅನುದಿನಮಾಳ್ಪಗೆ । ನರಕಭಯಗಳುಂಟೇ ॥ಪ॥
ನಾಮವೊಂದೇ ಯಮ । ನಾಳ್ಗಳನೊದೆದು ಅ । ಜಾಮಿಳನಿಗೆ ಸು ।
ಕ್ಷೇಮಕೊಟ್ಟ । ॥ಹರಿ॥ ಅ॥
ಕೇಸರಿಗಂಜದ ಮೃಗವುಂಟೇ । ದಿ । ನೇಶಗಂಜದತಮವುಂಟೇ
ವಾಸುದೇವವೈಕುಂಠ ಜಗನ್ಮಯ । ಕೇಶವಕೃಷ್ಣ ಎಂದುಚ್ಚರಿಸುವ ॥೧॥
ಕುಲಿಶಕಂಜದ ಗಿರಿಯುಂಟೇ ಬಲು । ಪ್ರಳಯಬಂದಾಗ
ಜೀವಿಸರುಂಟೆ ॥
ಜಲಜನಾಭ ಗೋವಿಂದಜನಾರ್ಧನ । ಕಲುಷಹರಣ ಕರಿರಾಜ
ವರದನೆಂಬ ॥೨॥
ಗರುಡಗಂಜದ ಫಣಿಯುಂಟೇ । ಧ । ಳ್ಳುರಿಯಲಿ ಬೇಯದ
ತೃಣವುಂಟೇ ನರಹರಿನಾರಾಯಣ ದಾಮೋದರ ।
ಪುರಂದರವಿಠಲನೆಂದುಚ್ಚರಿಸುವ ॥೩॥

—— ೦ ——

ಮಹಾನುಭಾವರಾದ ವಿಜಯದಾಸರು ಹರಿನಾಮ ಸ್ಮರಣೆಯಿಂದ ಕೃತಾರ್ಥರಾದ ಪರಮ ಭಾಗವತರೆಲ್ಲರ ನಾಮ ಸ್ಮರಣೆ ದೊರೆಯುವಂತೆ "ಹರಿನಾಮ ಸುಳಾದಿ" ಯನ್ನು ರಚಿಸಿರುತ್ತಾರೆ. ಅದು ಕೆಳಕಂಡಂತಿದೆ:—

## ಧೃವತಾಳ

ಹರಿನಾಮ ಪ್ರಹ್ಲಾದನ ಮೊರೆ ಕೇಳಿ ಸಲಹಿತು ।
ಹರಿನಾಮ ಗಜೇಂದ್ರನ ವಿಪತ್ತು ಕಳೆಯಿತು
ಹರಿನಾಮ ಅಜಾಮಿಳನ ಪಾತಕ ಕೆಡಿಸಿತು ।
ಹರಿನಾಮ ನಾರದಗೆ ನೀಚ ಯೋನಿ ಬಿಡಿಸಿತು
ಹರಿನಾಮ ಭೀಷ್ಮನ ಪಂಥವ ಗೆಲಿಸಿತು ।
ಹರಿನಾಮ ಅಂಬರಿಷನ ವ್ರತವ ಸಂರಕ್ಷಿಸಿತು
ಹರಿನಾಮ ವಿಭೀಷಣನಿಗೆ ಪಟ್ಟವ ಕಟ್ಟಿಸಿತು ।
ಹರಿನಾಮ ದ್ರೌಪದಿಯ ಮಾನ ಸಂರಕ್ಷಿಸಿತು
ಹರಿನಾಮ ಧೃವನ ತಪಸಿಗೆ ಒಲಿಯಿತು ।
ಹರಿನಾಮ ಅಹಲ್ಯೆಯ ಶಾಪ ಹಿಂಗಿಸಿತು
ಹರಿನಾಮ ಬಲಿನೃಪನ ಇಂದ್ರನ ಮಾಡಿತು ।
ಹರಿನಾಮ ಕುಚೇಲನ ದಾರಿದ್ರ್ಯ ಭಂಗಿಸಿತು
ಹರಿನಾಮ ವಿದುರನ ಕ್ಷೀರಕ್ಕೆ ಹಿಗ್ಗಿತು ।
ಹರಿನಾಮ ದೇವಕಿಯ ಬಂಧನ ಬಿಡಿಸಿತು
ಹರಿನಾಮ ಪರೀಕ್ಷಿತನ ಉದುರದಿ ಸಲಹಿತು ।
ಹರಿನಾಮ ಜನಕನ ದೃಢಮತಿ ಮಾಡಿತು
ಹರಿನಾಮ ಪುಂಡರಿಕನ ಭಕ್ತಿಗೆ ಮೆಚ್ಚಿತು ।
ಹರಿನಾಮ ಗುರು ಪುತ್ರರ ತಿರುಗಿ ಬದುಕಿಸಿತು
ಹರಿನಾಮ ವಾಲ್ಮೀಕನ ಮುನಿಪನೆಂದೆನಿಸಿತು ।
ಹರಿನಾಮ ಪರಿಪರಿ ಭಕ್ತರೊಡನಾಡಿತು
ಹರಿನಾಮ ಹೊರತನ್ಯ ಉಪಾಯವಿಲ್ಲವಯ್ಯ ।
ಹರಿನಾಮ ಸಮಸ್ತ ಭಯ ಪರಿಹರವಯ್ಯ

ಹರಿನಾಮ ಮನಸಿನ ನಿರ್ಮಲಕೆ ಕಾರಣ |
ಹರಿನಾಮ ವೇದವಕ್ತೃಳಿಗೆ ಪಾರಾಯಣ
ಹರಿನಾಮ ಅಜಭವರಿಗೆ ಪರಮ ಪ್ರಾಣ |
ಹರಿ ಹರಿ ಹರಿಯನ್ನೆ ರೋಗ ನಿವಾರಣ
ಹರಿನಾಮಕೆ ಸ್ವಾಮಿ ವಿಜಯವಿಠಲರೇಯ |
ಹರಿಯೆಂದು ಪರಿಶುದ್ಧನಾಗಿ ಘುಡಿಯುಳ್ಳ ॥ ೧ ॥

ಮಟ್ಟತಾಳ

ಹರಿನಾಮವೇ ನಮ್ಮ ವಶವಾಗಿ ಇರಲಿಕ್ಕೆ |
ಮರೆದು ಪಾಮರನಾಗಿ ಕೆಟ್ಟುಪೋಗುವದೇಕೆ
ಮರುಳೆ ಮಾತನು ಕೇಳು ಅಂತರ ಕ್ಲೇಶವನು |
ಇರಗೊಡದಿರು ನಿನಗೆ ತಿಳುಹುವೆನು ಇನ್ನು
ಮುರ ಮರ್ದನ ನಮ್ಮ ವಿಜಯವಿಠಲನ್ನ |
ಸ್ಮರಣೆಮಾಡಲು ಬಂದ ದುರಿತವಿನಾಶನ ॥ ೨ ॥

ತ್ರಿವುಟತಾಳ

ಹರಿನಾಮವೆಂಬುದೆ ದುರಿತ ಕಾನನವ ಸಂ |
ಹರಿಸುವ ಪ್ರಳಯಾಗ್ನಿಯಂತಿಪ್ಪದು
ಹರಿನಾಮ ನೆನೆದರೆ ಕುಲ ಕೋಟಿಯುದ್ಧಾರ |
ಹರಿನಾಮ ನೆನೆದರೆ ಕೇಡಿಲ್ಲ ಕೇಡಿಲ್ಲ
ಹರಿನಾಮ ಜಗದಿ ಅಖಂಡವಾಗಿ ನಿಂ |
ದಿರುತ ವ್ಯಾಪಿಸಿಕೊಂಡು ಇಪ್ಪದದಕೋ
ಹರಿನಾಮ ಪ್ರತಿಬಂಧಕಗಳ ಕಳೆದು |
ಪೊರೆಯುತಲಿರೆ ನಿಮಗೆ ಚಿಂತೆ ಇನ್ಯಾಕೆ
ಹರಿತಾಪ ಹರ ನಮ್ಮ ವಿಜಯವಿಠಲ |
ಸಜ್ಜನರ ಮಾತ ಪುಸಿಯಾಗಗೊಡುವನೇನು? ॥ ೩ ॥

### ಅಟ್ಟತಾಳ

ಹರಿನಾಮ ಇದ್ದಲ್ಲಿ ಹರುಷವೆ ಎಂದಿಗು ।
ಸುರರು ಬಲ್ಲರು ಬಹುಕಾಲದಿಂದ
ನಿರಯದಿಂದ ಕಡೆಹಾಯಿಸುವದು ಆ ।
ದರದಿಂದ ಲಾವಾಗ ಪರಿಪಾಲಿಸುವದು
ನಿರುತ ಜ್ಞಾನ ಭಕ್ತಿ ವೈರಾಗ್ಯ ಕೊಡುವದು ।
ಬರಿದಾಗದುಕಣೋ ತುಂಬಿದ ಭಂಢಾರ
ಧರಣಿ ಪಾಲಕ ನಮ್ಮ ವಿಜಯವಿಠಲರೇಯ ।
ಹೊರಗೆ ಒಳಗೆ ಇದ್ದು ಆನಂದವೀವ ॥ ೪ ॥

### ಆದಿತಾಳ

ಒಂದು ಒಂದು ಹರಿನಾಮ ನೆನೆಸಿದರೆ ।
ಸಂದಿ ಸಂದಿಯಲಿದ್ದ ಪಾಪ ಪರಿಹರ
ಕುಂದು ಎಣಿಸದಿರು ಸಂದೇಹ ಪಡದಿರು ।
ಪೊಂದು ತಿರುಗಿ ಪೊಂದು ಹರಿನಾಮ ಸ್ಮರಣೆ
ನಿಂದಲ್ಲಿ ಕುಳಿತಲ್ಲಿ ನಡೆದಾಡುವದರಲ್ಲಿ ।
ಮಂದಮತಿಯಲ್ಲಿ ಮದಡನಿದ್ದಲ್ಲಿ
ಮಂದರೋದ್ಧರ ನಮ್ಮ ವಿಜಯವಿಠಲ ಬಂದು ।
ಬಂಧುವಾಗಿ ಅಭೀಷ್ಟೆಯ ನೀವ ॥ ೫ ॥

### ಜತೆ

ಇಂತು ಹರಿಯ ಸ್ಮರಿಸಲಿನ್ನಾವ ಭಯವಿಲ್ಲ ।
ಕಂತುಪಿತ ನಮ್ಮ ವಿಜಯವಿಠಲ ಬಲ್ಲ ॥ ೧ ॥

ಸೂಚನೆ:— ನಾಮ ಮಹಿಮೆ ಹೇಳುವಾಗ ನಾಮವೆಂದರೂ ಹರಿಯೆಂದರೂ ಹರಿನಾಮವೆಂದರೂ ಒಂದೇ ಅರ್ಥ.

## ನಾಮವೇ ಮಂತ್ರ

ಮನನ ವೂಡುವವನನ್ನು ಉದ್ಧರಿಸುವುದು ಮಂತ್ರ. ಇದರಿಂದ ಆಂದರೆ ಈ ನಾಮೋಚ್ಚಾರದಿಂದ ತಿಳಿಯಲ್ಪಡುವದಾಧುದರಿಂದ ಮಂತ್ರವೆಂದು ಹೆಸರು. ಅಂದ ಮೇಲೆ ನಾಮಕ್ಕಿಂತ ಮಂತ್ರ[illegible]ವದು ? ವ್ಯಾಹೃತಿಪೂರ್ವಕವಾಗಿ ಸ್ವರದಿಂದ ಹೇಳಿದರೂ ನಾಮಸಹಿತವಾಗಿರುವುದರಿಂದ ಪ್ರಧಾನವಾಗಿರುವುದು ನಾಮ. ವ್ಯಾಹೃತಿಯೂ ನಾಮ- ಆದ್ದರಿಂದ ರಾಮನಾಮವನ್ನು ಪುರಂದರದಾಸರು ರಾಮ ಮಂತ್ರವೆಂದೇ ಕರೆದಿದ್ದಾರೆ.

**ಮಧ್ಯಮಾವತಿ** **ಆದಿತಾಳ**

ರಾಮ ಮಂತ್ರವಜಪಿಸೊ | ಏ ಮನುಜ | ರಾಮಮಂತ್ರವ
ಜಪಿಸೊ ||ಪ||

ಆ ಮಂತ್ರ ಈ ಮಂತ್ರ ನೆಚ್ಚಿ ಕೆಡಲಿ ಬೇಡ | ಸೋಮಶೇಖರ ತನ್ನ
ಸತಿಗೆ ಪೇಳಿದ್ಧ ಮಂತ್ರ ||ಅ||

ಕುಲಹೀನನಾದರು ಕೂಗಿ ಜಪಿಸುವ ಮಂತ್ರ |
ಸಲೆ ಬೀದಿ ಬೀದಿಯೊಳು ನುಡಿವ ಮಂತ್ರ
ಹಲವು ಪಾಪಂಗಳ ಹತಗೊಳಿಸುವ ಮಂತ್ರ |
ಸುಲಭದಿಂದಲಿ ಸ್ವರ್ಗ ಸೂರೆಗೊಂಬುವ ಮಂತ್ರ || ೧ ||

ಸ್ನಾನ ಮೌನಂಗಳಿಗೆ ಸಾಧನದ ಮಂತ್ರ |
ಜ್ಞಾನಿಗಳು ಮನದಿ ಧ್ಯಾನಿಪ ಮಂತ್ರ
ಹೀನ ಗುಣಂಗಳ ಹಿಂಗಿಸುವ ಮಂತ್ರ |
ಏನೆಂಬೆ ವಿಭೀಷಣಗೆ ಪಟ್ಟಕಟ್ಟಿದ ಮಂತ್ರ || ೨ ||

ಸಕಲ ವೇದಂಗಳಿಗೆ ಸಾರವೆನಿಪ ಮಂತ್ರ |
ಮುಕುತಿ ಮಾರ್ಗಕೆ ಇದೇ ಮೂಲ ಮಂತ್ರ
ಭಕುತಿರಸಕೆ ಬಾಟೆ ತೋರುವ ಮಂತ್ರ |
ಸುಖನಿಧಿ ಪುರಂದರವಿಠಲನ ಮಂತ್ರ || ೩ ||

ಹೀಗೆ ನಾನಾ ರೀತಿಗಳಲ್ಲಿ ನಾಮ ಸ್ಮರಣೆಯ ಮಹಿಮೆಯನ್ನು ಹರಿದಾಸರು ಹೊಗಳಿದ್ದಾರೆ. ಈ ಒಂದು ವಿಷಯದಲ್ಲಿ ಒಬ್ಬೊಬ್ಬರು ಮಾಡಿರುವ ದೇವರ ನಾಮಗಳೇ ಹೇರಳವಾಗಿವೆ.

ಇತ್ತೀಚಿನ ಕಾಲದಲ್ಲಿ ಮಹಾಪುರುಷರೆಂದು ಪ್ರಖ್ಯಾತಿ ಪಡೆದ ಶ್ರೀ ರಾಮಕೃಷ್ಣ ಪರಮಹಂಸರು ಮಾಡುತ್ತಿದ್ದುದು ನಿರಂತರ ನಾಮ ಸ್ಮರಣೆ. ದೇವಿಯ ಭಕ್ತರಾದ ಅವರು ಹೇಳುತ್ತಿದ್ದ ದೋಹಾಯಿಯಲ್ಲಿ "ಸಿರಫ್‌ನಾಮ ಜಪುನೇಸೇ ವೃಥಾ ದೂರಹೋತೀ ಸಾರೀ" ಎಂಬದಾಗಿ ಹೇಳಿದ್ದಾರೆ.

ಅಂದಮೇಲೆ ಜೀವನು ಅಸ್ವತಂತ್ರನಾಗಿದ್ದರೇನು ? ಪರಮಾತ್ಮನ ನಾಮ ಭಜನೆಯಿಂದ ಪಾವನನಾದ ಮೇಲೆ ಜೀವನ ಭಾಗ್ಯಕ್ಕೆ ಕಡಿಮೆಯೆಲ್ಲಿದೆ ? ದೇವರು ಕೊಡುವಂತೆ ಲೋಕದ ನರರು ಕೊಡಬಲ್ಲರೆ ? ರಾಜ ಮೆಚ್ಚಿದರೆ ಧನ ವಾಹನವಿಭೂಷಣಗಳನ್ನು ಕೊಟ್ಟಾನು. ವೃತ್ತಿ ಕ್ಷೇತ್ರಗಳನ್ನು ಕೊಟ್ಟಾನು. ಜನನ ಮರಣಗಳು ಬರದಂತೆ ಮಾಡಬಲ್ಲನೆ ? ವೃದ್ಧಾಪ್ಯ ಬರದಂತೆ ಮಾಡಬಲ್ಲನೆ ? ಪರಮಾತ್ಮನು ಕೊಡಲು ಮೊದಲು ಮಾಡಿದರೆ ತನ್ನ ಮನೆಯನ್ನೇ ಕೊಡುತ್ತಾನೆ. ತನ್ನನ್ನು ಕೊಡುತ್ತಾನೆ. ಈ ಅರ್ಥದ ಮಾತನ್ನು ಜಗನ್ನಾಥದಾಸರು—

ಜನಪಮೆಚ್ಚಿದರೀವ ಧನ ವಾ
ಹನ ವಿಭೂಷಣ ವಸನ ಭೂಮಿಯ
ತನುಮನಗಳಿತ್ತಾದರಿಪರುಂಟೇನೊ ಲೋಕದೊಳು
ಅನವರತ ನೆನೆವವರನಂತಾ
ಸನವೆ ಮೊದಲಾದಾಲಯದೊಳಿ
ಟ್ಟಣುಗನಂದದಲವರ ವಶವಾಗುವ ಮಹಾಮಹಿಮ ॥ ೧೨ ॥

ಎಂಬದಾಗಿಯೂ

ಸ್ಮರಿಸುವವರಪರಾಧಗಳ ತಾ
ಸ್ಮರಿಸ ಸಕಲೇಷ್ಟಪ್ರದಾಯಕ
ಮರಳಿ ತನಗರ್ಪಿಸಲು ಕೊಟ್ಟುದನಂತ ಮಡಿಮಾಡಿ ॥

[illegible] [illegible] [illegible]
[illegible]
ಚರಿತ ಚಿನ್ಮಯಗಾತ್ರ ಲೋಕಪವಿತ್ರ ಸುಚರಿತ್ರ || ೮ || ೯.

[illegible] ಹೇಳುತ್ತಾರೆ. ದಾಸರ ದೃಷ್ಟಿಯಲ್ಲಿ ಹೃದಯ [illegible]ವಾದದ್ದು, ಎಂಬುದಕ್ಕೆ ಕೆಳಗಿನ ಎರಡು [illegible]

ಸರ್ವದೇಶವು ಪುಣ್ಯದೇಶವು
ಸರ್ವಕಾಲವು ಪುಣ್ಯಕಾಲವು
ಸರ್ವಜೀವರು ದಾನಪಾತ್ರರು ಮೂರುಲೋಕದೊಳು
ಸರ್ವಮಾತುಗಳೆಲ್ಲ ಮಂತ್ರವು
ಸರ್ವಕೆಲಸಗಳೆಲ್ಲ ಪೂಜೆಯು
ಸರ್ವಪರಿಪೂರ್ಣ ವಿಮಲಮೂರ್ತಿಧ್ಯಾನವುಳ್ಳವಗೆ || ೪ || ೧೦.

ಆವ ಕುಲದವನಾದೊಡೇ ನಿ
ನ್ನಾವ ದೇಶದೊಳಿದ್ದೊಡೇ ನಿ
ನ್ನಾವ ಕರ್ಮವ ಮಾಡಲೇ ನಿನ್ನಾವ ಕಾಲದಲಿ
ಶ್ರೀವರನ ಸರ್ವತ್ರದಲಿ ಸಂ
ಭಾವಿಸುತ ಪೂಜಿಸುತ ಮೋದಿಪ
ಕೋವಿದರಿಗುಂಟೇನು ಭಯದುಃಖಾದಿ ದ್ವಂದ್ವಗಳು || ೪ || ೧೨.

ಬಿಟ್ಟಿಗಳ ನೆವದಿಂದಡಾಗಲಿ
ಹೊಟ್ಟೆಗೋಸುಗ ಮಾದಡಾಗಲಿ
ಕೆಟ್ಟರೋಗ ಪ್ರಯುಕ್ತವಾಗಲಿ ಅಣಕದಿಂದೊಮ್ಮೆ
ನಿಟ್ಟುಸುರಿನಿಂ ಬಾಯ್ತೆರೆದು ಹರಿ
ವಿಠಲಾ ಸಲಹೆಂದೆನಲು ಕೈ
ಗೊಟ್ಟು ಕಾವಕೃಪಾಳು ಸಂತತ ತನ್ನ ಭಕತರನ

ದುಷ್ಟರೆನ್ನದೆ ದುರ್ವಿಷಯದಿಂ
ಪುಷ್ಟರೆನ್ನದೆ ಪೂತಕರ್ಮ
ಭ್ರಷ್ಟರೆನ್ನದೆ ಶ್ರೀದವಿಠಲವೇಣುಗೋಪಾಲ ||

ಕೃಷ್ಣ ಕೈಪಿಡಿವನು ಸುಸತ್ಯವಿ
ಶಿಷ್ಟ ದಾಸತ್ವವನು ಪಾಲಿಸಿ
ನಿಷ್ಠೆಯಿಂದಲಿ ಹರಿಕಥಾಮೃತಸಾರ ಪಠಿಸುವರ

ಇಂತಹ ಭರವಸೆಗಳಿರುವಾಗ ಶಾಸ್ತ್ರಗಳು ಅನುಕೂಲವಾಗಿರುವಾಗ ಜೀವನು ಭಯಪಡಲು ಕಾರಣವೇನು ? ನಾಮಸ್ಮರಣೆಯಿಂದ ಶ್ರವಣಾದಿ ನವವಿಧ ಭಕ್ತಿ ಸಾಧನೆಮಾಡಿದ ಭಕ್ತನಿಗೆ ಮುಕ್ತಿಯಲ್ಲದೆ ಮತ್ತೇನು ? ಭಯವೇನು ?

---

# ಅಧ್ಯಾಯ ೪

## ವಿವಿಧ ರಸಗಳು

ಭಕ್ತಿಪಂಥವು ಜೀವನ್ಮುಕ್ತಿಗೆ ಶ್ರೇಷ್ಠ ಫಲಕಾರಿಯಾದ ಮಾರ್ಗವೆಂದು ಶಾಸ್ತ್ರಗಳು ಸಾರುತ್ತಲಿವೆ. ಜೀವನ್ಮುಕ್ತನ ಪರಮಾನಂದಾನುಭವವನ್ನು ಶಾಸ್ತ್ರಕಾರರು "ರಸ" ಎಂದು ಕರೆಯುತ್ತಾರೆ. ಉಪನಿಷತ್ತು "ರಸೋವೈ ಸಃ ರಸಂಹ್ಯೇವಾಯಂ ಲಬ್ಧ್ವಾ ಆನಂದೀ ಭವತಿ" ಎಂಬುದಾಗಿ ಸಾರುತ್ತಲಿದೆ. ಶ್ರೀಮದ್ಭಾಗವತವು ಈ ದೈವೀ ಪ್ರೇಮರಸದ ವಿಸ್ತಾರವೆಂದು ಕಂಡುಬರುತ್ತಿದೆ. ರಜೋಗುಣ ತಮೋಗುಣಗಳ ಮಿಶ್ರಣವಿಲ್ಲದ ಕೇವಲ ಶುದ್ಧ ಮನಸ್ಸಿಗೆ ಸಂಬಂಧಪಟ್ಟ ಭಾವೋದ್ರೇಕಕ್ಕೆ ರಸವೆಂದು ಕರೆಯುತ್ತಾರೆ. ರಸವು ಶಬ್ದಗಳಿಂದ ಪೂರ್ತಿಯಾಗಿ ಬಣ್ಣಿಸಲು ಬರುವದಲ್ಲ. ರಸಗಳು ತರಂಗಗಳಂತೆ ಹೊರಹೊಮ್ಮುವದನ್ನು ಕಂಡು ಲೌಕಿಕ ಅನುಕೂಲಕ್ಕಾಗಿ ಸ್ಥಾಯಿ, ವ್ಯಭಿಚಾರಿ ಎಂದು ಕರೆದಿರುತ್ತಾರೆ. ಮತ್ತೆ ಅದೇ ರಸೋದ್ರೇಕದಲ್ಲಿ ಕೇವಲ ಅಂತರಂಗದಿಂದಾಗುವುದನ್ನು ಭಾವವೆಂತಲೂ, ಬಾಹ್ಯಸ್ಪರ್ಶಗಳಿಂದಾಗುವುದನ್ನು ವಿಭಾವವೆಂತಲೂ ವಿಭಾಗಿಸಿರುತ್ತಾರೆ. "ಶುದ್ಧ ಸತ್ವ ವಿಶೇಷಾತ್ಮಾ ಪ್ರೇಮಸೂರ್ಯಾಂಶುಸಾಮ್ಯಭಾಕ್" ಎಂದು ರಸಾಮೃತ ಸಿಂಧುವಿನಲ್ಲಿ ಹೇಳಿರುವಂತೆ, ಶುದ್ಧಸತ್ವಮಯವಾದ ಪ್ರೇಮಸೂರ್ಯಾಂಶು ಸದೃಶವಾದ ಮನಸ್ಸಿನ ಉದ್ರೇಕಸ್ಥಿತಿ ಭಾವ ಶಬ್ದದ ಅರ್ಥವೆಂದು ಹೇಳುತ್ತಾರೆ. ಸ್ಥಾಯಿಯೆಂದರೆ ಆಳವಾದ ಮನಸ್ಸಿನಲ್ಲಿ ರೂಢಮೂಲವಾಗಿರುವ ಆತ್ಮರತಿಯೆಂದು ಅರ್ಥಮಾಡುತ್ತಾರೆ. ಸ್ಥಾಯಿಯಲ್ಲದ್ದು ವ್ಯಭಿಚಾರಿ, ಭಾವವಲ್ಲದ್ದು ವಿಭಾವ ಎಂದು ಅನಿಸಿಕೊಳ್ಳುತ್ತವೆ.

ಇಂತಹ ರಸಭಾವಗಳ ವೈವಿಧ್ಯವನ್ನು ನೋಡಿ ನಾಟ್ಯಶಾಸ್ತ್ರ ಪ್ರವರ್ತಕನಾದ ಭರತಮುನಿಯು–ಶೃಂಗಾರ, ವೀರ, ರೌದ್ರ, ಭೀಭತ್ಸ, ಹಾಸ್ಯ, ಅದ್ಭುತ, ಭಯಾನಕ, ಕರುಣಗಳೆಂದು ೮ ಪ್ರಕಾರಗಳನ್ನೇರ್ಪಡಿಸಿದನು. ಅಗ್ನಿಪುರಾಣದಲ್ಲಿ

ಉಕ್ತವಾಗಿರುವ ಶಾಂತರಸವೂ ಸೇರಿ ರಸಗಳು ನವರಸಗಳಾದವು. ರಸಗಳ ಬೆಳವಣಿಗೆ ಕೇವಲ ಲೌಕಿಕವಾದುದನ್ನು ಚೈತನ್ಯಪಂಥಿಗಳು ಅಡ್ಡಕಟ್ಟಿ– ಶಾಂತಿ, ಪ್ರೀತಿ, ಸಖ್ಯ, ವಾತ್ಸಲ್ಯ, ಮಧುರರಸಗಳಿಂದ ಪಂಚಸಾಧನೆಗಳನ್ನು ಏರ್ಪಡಿಸಿಕೊಂಡರು. ವೀರ, ರೌದ್ರ, ಅದ್ಭುತ, ಭೀಭತ್ಸ, ಭಯಾನಕರಸಗಳನ್ನು ಅವರು ಬಿಟ್ಟರೂ, ಪ್ರೀತಿ ಸಖ್ಯ ವಾತ್ಸಲ್ಯ ರಸಗಳು ಕರುಣಾರಸದಲ್ಲೂ, ಮಧುರರಸವು ಶೃಂಗಾರರಸದಲ್ಲೂ, ಸಮಾವೇಶವಾಗುವುದರಿಂದ ಅವರದು ಪ್ರತ್ಯೇಕ ಮಾರ್ಗವಾಗುವುದಿಲ್ಲ. ಹರಿದಾಸರು ಮಧುರಭಾವದಿಂದ ಶೃಂಗಾರರಸದಲ್ಲಿ ಹಾಡಿರುವುದನ್ನಾರಂಭಿಸಿ, ಯಾರಿಗೂ ಬೇಡದ ಭೀಭತ್ಸವನ್ನು ಬಿಟ್ಟುಕೊಟ್ಟು ಮಿಕ್ಕ ರಸಗಳ ಹಾಡುಗಳ ಮಾದರಿಯನ್ನು ಕೊಟ್ಟರೆ ಈ ಅಧ್ಯಾಯದ ಉದ್ದೇಶವು ಪೂರ್ಣವಾಗುವುದು.

## ಶೃಂಗಾರರಸ

### ಶ್ರೀಕೃಷ್ಣನ ರಾಸಕ್ರೀಡಾ

ಶ್ರೀಕೃಷ್ಣನು ನವನಾರೀ ಕುಂಜರದಮೇಲೆ ಕುಳಿತು ಮಧುಕುಂಜವನಕ್ಕೆ ಬಂದ ಸನ್ನಿವೇಶವಿದು. ನೂತನವಾದ ಹೆಣ್ಣಾನೆಯಮೇಲೆ ಕುಳಿತು ಬಂದನೆಂಬುವುದು ಸಾಮಾನ್ಯ ಅರ್ಥ. ಒಂಭತ್ತು ಮಂದಿ ಸ್ತ್ರೀಯರು ಒಂದು ವಿಧವಾದ ಬಂಧನದಿಂದ ಆನೆಯ ಆಕಾರ ತಾಳಿದರೆಂದೂ, ಆ ಆನೆಯಮೇಲೆ ಕೃಷ್ಣನು ಕುಳಿತುಬಂದನೆಂದೂ ಹೇಳುವುದು ವಿಶೇಷಾರ್ಥ. ಶ್ರೀಮದ್ಭಾಗವತವು "ಬ್ರಹ್ಮಸೂತ್ರಪದಂ" ಎಂಬ ವಾಕ್ಯದಂತೆ ಬ್ರಹ್ಮಸೂತ್ರಗಳಿಗೆ ವ್ಯಾಖ್ಯಾನರೂಪವಾಗಿರುವ ಪುರಾಣವು. ಶ್ರೀಕೃಷ್ಣನು ಪೂರ್ಣಬ್ರಹ್ಮ ಬ್ರಹ್ಮಚಾರಿ ಎಂದು ಹೊಗಳಿಸಿಕೊಂಡವನು. ಅರ್ಜುನನಿಗೆ ಗೀತಾಶಾಸ್ತ್ರವನ್ನುಪದೇಶಿಸಿ ವಿಶ್ವರೂಪವನ್ನು ತೋರಿಸಿದವನು. ತಾತ್ವಿಕ ದೃಷ್ಟಿಯಿಂದ ವಿಚಾರಿಸಿದರೆ ಕೃಷ್ಣೋಪನಿಷತ್ತಿನಲ್ಲಿ——

ಯೋನಂದಃ ಪರಮಾನಂದಃ ಯಶೋದಾಮುಕ್ತಿಗೇಹಿನೀ
ದೇವಕೀ ಬ್ರಹ್ಮವಿದ್ಯಾಸಾ ಯಾವೇದೈರುಪಗೀಯತೇ
ನಿಗಮೋ ವಸುದೇವೋಯಃ ವೇದಾರ್ಥಂ ಕೃಷ್ಣರಾಮಕಂ

ವನೇ ವೃಂದಾವನೇ ಕ್ರೀಡನ್ ಗೋಪಗೋಪೀ ಸುರೈಸ್ಸಹ
ಗೋಪ್ಯೋಗಾವರುಚಸ್ತಸ್ಯಯಷ್ಟಿ ಕಾ ಕಮಲಾಸನಃ
ವಂಶಸ್ತು ಭಗವಾನ್ ರುದ್ರಃ...............

ಗೋಕುಲಂ ವನ ವೈಕುಂಠಂ ತಾಪಸಾಸ್ತತ್ರತೇದ್ರುಮಾಃ
ಲೋಭ ಕ್ರೋಧಾದಯೋದೈತ್ಯಾಃ ಕಲಿಕಾಲೋತಿರಸ್ಕೃತಃ
ಗೋಪರೂಪೋ ಹರಿಸ್ಸಾಕ್ಷಾನ್ಮಾಯಾ ಮಾನುಷ ವಿಗ್ರಹಃ
ಅಷ್ಟಾವಷ್ಟಸಹಸ್ರೇದ್ವೇ ಶತಾಧಿಕ ಸ್ತ್ರೀಯಸ್ತಥಾ
ಋಚೋಪನಿಷದಸ್ತಾವೈ ಬ್ರಹ್ಮರೂಪಾ ಋಚಸ್ತ್ರಿಯಃ
ಋಚಾಂ ದಶಸಹಸ್ರಾಣಿ ಋಚಾಂ ಪಂಚಶತಾನಿಚ
೨. ಋಚಾಮಶೀತಿಪಾದಾಶ್ಚ ...................ಇತ್ಯಾದಿ

ಎಂದು ಹೇಳಿರುವುದರಿಂದ ಋಗ್ವೇದ ಮಂತ್ರ ಸಂಖ್ಯಾ ೧೦,೫೮೦, ಯಜುರಾದಿ ಮಂತ್ರ ಸಂಖ್ಯಾ ೪,೩೪೮, ಉಪನಿಷನ್ಮಂತ್ರಗಳ ಸಂಖ್ಯಾ ೧,೧೮೦, ಒಟ್ಟು ೧೬,೧೦೮ ಆಗುತ್ತವೆ. ಶೃತಿ ಶಬ್ದ ಸಂಸ್ಕೃತದಲ್ಲಿ ಸ್ತ್ರೀಲಿಂಗ ವಾದ್ದರಿಂದ ಶೃತಿದೇವಿಯರೆನ್ನಿಸಿಕೊಳ್ಳುತ್ತಾರೆ. ಕೃಷ್ಣ ಶಬ್ದ ಪುಲ್ಲಿಂಗ ವಾದ್ದರಿಂದ ಪರಬ್ರಹ್ಮನೆನಿಸಿಕೊಳ್ಳುತ್ತಾನೆ. ಅಂದರೆ ಇಷ್ಟು ಶೃತಿಗಳಿಂದಲೂ ವಾಚ್ಯನಾದವನು ಕೃಷ್ಣನೆಂದು ಅರ್ಥ. ಇವೆಲ್ಲದರ ಆಧಾರದಮೇಲೆ, ಎಲ್ಲ ಪ್ರೇಮಗಳಿಗಿಂತ ಪತಿಪತ್ನೀ ಪ್ರೇಮ ಹಿರಿದಾಗಿರುವುದರಿಂದ, ಆಮ ವಿಷಯ ವಾಸನೆಯಿರದ–ಸ್ತ್ರೀಪುರುಷ ಭಾವನೆಯಿಂದ ಕಲುಷಿತವಾಗಿರದ ಮಧುರ ಭಕ್ತಿಯಾಗಿರುವುದರಿಂದ ಭಾಷಾ ಸರಣಿಯಲ್ಲಿ ಶೃಂಗಾರವಾಗಿ ಬಂದಿರುವು ದನ್ನು ತಕ್ಕ ರೀತಿಯಿಂದ ಅರ್ಥಮಾಡಿಕೊಳ್ಳಬೇಕಲ್ಲದೆ, ಅಪಾರ್ಥಮಾಡಿ ಕೊಳ್ಳುವುದು ಯೋಗ್ಯವಲ್ಲ.

ಆದ್ದರಿಂದ ರಾಸಕ್ರೀಡೆಯ ಪ್ರಥಮ ಪದವನ್ನು ಈ ಕೆಳಗೆ ಕೊಟ್ಟಿರು ತ್ತೇವೆ. ಇಲ್ಲಿ ನೋಡಬೇಕಾಗಿರುವುದು - ಭಾಷೆ ಹೇಗೆ ಹರಿದುಬಂದಿರುವು ದೆಂಬುದನ್ನು; ಕನ್ನಡವು ಎಳೆದಂತೆ–ಬರುವ ಸರಳ ಭಾಷೆಯೆಂಬುದನ್ನು ಹರಿದಾಸರು ಕನ್ನಡ ಜನತೆಗೆ ಮಾಡಿರುವ ಉಪಕಾರವನ್ನು.

## ಲಾವಣಿ

ಮಧುಕುಂಜವನಕೆ ಮುರವೈರಿ । ನವನಾರೀ ಕುಂಜರವೇರಿ
ಮೂರ್ಧುಸಂಜೆಯೊಳ್ ಹೊರಟನು ಶೌರಿ । ಜನರಂಜಕ ಮಾಡುತ ಸ್ವಾರಿ ||ಪ||

ಮಧುಕುಂಜ - ಮಧುಕುಂಜ || ಕೊಷ್ಟದು || ಶ್ರೀಗಂಧ – ಶ್ರೀಗಂಧ ||
ಶ್ರೀಗಂಧ ಲೇಪನ | ದಿಂದ ವದನ ಅರ | ವಿಂದದೊಳಗೆ ಮಕ |
ರಂದ ರಸವ ಸುಖ | ದಿಂದ ಕುಡಿವ ಅಳಿ | ಯಂದದಂತೆ ಕುರು
ಳಂದ ಮೆರೆಯೆ ಆಕರ್ಣ | ಹೊಂದಿದಾನಂದ ನಯನ ಬಲೆ
ಯಿಂದ ಸ್ತ್ರೀಯರು ಶರ - ಸಂದು ಕಾಮಶರದಿಂದ ಬಹಳ ತರ -
ನೊಂದು ಬಂದು ಬಳಸಿಂದು ನಿಲ್ಲೆ ಆ | ನಂದ ಗೋಪಿಯ
ಕಂದ ಕೊಳಲ ಸ್ವರ | ದಿಂದ ಮೋಹಿಸೆ | ಇಂದ್ರ ತನ್ನ ಸುರ
ವೃಂದ ಸಹಿತ ಮೇಲಂದಣಗಳ ಮುದದಿಂದ ಏರಿ ವರ
ಕುಂದ ಕುಸುಮ ಮಳೆಯಿಂದ | ಭೇರಿರವದಿಂದ | ತುತಿಸೆ | ಅರ
ವಿಂದನಾಭ ಶಿರಿಮುಂದ ಹಾಸಕುದು | ವೃಂದರಮಣ ಗಮನಾಗೆ | ಉಡು |
ವೃಂದ ರಮಣ ಬೆರಗಾಗೆ || ೧ ||

ಭರ್ಜರಿ | ವಸನ ಬಹುಪರಿ | ಭರಣ ವರ ಶಿರಿ | ಯರದಿ ಸುಂದರಿ |
ಮೆರೆವ ಬಾಪುರಿ | ಇಟ್ಟ ಕಸ್ತೂರಿ | ನವಿಲು ನವಗರಿ | ಶಿರದಿ ಅಲಂಕರಿ |
ತನ್ನ ಚಾತುರಿ | ಕೊಳಲ ಬಾಯ್ತುರಿ | ಯಿಂದ ಸುಸ್ವರ |
ಭರೀತ ರಾಗವ | ಹರೀಮಾಡೆ ಮೋ | ಹರೀಸಿ ಮೇಘ | ತ್ವರೀತದಿಂ |
ಹೂಂಕರಿಸಿ ಮೋಹಿಸೆ ಹರಿ || ಹರಿಣ ಸೂಕರ | ವ್ಯಾಘ್ರ ಕುಂಜರ |
ಶರಧಿ ಉಬ್ಬರ | ಭ್ರಮರ ಝೇಂಕರ | ಸುಖದ ಸುಸ್ವರ
ನವಿಲು ಜಾಗರಾದಿ ಸಲಿವ್ಯೆ | ಮರಾದು ಬಿಡೆ ಆ ಪುರಿ ||
ಆಪುರಿಯೊಳಗೆ ಸ್ತ್ರೀಯರು | ಮನೆಯ ತೊರೆದರು |
ಕುಂಭ ಕುಚೆಯರು | ಸುರತ ಪ್ರಿಯರು |
ಕಾಮಶರಾಸನಕೆ ಮನಬೆದರಿ | ಸ್ಮರಸೂರೆಗೊಂಡನೆಂದು ವದರಿ || ೨ ||

ವರ ನಾಗಶಯನ ಗಮನಾಗೆ | ಮದನ ಅನುವಾಗೆ | ಚಂದ್ರ
ಸಹವಾಗೆ | ಬಿಲ್ಲ ಹಿಡಿಬಾಗಿ | ಕುಸುಮ ಶರತೂಗಿ ಬರಲು
ಮೃದುವಾಗಿ | ಕೋಗಿಲೆಯು ಕೂಗೆ | ಸ್ತ್ರೀಯರ ಮನ | ಭೋಗ
ಪುಷ್ಪಫಲವಾಗೆ | ವೃಕ್ಷತಲೆದೂಗೆ | ಪಡೆದ ಫಲವೀಗ ಕೃಷ್ಣ
ಪದಕಾಗಿ ತಾವು ಏನಿ | ಯೋಗವಾಳ್ವ ಪರಿಯಾಗಿ ಬಾಗಿರೆ

ನಾಗಮಥನ ಬರುವಾಗ । ಶಿರಕೆ ಫಣಿಬಾಗಿ ಶೇಷ ಹಿಂ ।
ಭಾಗದಿ ಬರೆ । ಶರ । ಲಾಘವ ಕೊಟ್ಟ್ । ನಾಗವೇಣಿಯರು
ಭೋಗದಾಶೆಯಲಿ । ನಾಗ ಜಾಜಿ ಪುನ್ನಾಗ ಮಲ್ಲಿಗೆಗಳ
ಬೇಗದಿಂದ ರತಿ । ಭೋಗಕೆಮಗೆ ಪತಿ । ಯಾಗು ಎಂದು ತಾ
ವಾಗಿ ಮುಡಿಸಿ ಸಂತೈಸಿ ॥ ರತಿಜ ಕೌತುಕದಲಿ ಮೈಮರೆಸಿ ।
ವರದ ಶೇಷಗಿರಿ । ಧೊರೆ ಜಯವಿಠಲನ
ಮಾತುಮಾತಿಗೆ ನಮಿಸಿ । ಮಹಿತಾಮೃತ ಸುಖವನುಸುರಿಸಿ ॥ ೩ ॥

—— o ——

ಈ ಲಾವಣಿಯನ್ನು ಬರೆದವರು ಮೈಸೂರಿನಲ್ಲಿದ್ದ ಶ್ರೀನಿವಾಸದಾಸರೆಂಬುವರು. ಮಧುರ ಭಕ್ತಿಯಿಂದ ಶ್ರೀಮದ್ಭಾಗವತ ದಶಮಸ್ಕಂಧವನ್ನು ಹರಿಕಥೆಯಾಗಿ ಬರೆದವರು. ಇವರ ದ್ವಾರಕಾ ವರ್ಣನೆಯನ್ನು ಹೆಚ್ಚು ಪರಿಚಯವನ್ನು ಮುಂದಿನ ಪುಟಗಳಲ್ಲಿ ಓದಬಹುದು.

ಗೋಪಿಕಾ ಸ್ತ್ರೀಯರು ಶ್ರೀಕೃಷ್ಣನ ವೇಣುಗಾನ ಕೇಳಿ ಬರುತ್ತಲೇ ಉಭಯರಿಗೂ ನಡೆದ ಸಂಭಾಷಣೆಯು ಗಮನಾರ್ಹವಾಗಿದೆ. ಕೃಷ್ಣನು ಬಂದ ಗೋಪಿಯರನ್ನು ಸ್ವಾಗತಿಸಿ—ಇದು ಘೋರರಾತ್ರಿ, ಕ್ರೂರಮೃಗಗಳಿವೆ, ಹೆಂಗಸರು ಇಲ್ಲಿ ಇರಬಾರದು, ಪರಪುರುಷನಾದ ನಾನು ಮಾಡಿದ ವೇಣುಗಾಯನ ಕೇಳಿಬಂದದ್ದು ಅನುಚಿತ, ನಿಮ್ಮ ಪತಿಗಳಿಂದಲೂ ಬಂಧುಗಳಿಂದಲೂ ಕೂಡಿ ಬಾಳುವುದು ನಿಮಗೆ ಧರ್ಮ ಎಂದು ಹೇಳುತ್ತಾನೆ. ಗೋಪಿಯರು—

ಮೈವಂ ವಿಭೋರ್ಹಸಿ ಭವಾನ್ ಗದಿತುಂ ನೃಶಂಸಂ ಸಂತ್ಯಜ್ಯ
ಸರ್ವ ವಿಷಯಾಂಸ್ತವಪಾದ ಮೂಲಂ ।
ಭಕ್ತಾ ಭಜೇಮಧುರವಗ್ರಹಮಾತ್ಯಜಾಸ್ಮಾನ್ ದೇವೋ ಯಥಾದಿ ಪುರುಷೋ
ಭಜತೋ ಮುಮುಕ್ಷೂನ್ ॥

ತಾ॥ ಸ್ವಾಮಿಯೆ, ಇಷ್ಟು ಕ್ರೂರವಾತುಗಳನ್ನಾಡಬೇಡ, ಸಕಲ ವಿಷಯಗಳಲ್ಲಿರುವ ಮಮತೆಯನ್ನು ತ್ಯಜಿಸಿ ನಿನ್ನ ಪಾದಮೂಲವನ್ನು ಭಜಿಸು

ತ್ತಿದ್ದೇವೆ. ಆದಿದೇವನಾದ ಪುರುಷನು ಮೋಕ್ಷಾಪೇಕ್ಷಿಗಳನ್ನು ಹೇಗೆ ತ್ಯಜಿಸು ವದಿಲ್ಲವೋ ಹಾಗೆ ನೀನು ನಮ್ಮನ್ನು ತ್ಯಜಿಸಬೇಡ ಎಂದು ಗೋಪಿಯರು ಹೇಳುತ್ತಾರೆ.

ಇದೇ ಶ್ಲೋಕಾರ್ಥವನ್ನು ದಾಸರು ಹಾಡಾಗಿ ಹಾಡಿದ್ದಾರೆ.

ಆನಂದ ಭೈರವಿ ರೂಪಕತಾಳ

ನಿನ್ನಗಲಿ ಪೋಗಲಾರೆವೋ । ನೀರಜಾಕ್ಷ । ನಿನ್ನ ಸೇರಿ ಸುಖಿಸ
ಬಂದೆವೋ ॥ ಪ ॥

ಮನ್ನಿಸಾದೆ ಮಮತೆಯಿಂದ । ಭಿನ್ನ ನುಡಿಗಳಾಡಿ ನಮಗೆ
ಹೆಣ್ಣುತೋರಿ ಕಾಳಕೂಟ । ವನ್ನು ಕೊಡುವರೇನೊ ಕೃಷ್ಣ ॥ ಅ ॥

ಐದುವದಕೆ ಶಕ್ಯವಲ್ಲದ । ಆದಿಪುರುಷ । ಅಪ್ರಮೇಯ ಅಮರಮಾನದ ॥
ಶ್ರೀದ ನಮ್ಮ ಕಯ್ಯಬಿಡದೆ । ಆದರಿಸಬೇಕು ಪರವ । ರಾದರೇನು ನಿನ್ನ ಶರಣ
ರಾದಮೇಲೆ ಬಿಡುವರುಂಟೆ ॥ ೧ ॥

ಮೋಕ್ಷದಿಚ್ಛೆಯಿಂದ ನಿನ್ನನು । ಭಜಿಪ ಜನರ । ಪಕ್ಷವಹಿಸಿದಂತೆ ನಮ್ಮನು ॥
ರಕ್ಷಿಸಾದೆ ಬಿಡುವರೇ ಕಟಾಕ್ಷದಿಂದ ಈಕ್ಷಿಸಾದೆ । ಲಕ್ಷ್ಮಿದೇವಿ ನಿನಗೆ ಬಹಳಾ
ಪೇಕ್ಷೆಯಿಂದ ಮೋಹಿಸಿದಳೆ ॥ ೨ ॥

ಅನಘ ನಿನ್ನ ನೋಡಿ ಮೋಹಿಸಿ । ಅಂತರಾತ್ಮ । ತನು ಮನಸ್ಸು ನಿನಗೆ ಅರ್ಪಿಸಿ॥
ಜನನ ಮರಣದಿಂದ ಜನರು । ದಣಿವರೇನೊ ಕಾಂತನಮ್ಮ
ಮನಸಿನಂತೆ ಒಲಿದು ಸಲಹೊ ।
ವನಜನಾಭ ಜಯವಿಠಲ ॥ ೩ ॥

## ನೆಂಟರೆಂದರೆ

ತನುವಿನ ನೆಂಟರು ಕೆಲವರು ನಮಗಿನ್ನು ।
ಧನದಿಂದ ನೆಂಟರು ಕೆಲವರು ನಮಗಿನ್ನು
ಗುಣದಿಂದ ನೆಂಟರು ಕೆಲವರು ನಮಗಿನ್ನು ।

ಮನದಿಂದ ನೆಂಟರು ಕೆಲವರು ನಮಗಿನ್ನು
ದಿನದಿಂದ ನೆಂಟರು ಕೆಲವರು ನಮಗಿನ್ನು ।
ಇನಿತು ನೆಂಟರೊಳು ಎನಗೆ ಒಬ್ಬರ ಕಾಣೆ
ಅನುವಾಗಿ ಇದ್ದಾಗ ಅಷ್ಟೂ ನಮ್ಮವರೆಲ್ಲ ।
ಅನುವು ತಪ್ಪಿದರಿನ್ನು ಯಾರೂ ನಮ್ಮವರಲ್ಲ
ನಿನಗೆ ಎನಗೆ ನೆಂಟತನವು ಹೀಗೆ ಅಲ್ಲ ।
ಅನಿಮಿಷ ಅಗಲದೆ ಅನಿಮಿತ್ತ ಬಂಧುವಾಗಿ
ಕ್ಷಣ ಬಿಡದಲೆ ಕಾವ ಗೋಪಾಲ ವಿಠಲ ।
ನಿನಗೆ ಮಾಡುವದೇನೊ ಎನ್ನಿಂದ ನಮೊನಮೊ ॥ ೧ ॥

ಎಂದು ಮೊರೆಯಿಡುತ್ತಾರೆ. ಈ ಬಗೆಯ ಪ್ರಶ್ನೋತ್ತರಗಳಿಂದ ಪ್ರಾರಂಭವಾದ ಉಭಯರ ಸಂಬಂಧವು ಕಡೆಯತನಕ ಹೀಗೇ ನಡೆದಿದೆ. ಸ್ತ್ರೀಪುರುಷ ಲಿಂಗಗಳ ಸಂಬಂಧವಾದ ಕುತ್ಸಿತ ಭಾವನೆಗಳು ಬರಲು ಇಲ್ಲಿ ಅವಕಾಶವಿಲ್ಲ. ಸಂಸ್ಕೃತದಲ್ಲಾಗಲಿ, ಇತರ ಭಾಷೆಗಳಲ್ಲಾಗಲಿ, ಕನ್ನಡದಲ್ಲಾಗಲಿ ಭಾಷಾ ಮರ್ಯಾದೆಯಂತೆ ಮಾತು ಮೂಢರಿಗೂ ಸವಿಕಟ್ಟಾಗುವಂತೆ ಶೃಂಗಾರರಸಮಯವಾಗಿ ಶ್ಲೋಕಗಳು, ಪದ ಪದ್ಯಗಳು ರಚಿತವಾಗಿವೆ. ಶೃಂಗಾರವು ಮಧುರ ಭಕ್ತಿಯಾಗಿ ಆದರಿಂದ ಮಹಾಭಾವವುತ್ಪನ್ನವಾಗಿ ಹೇಳುವವರಿಗೆ ಕೇಳುವವರಿಗೆ ಭಗವದ್ಭಕ್ತಿಯನ್ನು ವೃದ್ಧಿಗೊಳಿಸುವವುಗಳಾಗಿವೆ. ಭಾಷಾ ಮರ್ಯಾದೆ ತಿಳಿಯದೆ, ಕಾವ್ಯಗಳನ್ನು ಓದದೆ, ಲಘು ಮನಸ್ಸಿನಿಂದ ಅಪಾರ್ಥಮಾಡಿಕೊಂಡರೆ ಪ್ರಮಾದವುಂಟಾಗುತ್ತದೆ. ಕೆಳಕಂಡ ಪದ, ಕೃಷ್ಣ ವಿರಹದಿಂದ ಸಂತಪ್ತರಾದ ಗೋಪಿಯರು ವನದಲ್ಲೆಲ್ಲಾ ಹುಡುಕುವರೆಂಬ ಸನ್ನಿವೇಶಕ್ಕೆ ಸಂಬಂಧಪಟ್ಟದ್ದು.

ಕಾಂಬೋಧಿ - ಆದಿತಾಳ

ಹುಡುಕುವ ಬನ್ನಿರೆ ಹೂವಿನ ವನದೊಳಗೆ । ಕೃಷ್ಣನ ಒಳ ಹೊರಗೆ ॥ಪ॥
ತಡಮಾಡದೆ ನಾವ್ತವಕದಿಂದಲಿ ಕೂಡಿ । ಪಾಡುತ ಕೊಂಡಾಡಿ ॥ಅ॥
ಯಮುನೆಯ ತೀರದಿ ಸಂಪಿಗೆ ನೆರಳಿನಲಿ । ಮರೆಯದೆ ನೋಡುತಲಿ

ಕುಮುದ ಪಾರಿಜಾತ ಗಿಡಗಳ ಮರೆಯಲ್ಲಿ । ಬಿಡವೆ ಅಲ್ಲಲ್ಲೀ
ಕಮಲ ಮಲ್ಲಿಗೆ ಜಾಜಿ ಮಾವಿನಮರವಡಿಯ । ಲ್ಲಿರನೇ ನಮ್ಮೊಡೆಯ ॥
ನಮಿಸೆವು ಬಾರೆಂದು ನಾವೆಲ್ಲ ಕೂಗುವೆವೇ । ಮಾಡುವಿರೇಕೆ ತಡ ॥೧॥

ಕಾಣಲಿಲ್ಲವೆ ಶಾರೀಕ ಶುಕವೆ ಭೃಂಗ । ಹರಿಣ ನವಿಲು ಹಂಗ
ವೇಣನೂದುತ ಬಂದ ಕೋಕಿಲೆ ಕೇಳು । ಎಲ್ಲಿಹ ರಂಗ ಹೇಳು
ಜಾಣತನವ ಯವ್ವನವನೊಪ್ಪಿಸಿ ನಾವು । ಈ ಪರಿನಿಂದೇವು ॥
ತಾನೆ ಒಲಿದು ನಮ್ಮ ತಪ್ಪಿಸಿ ಪೋಗುವನೇ । ಕೇಳಿರಿ ಮೃಗಗಳಿರ ॥೨॥

ಈಪರಿ ಗೋಪಸ್ತ್ರೀಯರು ಒಂದಾಗಿ । ಕಳವಳಿಸುತ ಪೋಗಿ
ಶ್ರೀಪತಿ ಬಾರೆಂದು ಮೊರೆಯಿಡಲವ ಕೇಳಿ । ಬಂದನು ಆ ವ್ಯಾಳಿ
ತಾಪತಿಕರಿಸಿದ ಕರುಣದಿ ಗೋಪಾಲ । ಭೂಸುರ ಮುನಿಪಾಲ
ಶ್ರೀಪನ್ನಗ ಗಿರಿವಾಸ ವೆಂಕಟ ಪೊರೆವ । ನಂಬಿದರಘಹರಿವ ॥೩॥

ಹೀಗೆ ಹುಡುಕುತ್ತಾ ಶ್ರೀಕೃಷ್ಣನ ಪಾದಚಿಹ್ನೆಗಳನ್ನು ಕಂಡು

ಪೂರ್ವಿ ಆದಿತಾಳ

ಇದು ನೋಡಿ । ಇದು ನೋಡಿ ।
ಇದು ಪದುಮಾಕ್ಷನ ಪಾದಗಳಲ್ಲವೆ ॥ ಪ ॥

ಧ್ವಜವಜ್ರಾಂಕುಶ ರೇಖೆಯಿಂದೊಪ್ಪುವ ।
ಅಜಭವ ವಂದಿತ ಕುಜಪ್ರದ ಪಾದಗ । ಳಿದು ॥ ೧ ॥

ಗೋಕುಲದೊಳು ನಮ್ಮಾಕಳ ಕಾಯುವ ।
ಶ್ರೀಕರವಾದ ಸುಖೋದಯ ಪಾದಗ । ಳಿದು ॥ ೨ ॥

ಮುನಿಗಳು ಮನದೊಳು ನೆನೆದರು ಕಾಣದ ।
ಚಿನುಮಯನ ಪದವನಜಗಳಲ್ಲವೆ ॥ ೩ ॥

ದೃಷ್ಟಿಸಿ ನೋಡಿರಿ ಇಷ್ಟ ದೈವ ಜಯ ।
ವಿಠಲನ ಉತ್ಕೃಷ್ಟ ಪದದ್ವಯ ॥ ೪ ॥

ಎಂಬದಾಗಿ ಮತ್ತೆ ಮುಂದೆ ಮುಂದೆ ಹೋಗಿ ಶ್ರೀಕೃಷ್ಣನನ್ನು ಕಾಣುತ್ತಾರೆ. ಈ ಗೋಪಿಯರು ಬರುತ್ತಿರುವುದನ್ನು ನೋಡುತ್ತಾ ಕೃಷ್ಣನೊಡನಿದ್ದ ಮತ್ತೊರ್ವ ಲಲನೆಯು ಸ್ವಲ್ಪ ಮರೆಯಲ್ಲಿದ್ದು ಎದುರಿಗೆ ಬಂದು ಕಾಣಿಸಿ ಕೊಳ್ಳಲು ಗೋಪಿಯರು—

ಸೀಸಪದ್ಯ

ಸುಳಿಬಾಳೆಯೆಲೆಯಂತೆ ಸೋಮ ಮಂಡಲದಂತೆ
ಕಲಹಂಸಮರಿಯಂತೆ ಕಂಬುಕಂಠೀ
ಎಳೆ ಹವಳದ ಬಳ್ಳಿಯೆಸಳಿನಂದದಿನಾರಿ
ಕುಲಶಿರೋಮಣಿ ಕಾಂತಿವೀಚಿಯಿಂದ
ಕಲಭ ಕುಂಭವ ಪೋಲ್ವ ಕುಚಭಾರಕಾಬಾಲೆ
ಸೆಳೆನಡುವು ಬಳುಕುತಲಿ ಶೌರಿಯಿದ್ದ ||
ಬಳಿವಿಡಿದು ಬರಲು ಗೋಪ | ಲಲನೆಯರ
ಬಿಟ್ಟೇಕೆ | ಗೊಲಿವನೇನೆಂಬೆ | ಹಲವು ಜನ್ಮದ ಸುಕೃತವೊದಗಿತೆಂದು || ೧ ||

ಎಂದು ಆ ಲಲನೆಯ ಹಲವು ಜನ್ಮದ ಸುಕೃತ ಕಾರಣವಿರಬೇಕೆಂದು ಕೊಳ್ಳುತ್ತಾರೆ.

ಮೊಸರು ಬೇಕೇ ಮೊಸರು ಎಂದು ಕೇರಿಯಲ್ಲಿ ಬರುವ ನಾರಿಯೊಬ್ಬ ಳನ್ನು ಕೃಷ್ಣನು ಕಂಡಪರಿ, ಕೃಷ್ಣನಿಗೆ ಅವಳು ಉತ್ತರಕೊಟ್ಟಪರಿ, ಹರಿದಾಸರ ಬಾಯಿಂದ ಲಾವಣಿಯಾಗಿ ಹೇಗೆ ಹರಿದುಬಂದಿದೆಯೆಂಬುದನ್ನು ಕೇಳಕಂಡಂತೆ ಕೊಟ್ಟಿದೆ.

ಲಾವಣಿ

ನವನಾರಿ | ನವನಾರಿ | ನವನಾರಿ || ಪ ||
ನವನಾರಿ ಕೇರಿಯೊಳ್ | ವಾರೆನೋಟದಿಂ | ಸಾರುತ ಪಾಲ್ಮೊಸ |
ರಾರಿಗೆಂದಳು ವೈಯ್ಯಾರಿ | ಧ್ವನಿತೋರಿ || ಅ ||

ಬಲ್–ಭರಾದಿಂದ ಓಂ । ದ್ವರಾಡೌಳುಚ್ಛ್ವಾಸ । ತರಾತರದಿ ಜರ
ತರಾದ ಶೀರೆಯ । ಭರಾದಿ ನೆರಿಗೆಯ । ಝರೀಲಿ ಚೆರಿಸಿ । ವಾ
ಗ್ಝರೀಲಿ ಕಿರುನಗೆ । ಸುರೀಯುತಲಿ । ಭರ್ಜರೀಯ ಸೆರಗನು
ಭರಾದಿ ಬೀಸುತ । ಕರಾದಿ ಕಂಕಣರವಾದಿ ವಜ್ರದ । ಮುಕೂರ ಮುತ್ತಿನ
ಸರಾವು ಸರಿಗೆಯು । ತುರೂಬು ಕರದಲಿ । ಸರೀಸುತಾ ಮದ
ಕರೀಯ ಗತಿಯೊಳು । ಬರೂತ ಚಿತ್ರಾ । ಬರಾದ ಪರಿಯೊಳು
ಮೆರಾವ ಸುಂದರಿ । ಸ್ಮರಾನ ಶರಗಳ । ಸುರೀಯುತಲಿ ಮೈ
ಸಿರೀಯ ಬೀರುತ । ಸರಾಸನಯನವ । ತಿರೂಹುತಲಿವರ
ಸರೋಜ ಮುಖಿತಾ । ಬರೂತಲಿರುವದ । ಮುರಾರಿ ಕಂಡವಳ್
ಕರಾವ ಹಿಡಿದು ॥ ಭರಾದಿ ಬಿಟ್ಟವರ್‍ಯಾರೇ । ಚಲ್ । ಕರಾರು ಸುಂಕವ ತಾರೆ
ಎಲ್ಲಿಗೆ ಹೋಗುತಿನೀರೇ । ನಿಲ್ಲೆನಿಲ್ಲೆ ವೈಯ್ಯಾರೆ ॥೧॥

ಎಲೆಪೋರಾ । ಎಲೆಪೋರಾ । ಎಲೆಪೋರಾ ।
ಎಲೆ । ಪೋರ ನಿಗಮದ ಚೋರನ ಬಿಡದೆ ಕ್ಷ । ರೀರವ ಸೀಳಿದೆ
ಧೀರನಾಗಿ ಬಲ್ ಘೋರ ಶೈಲವ । ಹಾರಿಸಿ ಬೆನ್ನಿಲಿ । ಕೋರದಾಡೆಯೋಳ್
ಧರೆಯ ನೆಗಹಿದೆ । ನಾರಸಿಂಹನಾಗ್ಯಾರು ಭಡಿಸಿದೆ । ಧಾರುಣಿ ಸುರನಾಗಿ
ಧರೆಯನು ಬೇಡಿದೆ । ವೀರ ದುಷ್ಟ ಭೂಭಾರ ನೃಪರ ಸಂ । ಹಾರನೆನಿಸಿ ಸ್ತ್ರೀ
ಚೋರನ ತರಿದೆ । ಕ್ರೂರ ಶಕಟನಾಕಾರವ ತೊಡೆದೆ । ಚಾರುಬುದ್ಧನಾಗಿ
ನಾಚಿಕೆ ತೊರೆದೆ
ಮೀರಿದ ಕುದುರೆಯನೇರುತ ನೀ ಬಲು । ಶೂರನೆಂದು ವಿಚಾರ ಮಾಡದೇ
ಕೇರಿಕೇರಿಲಿ ತಿರುಗವ ನಾರೇರ ಸಂಗಡ ಸಾರುಪತ್ಯಬ್ಯಾಡೋ
ಚೋರ ! ಬಲ್ಲೆನು ನಿನ್ನ ಸೂಮಾರ ! ॥೨॥

ಎಲೆ ಬಾಲೇ । ಎಲೆ ಬಾಲೇ । ಎಲೆ ಬಾಲೆ ।
ಎಲೆ ಬಾಲೆ ಮುತ್ತಿನ । ಮಾಲೆ ತಿಲುಕದ। ಫಾಲ ಪೊಳೆವ ಕಾಪೋಲ ಉದುರ ವಿ
ಶಾಲ ಪದಕದಿಂ । ಲೋಲನಯನದಿಂ । ಶೀಲೆ ರತಿಯ ಸರಿ । ಬಾಲೆ
ನಾರೆರೋಳ್

ಜಾಲೆ ವಜ್ರದ । ವಾಲೆ ಕೊಡುವೆ [illegible] ದಾಲಿಂಗವನು ಪಾಲಿಸುಪೂತನ
ಕೋಲಿಗೆನ್ನ ವಚನ । ತಾಳದು ನಿನಗಿ । ನ್ನೇಳಲೇನು ಬಹು ಜಾಲವಮಾಡದೆ
ನೀಲವೇಣಿ ಆನು । ಕೋಲೆಯಾಗು ಮನ । ಸೋಲು ಮದನ ಶರ।
ಜಾಲಕಾಗಿ ಹೃದ
ಯಾಲಯದೊಳು ನಿಲ । ಲಾರದೆ ಮನೆಕಾ । [illegible] ।
[illegible] ಪ
ಡಾಳ ಗಮನೆ । [illegible] । [illegible] ।
ನ್ನೊಲಿಸುವೆ ವಿಧವಿಧ
ಕಲೆಗಳಿಂದಲಿ । ಸೆಲಿಸುವೆ ಚಿತ್ತವ । ಚಲಿಸದೆ ಬೇಗನೆ ಬಾಕೇ ।
ಮನಸು ನಿನ್ನ ಯಮೇಲೆ ।
ಸುರನಾರಿರೊಳಗು ಬಲು ದೂರೇ । ನಿನ್ನ ಮಾತುಗಳನು ನಾ ವಿಾರೆ ॥೩॥

ಇಲ್ಲಿ ನೋಡಬೇಕಾಗಿರುವುದು ಕನ್ನಡ ಭಾಷೆಯ ಸಂಭ್ರಮವನ್ನು. ಎಳೆಎಳೆಯಾಗಿ ಸುಳಿಯುತ್ತಿದುವ ಶಬ್ದಗಳ ಹವಣಿಕೆಯನ್ನು. ಹೀಗೆ ಲಾವಣಿಗಳನ್ನು ಬರೆದು ಲೀಲಾಜಾಲವಾಗಿ ಕನ್ನಡವನ್ನು ಪಯೋಗಿಸಿ, ಹೊಸಮಾರ್ಗ ತೋರಿಸಿ, ಭಾಷೆಯನ್ನು ಬೆಳೆಸಿದವರು ಹರಿದಾಸರು. ದಾಸರ ಮಾರ್ಗವನ್ನು ಮೊದಲು ಅನುಸರಿಸಿದವರು ಯಕ್ಷಗಾನವನ್ನು ಬರೆದ ಕವಿಗಳು.

ಶ್ರೀಕೃಷ್ಣನು ಮಧುರೆಗೆ ಹೋಗಿ ಬರುವನೆಂದು ಗೋಪಿಯರಿಗೆ ತಿಳಿದಾಗ ಗೋಪಿಯರ ಆಲಾಪ:—

ಆ ರಾಜಧಾನಿಯ ಬ । ಲೇರಾ ನುಡಿಗೆ ಸಿಲ್ಕಿ । [illegible]ಮನಕೆ ಮುಗ್ಧರಾ
ಬಾಲಾ ಪುನಹ ನಮ್ಮ । ಸೇರಾ ಮೊದಲಿನಂತೆ । ತೋರಾ ಸುರತ ನಿರ್ಭರಾ
ಆ ರಾಜಪಥದಿ ಶೃಂ । ಗಾರಾಗಿ ಬರುವ ಶ್ರೀ । ನಾರೇಯಣನ ನೋಡುವಾ
ಪೌರಾ ಸುಜನಕೇ ನಿ । ರ್ಧಾರಾಗಿ ವದಗುವದ । ಪಾರಾದನಯನೋತ್ಸವ ॥೨॥

ಕ್ರೂರಾಖ್ಯನಿವಗೆ ಆ । ಕ್ರೂರಾಖ್ಯವ್ಯಾಕೆ ನಿ । ಸ್ಸಾರಾ ಕಠಿಣ ಹೃದಯನೇ
ಧೀರಾರ್ತ್ತ ಸುಜನ ಮಂ । ದಾರಾತ್ಮ ಪ್ರಿಯತಮನ । ದೂರಾಧ್ವನದಿವೈವನೇ ॥

ಊರಾಗಿರುವ ವೃದ್ಧ | ರಾರಾದರಿನ್ನಿದಕೆ | ವ್ಯಾರಾಡದಲ್ಲವಮ್ಮಾ
ಸಾರಾತ್ಮ ಸ್ವೈವಪ್ರತಿ | ಕಾರಾಗಿ ಪರಮಿತಿ ವಿ | ಕಾರಾಗಿ ಪೋಪರವ್ಮಾ ||೩||

ಬೃಂದಾವನದ ಪುಣ್ಯ | ಕುಂದಾಯಿತೇನೊ ಈ | ನಂದಾರ್ಜಿತ ಸುಕೃತವು
ಹಿಂದಾಯಿಥ್ಯಾಂಗೊ ಅರವಿಂದಾಕ್ಷ ಕೃಷ್ಣ ಇ | ಲ್ಲಿಂದಾ ಮಧುರೆಗ್ಹೋಗುವ
ಮುಂದಾಗಿ ನಾವೆಲ್ಲ | ರೊಂದಾಗಿ ಪೋಗಿ ಗೋ | ವಿಂದಾಂಗ ಸಂಗಪರರು
ನಂದಾತ್ಮಜಗೆ ಬ್ಯಾಡವೆಂದಾಡೆ ನಮ್ಮನೇ | ನೆಂದಾರು ಕುಲವೃದ್ಧರು ||೪||

ಕೋಲಾಹಲದಿ ಹರಿಯ | ಲೀಲಾಸ್ತರಾಗಿ ಬಹು | ಕಾಲಾಯಿತೇ ಆರೆಕ್ಷಣ
ನೀಲಾಭ್ರನಿಭ ಮಧುರಿ | ಪಾಲಾಗಲೂ ರಾತ್ರಿ | ಕಾಲ್ಹ್ಯಾಂಗೆ ಕಳೆವ ಕಠಿಣ
ಶೀಲಾತ್ಮ ಗೋಧೂಳಿ | ಕಾಲಾಗೆ ಕೊಳಲ ಧ್ವನಿ | ಜಾಲ್ಹಾಕೆಮ್ಮನು ಶೆಳೆವನೇ
ಮೇಲಾದ ನಮ್ಮಗನು | ಕೂಲಾದ ಹರಿಯು ಪ್ರತಿ | ಕೂಲಾಗಥ್ಯಾಂಗಿರುವನೇ ||೫||

ಕ್ಷೀರಾಬ್ಧಿಶ್ಶಾಯಿ ನದಿ | ಪಾರಾಗುವ ನಮಗೆ ದೂರಾಗುವಾ ಈ ದಿನ
ದಾರಾದರೇನ ನಲಿ | ದೂರಾದರಾಗಲಿ | ಈ ರಾತ್ರಿ ಸೇರುವವನ
ಮಾರಾರಿ ಪ್ರಮುಖರಿಗೆ | ತೋರಾತ್ಮ ಮಹಿಮೆ ವಿ | ಸ್ತಾರಾದ ಸುಗುಣಪಟಲ
ಧೌರಾತ್ಮ್ಯಮಗ್ಹ್ಯಾಂಗೆ | ದೂರಾಗದಿಹನೇ ಶ್ರೀ | ರಾಮ ಸುಂದರ ವಿಠಲ

ಗೋಪಿಯರು ಶ್ರೀಕೃಷ್ಣನಿಗೆ ಸಂದೇಶ ಕಳುಹಿಸುತ್ತಾರೆ. ಪರಸ್ಪರ ಮಾತುಗಳಾಗುತ್ತವೆ. ಕೃಷ್ಣನು ಹೋಗಿ ಬರುವೆನೆಂದು—

## ಮೋಹನ — ತ್ರಿಪುಟ

ಪೋಗಿ ಬರುವೆ ಗೋಪ | ನಾಗವೇಣಿಯರ ಚ |
ನ್ನಾಗಿ ಮಮತಾ ಪೂರ್ಣವಾಗಿರಲಿ || ಪ ||

ಜಾಗು ಮಾಡದೆ ಮುಂದೆ । ವೇಗದಿಂದಲಿ ಎನ್ನ
ಸಾಗೀಸೀ । ಪತಿಗಳ ಕೂಡೆ । ಭೋಗೀಸೀ ।
ಕಕ್ಷೇವೆ ಮಾಡಲು । ಪೋಗುವುದು ಪಾ ।
ಪೌಘವೆಲ್ಲವು । ನೀಗುವದು ಹೃದ್ರೋಗ ಮಂಗಳ ।
ವಾಗುವದು ಲೇಸಾಗಿ ಹರುಷಿತ । ರಾಗಿ ಕಳುಹಿರ । ಈಗ ಮಥುರೆಗೆ॥ಅ॥

ಬಾಲಕತನದಿ ನಿ । ಮ್ಮಾಲಯವನೆ ಪೊಕ್ಕು ।
ಪಾಲು ಮೊಸರು ಬೆಣ್ಣೆ । ಕದ್ದು ಮೆದ್ದು ॥
ಜಾಲದಿಂದಲಿ ನಿಮ್ಮ । ಬಾಲರು ತಿಂದರೆಂದ್ಹೇಳೀದೇ ।
ಮೃಷವಾಡಿನಾ । ಬಾಳೀದೇ
ಮೇಲಿಟ್ಟ ಭಾಂಡವ । ಸೀಳೀದೇ ।
ಮಥಿಸುವ ಸುಪಾತ್ರೆಯ ॥ ಕಾಲಿಲೊದ್ದು
ಬೀಳಕೆಡಹಿದೆನೇ । ನವನೀತವನು ಮಾ ।
ರ್ಜಾಲ ಮರ್ಕಟ ಪಾಲ ಮಾಡಿದೆನೇ
ನೀವಿಟ್ಟ ಮೀಸಲ । ಶೀಲಧಧಿ ಕೆನೆ ।
ಪಾಲ ಕೆಡಿಸಿದೆನೇ । ಹೀಗುಚಿತವಲ್ಲೆಂ ॥
ದ್ಹೇಳಿದರೆ ಕೇಳದಲೆ ನಾನತಿ ।
ಹೇಳನೆಯ ಬಲು ಧಾಳಿ ಮಾಡಲು । ತಾಳಿ ಎನ್ನನು
ಪಾಲಿಸಿದಿರಿ ಕೃ । ಪಾಳುಗಳ ಗುಣ । ಪೇಳಲೋಶವೆ ॥ ೧ ॥

ಫುಲ್ಲಲೋಚನೆರ ನಿ । ಮ್ಮೆಲ್ಲರ ಮನಸು ಎ ।
ನ್ನಲ್ಲಿ ಇಟ್ಟಿರುವದ । ಬಲ್ಲೇ ಕೇಳಿ ॥
ಇಲ್ಲೇ ನಿಮ್ಮನ ಬಿಟ್ಟು । ಎಲ್ಲೋ ಪೋಗುವೆನೆನ್ನ ।
ಸಲ್ಲಾದೇ ॥ ಕಾರ್ಯವೆ ಮುಖ್ಯ
ವಲ್ಲಾದೇ । ಬರುವೆನೆ ಅಲ್ಲಿ ನಿಲ್ಲಾದೇ ॥
ಬ್ರಹ್ಮಾಂಡದೊಳಗಾ । ವಲ್ಲಿ
ನೆನೆಸಿದರಲ್ಲಿ ನಾನಿರುವೇ ।
ನಾನಿಲ್ಲದ ಸ್ಥಳವಿಲ್ಲ ಜಗದೊಳಗೆಲ್ಲ ತುಂಬಿರುವೇ ।

ಆದರಿಸಿ ಕರೆದವ | ರಲ್ಲಿ ಅತಿ ತ್ವರದಲ್ಲಿ ಬರುತಿರುವೇ ||
ಈ ವಿಧದಿ ಪೇಳ್ವುದು ||
ಸುಳ್ಳುಮಾತುಗಳಲ್ಲಿ ಆಗಮ | ದಲ್ಲಿ ಪೇಳಿದ |
ಸೊಲ್ಲು ಎಂದಿದ | ರಲ್ಲಿ ಸಂಶಯು
ವಿಲ್ಲದಲೆ ನೀ | ವೆಲ್ಲ ಸ್ಮರಿಸಿದರಲ್ಲಿಗೊಡಗುವೆ || ೨ ||

ಹಿಂದಕ್ಕೆ ಬಂದಿನ | ನಿಂದು ಕೊಳಲೂದೆ ಸ್ತ್ರೀ |
ವೃಂದ ಕೇಳುತಲಿ ಆ | ನಂದದಿಂದಾ ||
ಅಂದು ಬರುತಿರೆ ನಿಮ್ಮ | ಬಂಧುಗಳೆಲ್ಲ ನಿರ್ಬಂಧೀಸೀ |
ಬೇಡೆನ್ನಲವರ | ನಿಂದೀಸೀ
ಎನ್ನೊಳು ಮನಸು | ಪೊಂದೀಸೀ
ಬೆಳದಿಂಗಳೊಳು ತ್ವರ | ದಿಂದ ಎನ್ನನು
ಬಂದು ಕೂಡಿದಿರೇ | ರಾಸೋತ್ಸವದಿ ಧಿಂ
ದಿಂ ಧಿಮಿಧಿಮಿ ಕೆಂದು ಆಡಿದಿರೇ |
ಕೀರ್ತಿಯನು ಪದಗತಿ | ಯಿಂದ ಸುಖಕರದಿಂದ ಪಾಡಿದಿರೇ ||
ಬಲು ಪರಿಯಲಿ | ಎ | ನ್ನಿಂದ ಬಂದ |
ನಿಂದೆ ಕುಂದುಗ | ಳೊಂದು ಎಣಿಸದೆ |
ಪೊಂದಿದಿರಿ ಎಂ | ತೆಂದು ಶ್ರೀರಾಮ |
ಸುಂದರ ವಿಠಲ | ಇಂದು ಮುಖಿಯರಿ | ಗಿಂದು ಪೋದದಿ || ೩ ||

ಶ್ರೀಕೃಷ್ಣನು ಅಕ್ರೂರನೊಡನೆ ಪ್ರಯಾಣಮಾಡಿದ ನಂತರ ಸ್ವಾಮಿಯ ವಿರಹವನ್ನು ತಾಳಲಾರದೆ ಗೋಪಿಯರು ತೋಳಲುವ ಬಗೆ ಕೆಳಗಿನ ಪದದಲ್ಲಿ ವಿದಿತವಾಗುತ್ತದೆ.

ಧನಾಶರಿ ಜಂಪೆ

ಏನು ಮಾಡುವ ನಮ್ಮ | ಪ್ರಾಣದೊಲ್ಲಭ ರಾಜ | ಧಾನಿಗೈದಿದನೀದಿನ ||ಪ||
ಮಾನನಿಧಿ ನಮ್ಮ ಅಭಿಮಾನವನು ಬಿಟ್ಟು ಆಧೀನನಾದ ಕ್ರೂರನ|ಅವನ||ಅ||

ಕ್ರೂರಕಂಸನು ನಮ್ಮ । ಶೌರಿಯನು ಕರೆಸಿದಕೆ । ಸೀಕಲವೆ ಘುಮಪಟ್ಟಿಣ ।
ಮಾರ ಜನಕನ ರಥವ । ನೇರಿಸೀ ವೈದ ಆ । ಕ್ರೂರನೆಸಿ ಬಹಳ ಕಠಿಣ ।
ದೂರು ಕೇಳದೆ ರಥವ । ದೂರ ನಡೆಸಿದ ಕ್ರೂರಿತ ವೈರಿಯೋನೋ ಹಿಂದಿನ ॥
ನಾರಿಯರ ಉಸುರಿವಗೆ । ಸೇರದಿಹುದೇ ತಮ್ಮ । ಶ್ರೀರಮಣನ್ನಗಲಿಸಿದನೇ ।
ಅನನೇ ॥೧॥

ಅಕ್ರೂರನೆಂತೆಂಬು । ಆ ಕ್ರೂರನಿಗೆ ಹೆಸರ । ಇಕ್ಕಿದವರ್ಯಾರು ಇವಗೆ ।
ತಾಕ್ಷ್ಯತ್ರಿಮವ ಮಾಡಿ । ಚಕ್ರಧರನಗಲಿಸಿ । ವಕ್ರವಾದನು ಕ್ರೀಡೆಗೆ ।
ಶಕ್ರನ್ನ ಗೆಲಿದತಿ ಪ । ರಾಕ್ರಮಿಯು ಪರರಿಂದ । ವಿಕ್ರೀತನಾದಿಂದಿಗೇ ॥
ಸಕ್ಕೃತದಿ ವದಗಿದ ತ್ರಿ । ವಿಕ್ರಮನ ಮಘುರ ಸ್ತ್ರಿಯು । ರಾಕ್ರಮಿಸದಲಿ
ಬಿಡುವದೇ । ನೀರೇ ॥೨॥

ಪರರ ದೂರಲಿ ಯಾಕೆ । ಶಿರಿಕೃಷ್ಣನ ಮನಸು । ಎರಡಾಯಿತಮ್ಮಗಳಿರಾ
ಕರೆಯ ಬಂದ ಕ್ರೂರ । ಕರೆಯಲೇನಾಯ್ತು । ಬರಲೊಲ್ಲೆನೆಂದೆನಲು ಹರಿಯ
ಕರವಿಡಿದು ಬಲುಮೆಯಲಿ । ಕರದೊಯ್ವರಾರಿವನ । ಪರದೇವತೆಯ
ಮಧುರಿಯ ॥
ತರಳೆಯರ ಮೆಚ್ಚು ಈ । ಹೆರದಿಯರ ಮನ್ಮಥಗೆ । ಗುರಿಮಾಡಿ
ಪೋದನಲ್ಲೇ । ನಲ್ಲೇ ॥೩॥

ಸಕ್ಕರೆಯ ಪೋಲುವ । ಕಕ್ಕುಮಾತುಗಳಾಡಿ । ಕಕ್ಕುಲಾತಿಯ ಬಡಿಸಿದ
ದಕ್ಕಿದವನಲ್ಲದೇ । ವಕ್ಕಳಿಗೆ ದೇಶಕಾಲಕ್ಕೆ ಸಮಳೆಂದೆನಿಸಿದ
ಲಕ್ಕುಮಿಾ ದೇವಿಯನು । ಲೆಕ್ಕಿಸದೆ ಸಾಲ್ಕೊಗನ । ಪೊಕ್ಕಳಿಂದಲ್ಲಿ ಪಡೆದ ॥
ಠಕ್ಕುಗಾರನು ನಮಗೆ । ದಕ್ಕುವನೆ ಆವನಾಶೆ । ಅಕ್ಕಗಳಿರಿನ್ಯಾತಕೆ ಬೇಕೆ ॥೪॥

ನೆಂದಸುತನಿಲ್ಲದೆ । ವೃಂದಾವನವು ಅಡವಿ । ಯಂದದಲಿ ತೋರುತಿಹದೇ
ಗಂಧ ಕಸ್ತೂರಿಗಳನು । ತಂದು ಪೂಸಲು ಅಗ್ನಿ ಯಂದದಲಿ ತೋರುತಿಹದೇ
ಮಂದಮಾರುತ ನಮಗೆ । ಇಂದ್ರ ವಜ್ರಾಯುಧವು । ಬಂದು ಹಾದಂತಾಗಿದೇ
ಎಂದಿಗೇ ಶ್ರೀರಾಮಾ ಸುಂದರವಿಠಲನು । ಬಂದೆಮ್ಮ ಸಂತೈಸುವಾ । ಕಾವಾ ॥೫॥

ಓರ್ವ ಗೋಪಿಯು ಅನ್ಯಗೆಳತಿಯೊಡನೆ ರಾತ್ರಿಯಿದ್ದು ಬೆಳಗಾಗುತ್ತಲೇ ತನ್ನ ಮನೆಗೆ ಬಂದ ಶ್ರೀಕೃಷ್ಣನನ್ನು ನೋಡಿ ಪರಿಹಾಸ್ಯದಿಂದ ಕೇಳಿದ ಬಗೆ:-

ಝಂಝೂಟಿ ಅಟ್ಟತಾಳ

ಮಾಜುವದೇನೊ ಮಾರಮಣ । ಶುಕ । ವಾಜಿಯುವನ
ಜೇಷ್ಟೆಯೊಳಾದ ಹವಣ ॥ಪ॥

ಹೆಜ್ಜೆಗಳು ಬಲು ವಜ್ಜ್ಯವಾಗಿವೆ । ಕಜ್ಜಲವು ಕೆಳದುಟಿಗೆ ಸೋಕಿದೆ ।
ಮಜ್ಜನದ ವೈಯಿಂದ ಮುಖದೊಳು । ಲಜ್ಜೆಗೈಸುವ ಲಕ್ಷಣಗಳಿವೆ ॥ ೧ ॥

ಗಳದೊಳಗೆ ಸುಳಿಬಳೆಗಳೊತ್ತಿವೆ । ಎಳೆದಳಿರುದುಟಿಯೊಳ್ಕಲೆಗಳಿವೆ
ನಳಿನದಳಗಳೊಳಳಿಗಳಡಗಿವೆ । ಕೆಳದಿಯೊಳು ಬೆಳಗುಳಿದ ಕಳವನು ॥ ೨ ॥

ಆ ಸಖಿಯ ಸಹವಾಸದಿಂದಾ । ಯಾ ಸಮಯ್ಯೊಳಗೀಸುಪರಿಯಲಿ
ಸೂಸುತಿವೆ ಕಮಲೇಶ ವಿಠಲ ನೀ । ಸೈಸಿದಡೆ ತಾಮಾಸ ಜಲ್ಲದೆ ॥ ೩ ॥

ರುಷ್ಟಳಾದ ಓರ್ವ ಗೋಪಿಯು ಅನ್ಯಳ ಮನೆಯಲ್ಲಿದ್ದ ಮನೋವಲ್ಲಭನಿಗೆ ದೂತಿಯ ಮೂಲಕ ಸಂದೇಶವನ್ನು ಕಳುಹಿಸುತ್ತಾಳೆ. ದೂತಿಯು ಉತ್ತರವನ್ನು ತಂದು ಹೇಳುವುದರೊಳಗೆ ಆತುರದಿಂದ ದೂತಿಯ ಮುಖವನ್ನು ನೋಡಿ—

ಪೂರ್ವಿ — ಅಟ್ಟ

ಆನಂದ ನಂದನ । ನಾನಂದ ಮಾತಿಗೆ । ಏನಂದನೇ ನಂದನೆ
ಇಂದುವದನೆ ॥ಪ॥

ನೀನು ಪೋಗಲು ಬಹು । ಮಾನದಿಂದ ಬಂದ । ದ್ದೇನೆಂದು ಕೇಳೀದನೇ
ನಾನು ತಾನೇಕಾಂತದೊಳಗಾಡಿದ ಮಾತ । ಖೂನವ ಕೇಳೀದನೆ ॥
ಆ ಸಾರಿಯ ಮುಂದೆ । ಹೀಸೈಸಿ ಎನ್ನವ । ಮಾನವ ಮಾಡಿದನೇ ।
ಮನ್ನಿಸಿದನೆ ॥ ಏನೆಂದನೇ ನಂದನೆ ॥೧॥

ಎನ್ನ ಸವತಿಗೈದ ಮನ್ನಣೆಗೆ ಮೆಚ್ಚಿ । ಧನ್ಯನಾದೆನೆಂದನೆ ।
ನಿನ್ನ ಕೂಡಿದಮೇಲೆ । ಅನ್ಯ ಸ್ತ್ರೀಯರ ಮುಖ । ವನ್ನು ನೋಡೆನೆಂದನೆ ॥
ನಿನ್ನ ಸುಧಾಧರ । ವನ್ನುಂಡಮೇಲೆ ನ್ಯ । ಷ್ಟಾನ್ನ ವೊಲ್ಲೆನೆಂದನೇ ।
ಪೇಳುವದೇನೆ ॥೨॥

ಪೂಶರಕೇಳಿಯೊಳ್ । ಘಾಶಿಗೈದವಗಿದು । ಲೇಸಲ್ಲವೆಂದಳೇನೇ ।
ಸಾಶಿರಶತಮತ್ತ ಕಾಶಿಸಿಯರನೆಲ್ಲು । ದಾಶನಗೈದಳೇನೆ ॥
ವೇಹಗಾರ ಕಮಲೇಶ ವಿಠಲನೆಂದು । ದೂಷಣಗೈದಳೇನೇ
ಮಾಜುವದೇನೆ ॥೩॥

ರಾಧೆಯು ಮಂದಿರ ಸೇರಿ ನನ್ನನ್ನು ಶ್ರೀಕೃಷ್ಣನು ಮರೆತನೆಂದು ಓರ್ವ ಗೋಪಿಯು ಪರಿತಪಿಸುವ ಬಗೆ—

### ಹಿಂದುಸ್ತಾನಿ ಕಾಪಿ — ಅಟ್ಟತಾಳ

ಶ್ರೀಧರ ರಾಧಾ । ಮಂದಿರ ಸೇರೀ ಎನ್ನ । ಮರೆದಾನೇ । ಮಾನಿನಿರನ್ನೆ ॥ಪ॥
ಸ್ಮರನು ರವಣಿಯು । ಶರಹತಿಗೆ ಎದೆ । ಬಿರಿಪ್ಪರಣ ತರ । ಹರಿಸುವದೆ ॥೧॥
ಮದನನಮೊರೆವಳ । ಬೆದರಿಕೆಗೆ ಗದ । ಗದ ನಡುಗಿ ನಾ । ನೆದೆಯೊಡೆವೆ ॥೨॥
ಶಠವು ತನಗಿದು । ಧಿಟವೆ ಕಮಲೇಶ । ವಿಠಲ ಮೋಹಕ । ನಟಣೆಯಲಿ ॥೩॥

ತರಹರಿಸುತ್ತಾ ಕೃಷ್ಣನು ವಂಚಕ, ಅವನ ಮನಸ್ಸು ತಿಳಿಯುವ ಹಾಗಿಲ್ಲ ! ಎಂದು ಮತ್ತೆ—

### ಜುಂಝೋಟಿ — ಆದಿತಾಳ

ಮನಸು ತಿಳಿಯದೇ ಮಾನಿನೀ । ನಂಬಬಾರದೇ ॥ಪ॥
ಜನುಪಿನವರ ಒಲು । ವಿನವಮೋರಿ । ಘಮ್ಮನುಭವಿಸಿದ ಪರಿ ।
ಕನಸಿನಂತೆ ತೋರುವರ ॥ಅ॥
ಬೇಡೆಂದರೆ ಬಲು । ಬೇಡಿಕೊಂಬುವರೇ ॥ ಈಡಿಲ್ಲದ ಮಾತಾಡಿ ಮಮತೆಯಲಿ।
ಕೂಡಿ ಕಡೆಗೆ ಬಿಟ್ಟೋ । ಡ್ಹೋಗುವ ಕೇಡಿಗರ ॥೧॥

ವರಹವ ತೋರಿಸಿ । ಮರುಳು ಮಾಡುವರೆ ॥
ಸ್ಮರಸಂಗರದಲು । ಪರಿಸುರತದಿ ಮೇ । ಲೊರಗಿ ಮೈಮರೆಸಿ ।
ಜರಿದೋಡುವ ಜಾರಾರ ॥೨॥

ಲೇಶ ಸಂಭ್ರಮಕೆ ನಾ । ಮೋಸ ಹೋಗುವರೇ ॥
ಲೇಸಲ್ಲವೆ ಸತಿ । ಸಾಶಿರದೊಳಗೆ ಉ । ದಾಶಿಸುವದು ಕಮ ।
ಲೇಶ ವಿಠಲರಾಯಾಗೆ ॥೩॥

——o——

ಹೀಗೆ ಅಗಣಿತ ಸಾಹಿತ್ಯರಾಶಿ ಶೃಂಗಾರರಸದಮೇಲೆ ಹರಿದಾಸ ಸಾಹಿತ್ಯ ದಲ್ಲಿದೆ. ಹಾಡುಗಳನ್ನು ಹಾಡುವ ಕ್ರಮವರಿತು, ಒಂದು ಎರಡು ಕಾಲಗಳಲ್ಲಿ ತಾಳಕ್ಕೆಸರಿಯಾಗಿ ಭಂಗಿಗಳನ್ನ ನುಸರಿಸಿ ಗಾನಮಾಡಿದರೆ, ಸ್ಫುರಿಸುವ ರಸಭಾವ ಗಳು ಶಬ್ದಗಳಿಂದ ವರ್ಣಿಸುವ ಎಲ್ಲೆ ಮೀರಿದ ಆನಂದವನ್ನುಂಟು ಮಾಡುತ್ತವೆ. ತೆಲುಗು ಕೀರ್ತನೆಗಳೂ, ಜಾವಡಿಗಳೂ ದಕ್ಷಿಣ ಭಾರತದಲ್ಲಿ ಹುಟ್ಟಿನ್ನದಕ್ಕೆ ಮುಂಚೆ ಇದೇ ಹಾಡುಗಳನ್ನು ಎಲ್ಲ ಜನರೂ ಹಾಡುತ್ತಿದ್ದರು.

ನಮ್ಮದು ಕನ್ನಡನಾಡು. ಕನ್ನಡ ಲಕ್ಷಣಕಾರರಿಂದ ವಾಗ್ಗೇಯಕಾರ ರಿಂದ ನಿರ್ಮಿತವಾಗಿ ಬೆಳೆದದ್ದು ಕರ್ಣಾಟಕ ಸಂಗೀತ. ನಮ್ಮ ವ್ಯವಹಾರ ಭಾಷೆ ಇಂಗ್ಲೀಷು! ನಮ್ಮ ಸಂಗೀತ ಭಾಷೆ ತೆ....ಲು....ಗು ಆದರೂ ನಾವು ಕನ್ನಡಿಗರು ! ಮರ್ಯಾದೆಯಲ್ಲವೆ?

## ವೀರರಸದಲ್ಲಿ

ವೀರರಸವೆಂದರೆ ಸಾಹಸ ಕಾರ್ಯಗಳನ್ನು ಮಾಡಿದುದನ್ನು ವರ್ಣಿಸಿ ಹೇಳುವುದು ವೀರರಸವೆನಿಸುತ್ತದೆ. ಆದ್ದರಿಂದ ಹರಿದಾಸ ಸಾಹಿತ್ಯದಲ್ಲಿ ಆ ವೀರ್ಯ ಶೌರ್ಯಗಳನ್ನು ತೋರಿಸಿದ ವೀರರ ಕೃತಿಗಳು ಹಾಡಾಗಿ ಹೇಗೆ ಬಂದಿದೆ ಯೆಂಬುದರ ಕೆಲವು ಮಾದರಿಗಳನ್ನು ಕೆಳಗೆ ಕೊಡಲಾಗುತ್ತದೆ.

ಮಾರುತಿಯನ್ನು ಬ್ರಹ್ಮಾಸ್ತ್ರದಿಂದ ಬಿಗಿದು ರಾವಣ ಸಾರ್ವಭೌಮನ ಸಭೆಗೆ ಕರೆತಂದ ಸನ್ನಿವೇಶವಿದು. ರಾವಣನ ಸಿಂಹಾಸನಕ್ಕಿಂತ ಎತ್ತರವಾಗಿ ಮಾರುತಿಯು ತನ್ನ ಬಾಲದ ಸಿಂಬೆಮಾಡಿ ಕುಳಿತುಕೊಳ್ಳುತ್ತಾನೆ. ಪ್ರಹಸ್ತನು ಹಾಸ್ಯದಿಂದ ಮಾರುತಿಯನ್ನು ನೀನಾರೆಂದು ಪ್ರಶ್ನೆಮಾಡುತ್ತಾನೆ. ಮಾರುತಿಯು ತನ್ನ ಸಹಜ ವೀರಸ್ವಭಾವದಿಂದ ಪ್ರಹಸ್ತನಿಗೆ ಉತ್ತರ ಕೊಡುತ್ತಾನೆ.

**ಕಲ್ಯಾಣಿ** **ಅಟ್ಟತಾಳ**

ಶ್ರೀರಾಮನ ದೂತನು | ಕೇಳ್ಳೈ ನಾನು | ರಘುರಾಮನ ದೂತನು ||ಪ||
ಶ್ರೀರಾಮನ ದೂತ ತ್ರಿಜಗದೊಳ್ ವಿಖ್ಯಾತ ||
ಮಾರುತನ ಸಂಜಾತ ಶ್ರೀಹನುಮಂತನೆಂಬರು ಎನ್ನ ನೆಲ್ಲರು ||ಅ||

ಸುರಗೋದ್ವಿಜರ ರಕ್ಷಿಸೆ | ಭೂಭಾರವ | ತರಿದು ದುಷ್ಟರ ಶಿಕ್ಷಿಸೆ
ಹರಿ ಕ್ಷೀರಾಬ್ಧಿ ಯನಗಲಿ | ಧರೆಯೊಳು ದ | ಶರಥನ ಭವನದಲಿ ||
ನರರೂಪಿನಲಿ ರಾಮನಾಮದಿಂದುದಿಸಿ ಆ | ಸುರಳಾದ ತಾಟಕಿ
ಯನು ಕೊಂದು ಮಾಣದೆ || ಧುರದೊಳು ಸುಬಾಹು ಪ್ರಮುಖರಾದ | ದೈತೇ
ಯರನು ಸಂ | ಹರಿಸಿ ಪರಮಾನಂದ ಮಯನಾದ | ಕೌಶಿಕನ ಯಜ್ಞವ
ಕರುಣದಿಂಪಲಿ ಕಾಯ್ದು ಗೌತಮ | ನರಸಿಕಲ್ಲಾಗಿರಲು ಚರಣಾಂ
ಬುರಹದಿಂ ಸುಂದರಿಯಗೈದುರು | ಹರನಬಿಲ್ಲನು ಮುರಿದಧೀರನ ||೧||

ಜನಕಜಾತೆಯನೊಲಿಸಿ | ಮೇಲ್ಜಮದಗ್ನಿ ತನಯನ ಪರಿಭವಿಸಿ
ಜನಕನ ಸುವ್ರತವ | ಸಂರಕ್ಷಣೆಯನು ಮಾಡೆ ಮುನಿರೂಪವ ||
ವಿನಯದಿ ಧರಿಸಿ ಶ್ರೀ ಸತಿಸೋದರನ ಸಹೆ | ವನದುರ್ಗಗಳಲಿ ಸಂ
ಚರಿಸುತ್ತಲಮಿತದು || ರ್ಜನವಿರಾಧಾಸುರನ ಬರಿಗೈದು | ದಶ
ಮುಖನತಂಗಿಯ | ಹನನಗೊಳಿಸದೆ ನಾಸಿಕವತರಿದು | ಖರ
ದೂಷಣಾದಿಗ| ಳನು ವಿಭಾಡಿಸಿ ಕಾಕರೂಪದ| ದನುಜನಕ್ಷಿಯ ಕಳೆದುಮಾರೀ
ಚನಕನಕಸಾರಂಗರೂಪದ | ಘನಕೆ ಜಂಝೂಪವನನಾದನ ||೨||

ರಾಮಲಕ್ಷ್ಮಣರಿಲ್ಲದ | ಸಮಯದಿಮ | ಸ್ವಾಮರಾವಣಸಲ್ಲದ |
ತಾಮಸಸನ್ಯಾಸಿಯು | ವೇಷದಿಬಂದು | ಭೂಮಿಜೆಯಹಸೀತೆಯ ||
ಪಾಮರನಾಗಿ ಕದ್ದೊಯ್ಯೆರಾಘವರುಶ್ರೀ | ಭಾಮೆಯನರಸುತ್ತ
ಲರಸುತ್ತಬರುತಲ್ಲಿ || ತಾಮರಸ ಸಖಸುತನ ಸತಿಕರಿಸಿ |
ಕೋಲೊಂದನೂ ಸು | ತ್ರಾಮತನಯನ ಕೊರಳೊಳಗೆ ಕುಣಿಸಿ |
ರಣಕೋವಿದ ಕಪಿ | ಸ್ತೋಮವೆಲ್ಲವನೆರಹಿರಾಣೀ | ಕ್ಷೇಮವನುನೆರೆ
ನೋಡ್ಲಿಬಾರೆಂ | ದಾಮಹಾತುಮಕಳುಹೆದಕ್ಷಿಣ | ಸೀಮೆಗಳನರಸುತ್ತ
ಬಂದೆನು ||೩||

ಜಲನಿಧಿಯನುದಾಂಟಿದೇ | ಕಾಲುವೆಯಂತೆ | ನಲಿದುಲಂಕೆಯ ಸೇರಿದೆ |
ಬಲಶಾಲಿ ಲಂಕಿಣಿಯ | ಭಂಜಿಸಿಬೇಗ | ತಳುವಾದೆ ಜಾನಕಿಯ ||
ಪೊಳಲೊಳಗೆಲ್ಲ ನಾನರಸಿಕಾಣದೆ ಕಡೆ | ಯಲಿ ನಿಮ್ಮವನದೊಳು
ಜಲಜನೇತ್ರಿಯ ಪಾದ || ಜಲರುಹಂಗಳ ನೋಡಿ ಮೋದದಲಿ |
ರಘುಪತಿಯ ಕುಶಲವ | ತಿಳುಹಿ ಮುದ್ರಿಕೆಯಿತ್ತು ವಹಿಲದಲಿ |
ವೈದೇಹಿಕರುಣಿಸಿ | ದಲಘುಕುರುಹಪರಿಗ್ರಹಿಸಿ ರಘು |
ತಿಲಕನಂಘ್ರಿಯನೈದೆಪೋಪದು | ಕಳವೆನುತ ಚಿತ್ತದಲಿ ಭಾವಿಸಿ
ತಿಳಿದು ನಿರ್ಣಯದಿಂದ ನಿಂತೆನು ||೪||

ತರುಣಿಜೋರಗೆ ನಮ್ಮಯ | ವಾರ್ತೆಯಪೇಳಿ | ತಿರುಗಿಪೋಗಲು ನಿಮ್ಮಯ |
ವರವನವನು ಭೇದಿಸಿ | ಅಕ್ಷಾದಿಭ | ಟರನೆಲ್ಲರನು ಭೇದಿಸಿ ||
ಪರಮೇಷ್ಠಿನುತಿಸಲಾ | ತನಶರಕ್ಕೊಳಗಾಗಿ | ಅರಿತುಸೋತವನಂತೆ
ಬಂದೆನೀಸಭೆಗಾಗಿ || ಕುರುಹುತೋರಿಸುನೋಳ್ಪೆರಾವಣನ |
ನಾನುಡಿಸಿಪೋಗುವೆ | ಸುರನರೋರಗನತ ಪದಾಂಬುಜನ |
ಸನ್ನಿಧಿಯನೈದುವೆ || ಧರಣಿಜೆಯಸುಕ್ಷೇಮವಾರ್ತೆಯ |
ನರುಹಿಖಾದ್ರೀನಾರಸಿಂಹಗೆ | ಭರದಿಮುಂದಣಕಾರ್ಯಭಾಗವ
ನರಿತುಮಾಡುವದುಚಿತನಮಗದು ||೫||

ಮಾರುತಿಯು ತನ್ನ ಪರಿಚಯ ಹೇಳಿ, ಎದುರಿಗೇ ಸಿಂಹಾಸನದಲ್ಲಿ ಘುಂಡಿಸಿರವ ರಾವಣನನ್ನು ಕಂಡರೂ ಕಾಣದವನಂತೆ ರಾವಣನೆಂಬುವನ್ಯಾರು

ತೋರು, ಎನ್ನಲು–ಶೂರಾಗ್ರೇಸರನಾದ ರಾವಣ ಸಾರ್ವಭೌಮನಿವನೆಂದು ಪ್ರಹಸ್ತನು—

ಪದ್ಯ ॥ ನೋಡು ಪುಲಸ್ತ್ಯ ವಂಶಾಂಬುಧಿ ಚಂದ್ರನಂ ದಾನವೇಂದ್ರನಂ
ನೋಡು ಸಮಸ್ತನಿರ್ಜರ ಮನೋತ್ಸವ ಭಂಗನಂ ಮನ್ಮಥಾಂಗನಂ
ನೋಡು ದಶಾಸ್ಯವಿಂಶತಿಭುಜಾಂಬಕ ಶೌಡನಂ ಸುಪ್ರಚಂಡನಂ
ನೋಡರಿರಾಯರ ಗಂಡನಹ ರಾವಣನಾಮ ಸಾರ್ವಭೌಮನಂ ॥೧॥

ಎಂದು ತೋರಿಸುತ್ತಾನೆ.

ದಕ್ಷಬ್ರಹ್ಮನ ಯಜ್ಞವನ್ನು ಧ್ವಂಸಮಾಡಲು ಪರಮೇಶ್ವರನ ಕೋಪ ಜ್ವಾಲೆಯೇ ರೂಪತಾಳಿ ಬಂತೋ ಎಂಬಂತೆ ಬಂದ ವೀರಭದ್ರನು ದಕ್ಷಾಧ್ವರ ಮಂಟಪದಲ್ಲಿ ಬಂದ ವಿವರವನ್ನು ಕೆಳಕಂಡ ಪದವು ವರ್ಣಿಸಿರುವ ವೈಖರಿಯಿದು,

ಸಾವೇರಿ ಆದಿತಾಳ

ವೀರಭದ್ರನವ । ತಾರವ ಮಾಡಿದ । ನಾರು ಬಣ್ಣಿಸುವರೈ ॥ ಧರೆಯೊಳು॥ಪ॥

ವೀರ ವೈಷ್ಣವ ಶಿರೋರತುನನ ಹೃ । ದ್ವಾರಿಜದೊಳಗಿಹ ನಾರಸಿಂಹ ತ
ನ್ನಾರಾಧಕನಪಚಾರ ಮಾಡಿದ । ಕ್ರೂರನ ಕೊಲ್ಲಲು ಮೀರಿಬಂದವೊಲ್॥ಅ॥

ಧರಣಿಮಂಡಲವ ಚರಣ ಭೂಷಣದಲಿ । ತಾಂಡವನಾಡುತ ಲಂ ।
ಬರದೊಳುರಿವ ಭಾಸ್ಕರನೋಲ್ವದನದಲಿ । ಆಕಳಿಸುತಿರೆ ಬಾಯ್
ದೆರೆವುತ ಪಲ್ಗಳ ಕಿರಿಯುತ ಕಣ್ಗಳ । ತಿರುಗುತ ಜಿಂಹೆಯಲೆರಗುತ
ಮುಖದೊಳ್ ॥
ಬೆರಳ ಬೊಬ್ಬೆ ವಿ । ಸ್ತರಿಸಲು ದಕ್ಷಾ । ಧ್ವರದಲಿ ನೆರೆದಿಹ ಜನರ
ಉರುಳಿಸುತ ॥೧॥

ಮಖಮುಖನಾಯಕ ನಿಕರದ ಮುಡಿಗಳನು । ಮುಂಗೈಯ್ಯಿಗೆ ಸುತ್ತುತ
ತಕತ ಧಿಮಿತ ಧಿಕುಧಿಕು ಎನೆ ಶಬ್ದವನು । ಕೇಳ್ವಗುತಿಹ ದಿಕ್ಪಾ ।

ಲಕರ ನೋಡಿ ತೀಕ್ಷ್ಣಕರದ ಖಂಡೆಯ । ಪ್ರಕಟಿಸಿ ಕೊಯ್ದವರ ಕರಚರಣಗಳ
ವಿಕಳಗೈಯೆ ಸುರನಿಕರವೆದೆಯೊಡೆಯೆ । ಅಕಟ ಮಹಾಪ್ರಳಯಕೆ ಸರಿ
ಮಿಗಿಲೆನೆ ॥೩॥

ನಟಿಸುತ ನಾಲ್ದೆಸೆ ಪುಟಿದೋಡುವ ಭಟರ । ಕಾಲ್ಬದಿಯಲಿ ಕಡಿದುತ
ನಿಟಿಲೆಲು ಮುರಿಯಲು ಚಿಟಿಚಿಟಿ ಚೀರುವರ । ಅಂತಕನ ಮನೆಗೆ ಸಂ
ಘಟಿಸಿ ರಣಮಹೋತ್ಸವದಲಿ ದಕ್ಷನ । ಪಟುತರ ಶಿರವನು ಪುಟಿಸಿ
ಯಜ್ಞಾಂತಃ
ಪುಟಸ್ಥಿತ ಕಮಲೇಶ ವಿಠಲಗರ್ಪಿಸಿ ಧೂರ್ಜಟಿಗೆ ಹರುಷ ಉತ್ಕಟವನು
ಗೈಯಲು ॥೩॥

---

ಮುಂದಿರುವ ಚಿಕ್ಕ ಲಾವಣಿಯು ಭೀಮಸೇನನು ನಿಶ್ಶಸ್ತ್ರನಾಗಿ ಏಕಾಂಗಿಯಾಗಿ ಶತ್ರುಸೈನ್ಯದ ಮಧ್ಯೆ ನುಗ್ಗಿ ಯುದ್ಧಮಾಡಿದ ಶೌರ್‍ಯವನ್ನು ವರ್ಣಿಸುತ್ತದೆ.

## ಲಾವಣಿ

ಬಂದನು ಧೀರ । ಕುಂತಿ ಕುಮಾರ । ಬಂದನು ಧೀರ ॥ ಪ ॥
ಮರಹೆಗ್ಗೊಂಬನು ಭೀಮ ಮುರಿದನು । ವರರಥಗಳ ಮೇಲಪ್ಪಳಿಸಿದನು
ಕರಿ ತುರಗಗಳನು ಪುಡಿ ಮಾಡಿದನು । ಅರೆದ ಪದಾತಿಯ ಶಂಕೆಯಿಲ್ಲದನು
ಬರುವ ದೊಣ್ಣೆ ದಾಸನು ಯಾರಿವನು । ಧರಿಸಿಹ ಯಮದಂಡವ ನೋಡಿದರು
ಪುರವ ಸೇರಿದರೆ ಸ್ತ್ರೀಲಾಭದ ಫಲ । ದೊರಕಿತೆಂದು ಓಡಲು ಜನರುಗಳು॥೧॥

ಶ್ರೀಮದ್ರಾಮಾಯಣ, ಭಾರತ, ಭಾಗವತ ಮೊದಲಾದ ಪುರಾಣ ಕಥೆಗಳನ್ನೆಲ್ಲಾ ಪದಗಳಾಗಿ ಪದ್ಯಗಳಾಗಿ ಆರ್ಯಗಳಾಗಿ ಮಧ್ಯಮಧ್ಯ ವಚನ ಸಹಿತ ಬರೆದಿಟ್ಟಿರುವ ಹರಿದಾಸ ಸಾಹಿತ್ಯ ಭಂಡಾರದಲ್ಲಿ ವೀರರಸವಿರುವ ಪದಗಳನ್ನು ಹುಡುಕಬೇಕಾಗಿಲ್ಲ. ಯುದ್ಧ ಪ್ರಸಕ್ತಿ ಬಂದಾಗಲೆಲ್ಲಾ ವೀರರಸವಿದ್ದೇ ಇರುತ್ತದೆ. ಅದಕ್ಕೆ ತಕ್ಕಂತೆ ಪದ ಪದ್ಯಗಳನ್ನವರು ರಚಿಸಿರುತ್ತಾರಾದ್ದರಿಂದ ಮುಂದೆ ಕರುಣಾರಸವನ್ನು ನೋಡೋಣ !

## ಕರುಣಾರಸದಲ್ಲಿ

ಕರುಣಾರಸದಲ್ಲಿ ಭಕ್ತಿಯೂ ಭಕ್ತಿರಸದಲ್ಲಿ ವಿರಹವೂ ಆರ್ತಭಾವವೂ ಒಂದಕ್ಕೊಂದು ಹೊಂದಿಕೊಂಡೇ ಬರುತ್ತವೆ. ವೀರರೌದ್ರರಸಗಳಲ್ಲಿ ಒಂದ ಕ್ಕೊಂದರ ಸಂಬಂಧವಿರುವಂತೆ ಶೃಂಗಾರ ಕರುಣಾರಸಗಳಿಗೂ ಸಂಬಂಧ ಗಳಿರುತ್ತವೆ.

ಭಕ್ತಜನರ ನಿತ್ಯಪಠಣೆಗನುಕೂಲವಾಗಿರಲೆಂದು ಶ್ರೀಪಾದರಾಯರು ಹಾಡಿರುವ ಪದವನ್ನು ಕೆಳಗೆ ಕೊಡಲಾಗಿದೆ.

### ಭೈರವಿ — ಜಂಪೆತಾಳ

ಯಾಕೆ ಪುಟ್ಟಿಸಿದೆ ನೀ । ಸಾಕಲಾರದೆ ಜಗ ।
ದೇಕ ಕಾರಣ ಪುರುಷನೆ । ಕೃಷ್ಣ ॥ ಪ ॥

ಏಕೋ ವಿಷ್ಣುವೆಂಬವಾಕು ಚಿಂತಿಸೆ ಇಂಥ ।
ಕಾಕುಮಾಡುವದುಚಿತವೇ । ಕೃಷ್ಣ ॥ ಅ ॥

ಒಡಲಿಗನ್ನವ ಕಾಣೆ । ಉಡಲು ಅರಿವೆಯ ಕಾಣೆ ।
ಗಡಗಡನೆನಡುಗುತಿಹೆನೋ । ಕೃಷ್ಣ ।
ಕುಡುತೆಕೊಡುವವರಿಲ್ಲ । ನುಡಿಯಕೇಳುವರಿಲ್ಲ ।
ಬಡತನವು ಕಂಗೆಡಿಸಿತೋ । ಕೃಷ್ಣ ।
ಮಡದಿಮಕ್ಕಳಬಿಟ್ಟು । ಒಡಹುಟ್ಟಿದರಬಿಟ್ಟು ।
ಅಡವಿಪಾಲಾದೆನಲ್ಲೋ । ಕೃಷ್ಣ ॥
ಕಡೆಹಾಯುವದಕಾಣೆ । ನಡುಮಡುವಿನೊಳುಕಯ್ಯ ।
ಬಿಡದೆದಡವನು ಸೇರಿಸೋ । ಕೃಷ್ಣ ॥ ೧ ॥

ಕೊಟ್ಟವರಸಾಲವನು । ಕೊಟ್ಟುತೀರಿಸದವರ ।
ಪೊಟ್ಟೆಯೊಳ್ ಪುಟ್ಟಿದ್ದಾಯ್ತೋ । ಕೃಷ್ಣ ।
ಎಷ್ಟುಜನ್ಮದಿಮನ । ಮುಟ್ಟಿಮಾಡಿದಕರ್ಮ ।

ಕಟ್ಟೀಗ ಉಣಿಸುತಿಹದೋ । ಕೃಷ್ಣ ।
ಸೃಷ್ಟಿಯೊಳಗೆನ್ನಂಥ । ಕೆಟ್ಟಪಾಪಿಷ್ಠ ಜನ ।
ಘಟ್ಟಿಸಾಲಿಲ್ಲವೇನೋ । ಕೃಷ್ಣ ॥
ವಿಠಲನೆ ನಿನ್ನ ಮನ । ಮುಟ್ಟಿಭಜಿಸಿ ಹಿಂದೆ ।
ಎಷ್ಟುಜನ ಬದುಕಿಲ್ಲವೊ । ಕೃಷ್ಣಾ ॥ ೨ ॥

ಆಳುದೇಹವು ಗೇಣುಕೀಳಾಗಿ ಪಲ್ಕಿರಿದು ।
ಖೂಳಜನರುಗಳಮನೆಗೆ । ಕೃಷ್ಣ ।
ಹಾಳು ಒಡಲಿಗೆ ತುತ್ತು ಕೂಳಿಗೇ ಹೋಗ್ಯವರ ।
ಓಲ್ಗೈಸಲಾರೆನಲ್ಲೋ । ಕೃಷ್ಣ ।
ಬಾಳು ಈಪರಿಯಾದ । ಮೇಲೆ ಭೂಮಿಯೊಳು ಬಹು ।
ಕಾಲಕಳೆಯುವದುಚಿತವೇ । ಕೃಷ್ಣ ।
ಆಲಸ್ಯವಿಲ್ಲದೆ ಈವೇಳೆಯಲಿ ಎನ್ನ ।
ಪಾಲಿಸಲು ಬಲುಕೀರ್ತಿಯೋ । ಕೃಷ್ಣ ॥ ೩ ॥

ಆರುಗತಿನಿನಗಧಿಕ । ರಾರುಧಾರುಣಿಯೊಳಗೆ ।
ತೋರಿಸೈ ಕರುಣಾನಿಧಿಯೇ । ಕೃಷ್ಣ ।
ಈರೇಳುಲೋಕಕಾಧಾರವಾದವಗೆಬಲು ।
ಭಾರನಾನಾದೆನೇನೋ । ಕೃಷ್ಣ ।
ಮಾರಿನಡೆಯಲು ಹದಿ । ನಾರೆರಡು ಪಲ್ಲುಗಳು ।
ಬೇರುಕಳಚಿ ಕಳೆವವೊ । ಕೃಷ್ಣ ॥
ತೋರುಬಂಕಾಪುರದ ಧಾರುಣೀಪುರವಾಸ ।
ವೀರನರಸಿಂಹದೇವಾ । ಕೃಷ್ಣ ॥ ೪ ॥

ಎಂದೆಂದುಸಿರಿಯರಸ । ನೆಂದು ಶೃತಿಸಾರುತಿದೆ ।
ನೊಂದವರಿಗೇನುಸಿರಿಯೋ । ಕೃಷ್ಣ ।
ಒಂದೊಂದುನಿಮಿಷಯುಗ । ಕಿಂದಧಿಕವಾಗುತಿದೆ ।
ಮುಂದೋರಧಾಂಗಾಯಿತೋ । ಕೃಷ್ಣ ।

ಸಂದೇಹವಿಲ್ಲಗೋವಿಂದ ಶ್ರೀಪದದಾಣೆ |
ತಂದೆನೀರಕ್ಷಿಸದಿರೇ | ಕೃಷ್ಣ ||
ಮುಂದೆಭಜಿಸರುಜನರು ಮಂದಿವಾರ್ತೆಯ ಕೇಳಿ|
ನಿಂದಿಸರುಬಲುನಿನ್ನನು | ಕೃಷ್ಣ || ೫ ||

ಪೃಥ್ವಿಯೊಳಗುದಿಸಿ ಮು | ವ್ವತ್ತಾರುವತ್ಸರ|
ಈತೆರದಿ ಕಾಲಕಳೆದೆ | ಕೃಷ್ಣ |
ವ್ಯರ್ಥ ವಾಯಿತುಜನ್ಮ | ಸಾರ್ಥಕಕಾಗದೆಕಣ್ಣು |
ಕತ್ತಲೆಯು ಕವಿಯಿತಲ್ಲೋ | ಕೃಷ್ಣ |
ಇತ್ತಬಾರೆಂದೆನ್ನ ಹತ್ತಿರಕೆಕರೆದೊಂದು |
ತುತ್ತುಕೊಡುವರಕಾಣೆನೋ | ಕೃಷ್ಣ ||
ವಿಸ್ತರಿಸಲಾರೆ ಇನ್ನೆತ್ತ ಪೋಗಲಿ ನಿನ್ನ |
ಚಿತ್ತವೇತಕೆಕರಗದೋ | ಕೃಷ್ಣ || ೬ ||

ಹರಿಯಾತ್ರೆಸ್ನಾನಗಳಿಲ್ಲ | ಹರಿಮೂರ್ತಿ ನೋಡಲಿಲ್ಲ |
ಹರಿದಾಸಸಂಗವಿಲ್ಲ | ಕೃಷ್ಣ |
ಹರಿವಾರ್ತೆ ಕೇಳಲಿಲ್ಲ | ಸ್ಮರಣವಿಯುವಿಾಯಲಿಲ್ಲ |
ಧರಣಿಸಂಚರಿಸಲಿಲ್ಲ | ಕೃಷ್ಣ |
ಅರಿತರಿತು ಮಾನವಿ[illegible]ಯು ಕೆರಗಿಹರುಷವತಾಳಿ |
ಬರಿದಾಯಿತಾಯುವೆಲ್ಲ | ಕೃಷ್ಣ |
ಕರುಣವಾರಿಧಿಯೆನ್ನ | ಕರವಿಡಿದುಪೊರೆಯದಿರೆ |
ಕರೆದು ಉದ್ಧರಿಪರ್ಯಾರೋ | ಕೃಷ್ಣ || ೭ ||

ದುರುಳಜನರೊಡನಾಡಿ | ಹರಿಣಾಕ್ಷಿಯರನೋಡಿ |
ಸರಿಯಾರು ಎಂದುತಿರುಗಿ | ಕೃಷ್ಣ |
ಪರರನ್ನವಬಯಸಿ | ಶರೀರವನುಪೋಷಿಸಿ |
ಸಿರಬಲಿತುಶಿಲೆಯತಾಕಿ | ಕೃಷ್ಣ |
ನಿರುತಕ್ಷುದ್ರವನೆಣಿಸಿಮೆರೆದೂರವಾರಿಕೆ |

ಗ್ಗರಿಕೋಣನಂತೆ ತಿರುಗಿ । ಕೃಷ್ಣ ।
ಸ್ಮರಿಸಲಾರದಪಾಪ । ಸ್ಮರಣೆಪೂರ್ವಕಮಾಡಿ
ಧರೆಗೆಭಾರಾದೆನಲ್ಲೋ । ಕೃಷ್ಣ ॥ ೮ ॥

ಎಷ್ಟುಪೇಳಲಿಎನ್ನ । ಕಷ್ಟಕೋಟಲೆಗಳನು ।
ಸುಟ್ಟುಎದೆಬೇಯುತಿಹದೋ । ಕೃಷ್ಣ ।
ಕಷ್ಟಪಟ್ಟನೆಂದು । ದೃಷ್ಟಿಸೀರೆರಿಸಿ ಎನ್ನ ।
ಪೊಟ್ಟೆಯೊಳಗಿಡುವರ್ಯಾರೋ । ಕೃಷ್ಣ ।
ಕೃಷ್ಣನಾಮವಜ್ರಕ್ಕೆ ಬೆಟ್ಟದುರಿತವು ಎದುರೆ ।
ಕಟ್ಟನೇ ಬಂದು ನೀನು । ಕೃಷ್ಣ ।
ಇಷ್ಟವನುಸಲಿಸು ಮುಂ । ದೃಷ್ಟಿಯುಲಿಶ್ರೀರಂಗ
ವಿಠಲಎನ್ನ ಸಲಹೋ । ಕೃಷ್ಣ ॥ ೯ ॥

ಧನಾಸರಿ ಜಂಪೆ

ರಂಗ ನೀಲಾಂಗ । ನರಸಿಂಗ ನಿನ್ನಂಘ್ರಿ ಕಮ । ಲಂಗಳಿಗೆ ವಂದಿಸುವೆನೊ ॥ಪ॥
ತುಂಗ ವಿಕ್ರಮನೆ ಭವ । ಭಂಗವನು ಪರಿಹರಿಸೊ ।
ಅಂಗಜನಪಿತಮೋಹ । ನಾಂಗ ರಿಪುಮದಭಂಗ ॥ ಅ ॥

ಶ್ರೀವಿರಿಂಚಾದಿಗಳು ಸೇವಿಸುವ ಚರಣಕೆಂ । ದಾವರೆಯ ಪೋಲ್ವ ಚರಣ
ಆವಿಯದ್ಗಂಗಾದಿ ಸಕಲಾಭಿಮಾನಿಗಳಿ । ಗಾವಾಸವಾದ ಚರಣ
ಭಾವಜ್ಞರಾದ ಭಕ್ತಾವಳಿಗಳಿಗೆಲ್ಲ । ಭಾವಶುದ್ಧಿಯನೀವ ಚರಣ
ಆ ವನಾಂತರವೆಲ್ಲ ಸಂಚರಿಸಿದಾ ಚರಣ । ಆ ವನಧಿಬಂಧಿಸಿದ ಚರಣ
ಆವಸುಧೆಯಳತಂದು ಅಳೆದಂಥಾ ಚರಣ ।
ಪಾವನಾತರ ಚಾರುಚರಣ ಸುಗುಣಾಭರಣ ॥ ೧ ॥

ಸಿಕ್ಕಿಭವಪಾಶದಲಿ ದುಃಖಪಡುತಲಿ ಪರರ । ರೊಕ್ಕವನುಗಳಿಸಿತಂದೆ
ಚಿಕ್ಕವರು ಸತಿಸುತರು ಮಿಕ್ಕಬಂಧುಗಳು ಎಂ । ದಕ್ಕರದಿ ಅವರೊಡನೆ ತಿಂದೆ

ಚಿಕ್ಕಮತಿಗಳಿಂದ ಲೆಕ್ಕಿಸದೆ ಸಜ್ಜನರ । ಧಿಕ್ಕರಿಸಿ ವಿಷಯದಲಿ ನೊಂದೆ
ಕಕ್ಕಸದ ಭವಣೆಗಳದಾಯಕ್ಕೆ ಸಿಕ್ಕಿನಾ । ದಿಕ್ಕವರೆ ಎನಗೆಂದುನಿಂದೆ
ಲಕ್ಕಸಾಂತಕನಿನ್ನ । ಪೊಕ್ಕುಜೀವಿಸದೆ ಬಲು ।
ಸೊಕ್ಕಿನಿಂದಲಿ ತಿರುಗಿ । ಬಳಲಿದೆನೊ ಭವದೊಳಗೆ ॥ ೨ ॥

ಎಂದಿಗೋನಿನ್ನಪದ ಸಂದರುಶನೋತ್ಸವದಿ । ಎಂದಿಗೋತನುಪುಳಕವಹದು
ಎಂದಿಗೋ ಭವದುಃಖಬಂಧಮೋಚಕನೆ ನೀನೆಂದಿಗೆನ ನುದ್ಧರಿಪುದು
ಎಂದಿಗೋ ಸಾಧನ್ಯನೆಂದೆನಿಸಿಭವದಿ ಇನ್ನೆಂದಿಗೋ ಮುಕ್ತನಹದು
ಎಂದಿಗೋ ಆನಂದಬಾಷ್ಪಂಗಳಿಂದ ಇನ್ನೆಂದಿಗೋ ನಾಸ್ತುತಿಪುದು ॥
ಎಂದಿಗೋ ವರದಗುರು ಜಯವಿಠಲ ನೀನೊಲಿವು । ದೆಂದಿಗೋ ನಾಕಾಣೆ ।
ತಂದೆ ಕರುಣಾಸಿಂಧು ॥ ೩ ॥

ಶಹನೆ ಜಂಪೆ

ಕಂಡುಕಂಡು ನೀ ಎನ್ನ । ಕೈ ಬಿಡುವರೇ ಕೃಷ್ಣ
ಪುಂಡರೀಕಾಕ್ಷ ಶ್ರೀ ಪುರುಷೋತ್ತಮನೆ ದೇವ ॥ ಪ ॥

ಬಂಧುಗಳು ಎನಗಿಲ್ಲ । ಬದುಕಿನಲಿ ಸುಖವಿಲ್ಲ
ನಿಂದೆಯಲಿ ನೊಂದೆನೈ । ನೀರಜಾಕ್ಷ ॥
ಬಂಧುಬಳಗವು ನೀನೆ । ತಂದೆತಾಯಿಯು ನೀನೆ
ಎಂದೆಂದಿಗೂ ನಿನ್ನ । ನಂಬಿರುವೆನೋ ಸ್ವಾಮಿ ॥ ೧ ॥

ಕ್ಷಣವೊಂದು ಯುಗವಾಗಿ । ತೃಣಕಿಂತ ಕಡೆಯಾಗಿ
ಎಣಿಸಲಳವಲ್ಲದ । ಭವದಿನೊಂದೇ
ಸನಕಾದಿಮುನಿವಂದ್ಯ ವನಜಸಂಭವಜನಕ
ಫಣಿಶಾಯಿ ಪ್ರಹ್ಲಾದಗೊಲಿದ ಶ್ರೀ ಕೃಷ್ಣ ॥ ೨ ॥

ಭಕ್ತವತ್ಸಲನೆಂಬ ಬಿರುದುಪೊತ್ತಮೇಲೆ
ಭಕ್ತರಾಧೀನನಾಗಿರಬೇಡವೇ ॥

ಮುಕ್ತಿದಾಯಕ ನಮ್ಮ | ಬನ್ನೂರುಪುರವಾಸ
ಶಕ್ತದೇವರದೇವ ಪುರಂದರವಿಠಲ || ೩ ||

ಆಡುವ ಮಾತಿನಲ್ಲಿ—ಹಾಡುವ ಹಾಡಿನಲ್ಲಿ—ಕರುಣೆ ಹುಟ್ಟುವಂತೆ ಇದ್ದರೆ, ಅದರಿಂದ ಉಂಟಾಗುವ ರಸವು ಕರುಣಾರಸವೆನಿಸಿಕೊಳ್ಳುತ್ತದೆ. ಕೀಳ್ತರಗತಿಯ ಮಾತಿನಲ್ಲೂ ಹಾಡಿನಲ್ಲೂ ಉತ್ಪನ್ನವಾಗುವ ರಸವು ಕರುಣಾ ರಸವೆಂದು ಕರೆಸಿಕೊಂಡರೂ ಅದು ಉಚ್ಚ ತರಗತಿಯ ರಸವೆನಿಸುವುದಿಲ್ಲ. ಪ್ರಾಣಿಯ ಮನಸ್ಸಿನಲ್ಲುಂಟಾಗುವ ಕಾಮವೂ ಒಂದು ರಸವೇ. ಅದು ಧರ್ಮಕ್ಕೆ ವಿರೋಧವಲ್ಲದಿದ್ದಾಗ ಮಾತ್ರ ಸಾತ್ವಿಕ ರಸವೆನಿಸಿಕೊಳ್ಳುತ್ತದೆ. "ಧರ್ಮಾವಿರುದ್ಧೋ ಭೂತಾನಾಂ ಕಾಮೋಽಸ್ಮಿ ಭರತರ್ಷಭ" ಎಂದು ಗೀತಾ ಚಾರ್ಯನಾದ ಶ್ರೀ ಕೃಷ್ಣನೂ ಒಪ್ಪಿಕೊಂಡಿರುತ್ತಾನೆ. ಯಾವಾತನ ಸನ್ನಿಧಾನ ವಿದ್ದರೆ ಮಾನವ ಪ್ರಾಣಿಯಲ್ಲಿ ಎಲ್ಲ ಬಗೆಯ ರಸಗಳ ಉದಯವಾಗುವುದೋ, ಯಾವಾತನಿರದಿದ್ದರೆ ಶರೀರವಿದ್ದರೂ ಕಾಷ್ಠಪ್ರಾಯವಾಗುವುದೋ, ಆ ಸರ್ವೇ ಶ್ವರನು ಕೊಟ್ಟ ರಸವನ್ನು ರಸಶಬ್ದವಾಚ್ಯನೇ ಆದ ಆ ಪರಮಾತ್ಮ ಭಜನೆ ಸೇವನೆಗಳಿಗೆ ಉಪಯೋಗಿಸದಿದ್ದರೆ ಮಾನವನ ಜನ್ಮ ವ್ಯರ್ಥವೆನಿಸುತ್ತದೆ. ಆದ್ದರಿಂದ ಹರಿದಾಸರುಗಳು ಎಲ್ಲ ಬಗೆಯ ಭಕ್ತಿಗಳಲ್ಲಿ ಹಾಡಿ ಪರಮಾತ್ಮನನ್ನು ಒಲಿಸಿಕೊಂಡಿರುವಂತೆ ಎಲ್ಲ ರಸಗಳಲ್ಲೂ ಹಾಡಿ ರಸ ಋಷಿಗಳೆನಿಸಿಕೊಂಡಿರು ತ್ತಾರೆ. ಹಾಗಿರದ ಮಾನವನು ಕಾನನದ ಪ್ರಾಣಿಗಿಂತ ಯಾವ ಬಗೆಯಿಂದ ಅಧಿಕನು ?

——o——

## ಅದ್ಭುತ ರಸದಲ್ಲಿ

ಯಾವದು ಆಗಲು ಸಾಧ್ಯವಲ್ಲವೋ ಅದು ಆಯಿತೆಂದು ಮಾತಿನಿಂದ ತೋರಿಸುವುದಕ್ಕೆ ಅದ್ಭುತವೆಂದು ಹೆಸರು. ಅದರ ಪರಿಣಾಮ ಮನಸ್ಸಿನ ಮೇಲಾದರೆ ಅದು ಅದ್ಭುತ ರಸವೆನಿಸಿಕೊಳ್ಳುತ್ತದೆ. ವೀರರಸಕ್ಕೆ ಹೊಂದಿ ಅದ್ಭುತವು ರಸವಾದಂತೆ ಇತರ ರಸಗಳಿಗೆ ಆಗುವುದನ್ನು ಪಂಡಿತರು ಮನ್ನಿ ಸಿಲ್ಲ. ದೇವತಾ ಮೂರ್ತಿಗಳ ಪೈಕಿ ವೀರಭದ್ರ, ರುದ್ರ, ಭೀಮ, ಹನುಮ,

ನರಸಿಂಹ; ರಾಕ್ಷಸರ ಪೈಕಿ ರಾವಣ, ಕುಂಭಕರ್ಣ, ಹಿರಣ್ಯಕಶಿಪು ಮೊದಲಾದ ವ್ಯಕ್ತಿಗಳ ಹೆಸರೆತ್ತಿ ಅದ್ಭುತಗಳನ್ನು ಹೇಳಿದರೆ ಕೇಳುವವರು ಆನಂದದಿಂದ ಕೇಳುತ್ತಾರೆ. ಮುಂದಿನ ಪದವು ಹನುಮಂತನು ಹುಟ್ಟಿದ ಕಾಲದಲ್ಲಿ ಆದವೆಂದು ಅದ್ಭುತ ರಸದಲ್ಲಿ ಹೃದಯಂಗಮವಾಗುವಂತೆ ವರ್ಣಿಸುತ್ತದೆ.

ಪಂತುವರಾಳಿ — ಅಟ್ಟತಾಳ

ಹನುಮಂತನುದಿಸಿದನು । ಭೂತಳದಲ್ಲಿ ।
ಹನುಮಂತನುದಿಸಿದನು ॥ ಪ ॥

ಹನುಮಂತನುದಿಸಿದ । ವನಜನಾಭನ ಪಾದ ॥
ವನಜಗಳ ಸೇವೆಗಳ ಮಾಡಲು ಅನಿಲದೇವರ ಸುಪ್ರಸಾದದಿ ॥ ಅ ॥

ಎಳೆದಳಿರಂದದಿ ಥಳಥಳಿಸುವ ದೇಹ ।
ಗಳದಲ್ಲಿ ನವರತ್ನಗಳ ಹಾರ ಶಿರದಲ್ಲಿ ।
ಹೊಳೆವ ಕಿರೀಟಕುಂಡಲ ಕರ್ಣಕಟಿಸೂತ್ರ ।
ವಿಲಸಿತಕೃಷೆ ಯುಜ್ವಲಿಸಿದ ಉಪವೀತಾ ।
ದ್ಯಲಘುಸಾಲಂಕಾರ ದೇಹದಲಿ ॥
ಪ್ರಟ್ಟುತ್ತ ಸೂರ್ಯನ । ಫಲವೆನುತಲಂಘಿಸಿದ ವೇಗದಲಿ ।
ಕಬಳಿಸುತಲಿರಲಾ । ಬಲನಿಷೂದನನೋಡಿ ಕೋಪದಲಿ ।
ಘಾತಿಸಲು ವಜ್ರದಿ ॥
ಜಳಲುತಲಿ ಮೂರ್ಛೆಯಲಿ ಬೀಳಲು ।
ತಿಳಿದು ಪವನನು ಮುನಿದನಾಕ್ಷಣ ॥ ೧ ॥

ಪರಮೇಷ್ಠಿ ಮೊದಲಾಗಿ ಇರುವೆಯ ಪರಿಯಂತ ।
ಇರುವ ದೇಹಿಗಳೊಳಗಿರುವ ಪ್ರಾಣಾಶುಗ ।
ವಿರದಂತೆ ಕೆಳೆಯುತಲಿರೆ ಬ್ರಹ್ಮಾದ್ಯರು ಪೋಗಿ ।
ಹರಿಗೆ ಬಿನ್ನೈಸಲು ಸುರರೊಡಗೂಡಿ ಶ್ರೀ ॥
ಧರನು ಮಾರುತನೈದಿ ಕುಸ್ತಿರಿಸಿ । ಮಾರುತಿಯನೆಬ್ಬಿಸಿ ।

ವರಗಳಿತ್ತನು ನಿರ್ಜರರವೆರೆಸಿ ।
ಸದ್ವಜ್ರಕಾಯವು ವರಚಿರಂಜೀವತ್ವವಾದರಿಸಿ ।
ಮೇಲ್ ಕಾಮರೂಪಾ ॥
ದ್ಯೆರುತರದ ಸರ್ವಾರ್ಥಸಿದ್ಧಿಯು ।
ಕರುಣಿಸಿದ ಬಳಿಕಾಮರುತ್ಸುತ ॥ ೨ ॥

ಆದಿತ್ಯನಲಿ ಸರ್ವವೇದಗಳನು ಜಂಭ ।
ಭೇದಿಯಿಂ ವ್ಯಾಕರಣಾದಿ ಶಾಸ್ತ್ರಂಗಳ ।
ನೋದಿ ಬ್ರಹ್ಮಚರ್ಯವಾದ ವ್ರತಕೆ ದೀಕ್ಷೆ ।
ಗೈದು ಪೂರ್ಣಕಾಮನಾದ ಮಹಾತ್ಮವಿ ॥
ನೋದಿ ಸುಗ್ರೀವನಲಿ ಸಖ್ಯವನು ।
ಮಾಡುತ್ತ ಪರಮಾಹ್ಲಾದದಿಂದಲಿ ತಂದೆ ತಾಯ್ಗಳನು ।
ಸೇವಿಸುತ ನಿರ್ಮಲ । ವಾದಮನದಲಿ ಮಾಡಿ ಭಕ್ತಿಯನು ॥
ಖಾದ್ರೀ ನೃಸಿಂಗನ ॥
ಪಾದದರುಶನವಾಗಬೇಕೆಂದಾ ದಯಾನಿಧಿ ಬಯಸುತಿರ್ದನು ॥ ೩ ॥

ಮತ್ತೆ ಮಾರುತಿಯು ಶಬ್ದ ಶಾಸ್ತ್ರವನ್ನು ಪಠಿಸುವಾಗ ಸೂರ್ಯನಿಗೆ ಅಭಿಮುಖನಾಗಿ, ಪೂರ್ವಾಚಲದ ಮೇಲೊಂದು ಕಾಲು, ಅಸ್ತಾಚಲದ ಮೇಲೊಂದು ಕಾಲು ಇಟ್ಟುಕೊಂಡು ಸೂರ್ಯನತ್ತ ತಿರುಗಿದರೂ ಅವನ ಮುಖಕ್ಕೆ ಮುಖವಿಟ್ಟು ಕಲಿತನಂತೆ !

“ ತರಣಿಗಭಿಮುಖನಾಗಿ ಶಬ್ದಶಾಸ್ತ್ರವ ಪಠಿಸಿ ।
ಉರವಣಿಸಿ ಹಿಂದು ಮುಂದಾಗಿ ನಡೆದ ॥ ”

ಎಂದು ಮತ್ತೊಂದು ಪದದಲ್ಲಿ ಶ್ರೀ ಪಾದರಾಯರು ವರ್ಣಿಸುತ್ತಾರೆ. ಭೀಮ ಸೇನನು ಮಗುವಾಗಿ ತಾಯ ತೊಡೆಯ ಮೇಲೆ ಮಲಗಿದ್ದಾಗ—

ಕರದಿಂದ ಶಿಶುಭಾವನಾದ ಭೀಮನ ಬಿಡಲು ।
ಗಿರಿಯೊಡೆದು ಶತಶೃಂಗವೆಂದೆನಿಸಿತು ।

ಹರಿಗಳ ಹರಿಗಳಿಂದ ಕರಿಗಳ ಕರಿಗಳಿಂದರಿವ ವೀರನಿಗೆ
ಸುರನರರು ಸರಿಯೆ ?

ಎಂದು ವರ್ಣಿಸಿರುತ್ತಾರೆ. ವೀರಭದ್ರನ ರಣವೈಖರಿಯನ್ನು ವರ್ಣಿಸುವಾಗ ಹರಿದಾಸರು ಮೈಮರೆದು ಅದ್ಭುತದ ಎಲ್ಲೆಯನ್ನು ದಾಟಿ ಭಯಾನಕದ ಪಕ್ಷವನ್ನು ಮುಟ್ಟುತ್ತಾರೆ. ಹಿಂದೆ ಕೊಟ್ಟಿರುವ ದಕ್ಷಯಜ್ಞ ಧ್ವಂಸದ ಪದದ ನುಡಿಯನ್ನು ಮತ್ತೆ ಕಥನ ಮಾಡಿದರೆ ಅದು ಹೀಗಿದೆ :—

ಮುಖಮುಖನಾಯಕ ನಿಕರದ ಮುಡಿಗಳನು ।
ಮುಂಗೈಯಿಗೆ ಸುತ್ತುತ ।
ತಕತ ಧಿಮಿತ ತಕಧಿಕು ಎನೆ ಶಬ್ದವನು । ಕೇಳ್ದ ಗುತಿಹದಿಕ್ಪಾ
ಲಕರನೋಡಿ ತೀಕ್ಷ್ಣಕರದ ಖಂಡೆಯ ।
ಪ್ರಕಟಿಸಿ ಹೊಯ್ದವರ ಕರಚರಣಗಳ
ವಿಕಳಗೈಯೆ ಸಾರನಿಕರವೆದೆಯೊಡೆಯೆ ।
ಅಕಟ ಮಹಾಪ್ರಳಯಕೆ ಸರಿಮಿಗಿಲೆನೆ ॥ ೨ ॥

---

ಹನುಮಂತನು ಲಂಕೆಯನ್ನು ದಹಿಸಿದ ಅದ್ಭುತವನ್ನು ವಾಲ್ಮೀಕಿಗಿಂತ ಅಧಿಕವಾಗಿ ಹೆಚ್ಚಾಗಿ ವರ್ಣಿಸಿರುವುದು ಹರಿದಾಸರ ಕೆಳಕಂಡ ಪದದಿಂದ ಗೊತ್ತಾಗುತ್ತದೆ.

ಪೂರ್ವಿ — ಅಟ್ಟತಾಳ

ಲಂಕೆಯದಹಿಸಿದನು । ಶ್ರೀ ಹನುಮಂತ । ಲಂಕೆಯದಹಿಸಿದನು ॥ಪ॥
ಲಂಕೆಯ ದಹಿಸಿದ । ಪಂಕಜಾಕ್ಷನ ಪಾದ ।
ಪಂಕಜಭೃಮರನಮರಾರಿ ಗ । ಜಾಂಕುಶನು ನಿಶ್ಶಂಕೆಯಿಂದಲಿ ॥ಅ॥

ಕೆಟ್ಟದಶಾಸ್ಯ ಮುಂದರಿಯದೆ ಬಹುಮತಿ ।
ಗೆಟ್ಟವಾ ನರಸಿಂಹರಾಜನವಾಲದೊ
ಳಟ್ಟಕಾಲಾಗ್ನಿ ಧಳ್ಳುರಿಗೊಂಡು ಗಗನವ ।

ಮುಟ್ಟೆಚುಂಬಿಸೆ ಕಿಡಿಗಳ ಕೋಟಿ ಧರಣಿಯೊಳ್
ಬಿಟ್ಟದಂ ತುದುರೆ ಚೆಳ್ಳಟ್ಟಂಬರವ ದೋರ |
ಲಟ್ಟಹಾಸದಿ ಕಂಠೀರವ ಗರ್ಜನೆಯಮಾಡಿ
ಧಿಟ್ಟತನದಿ ದಶಕಂಠನಿದ್ದೆಡೆಗೆ ಧು |
ಮ್ಮಿಟ್ಟು ಸಭೆಯೊಳಿರ್ದದನುಜರನೆಲ್ಲನೆ |
ಬ್ಬಿಟ್ಟು ಪೌಲಸ್ತ್ಯನವಿಗತಾಂಬರನ ಮಾಡಿ |
ಸುಟ್ಟುಮುಖಗಳ ನಂಬರವೀಧಿಪೊಗಿಸಿಬೆ
ನ್ನಟ್ಟಿಓಡಿಸಿ ಮರಳಿ || ಅವನರಮನೆ | ಬಟ್ಟೆವಿಡಿದು ತೆರಳಿ |
ಕೋಪದಿ ಗುಡು | ಗುಟ್ಟಿ ಕೆಂಡಗಳರಳಿ |
ಮಾಣದೆ ರಾಣೀ || ರುಟ್ಟು ತೊಟ್ಟದ ಸುಟ್ಟು ಬೊಬ್ಬೆಗ |
ಳಿಟ್ಟು ಶೋಕಿಸೆ | ಬಟ್ಟಬಯಲೊಳು || ೧ ||

ಘನಕುಂಭಕರ್ಣ ಶಾರ್ದೂಲ ಧೂಮ್ರಾಕ್ಷ ರಾ |
ವಣಿಮಕರಾಕ್ಷಯೂಪಾಕ್ಷ ಪ್ರಹಸ್ತ ಕುಂ |
ಭನಿಕುಂಭ ಮಿತ್ರಘ್ನನತಿಕಾಯ ದೇವಾಂ | ತ |
ಕ ನರಾಂತಕ ಮಹೋದರಾದ್ರಿ ಮುಖಸುರ |
ಶನಿದಂಷ್ಟ್ರದುರ್ಮತ್ತ ವಿರುಪಾಕ್ಷಪಾರ್ಶ್ವಸಾ |
ರಣಶುಕ ವೃಶ್ಚಿಕ ರೋಮಹಿರೋಮ ಶೂ |
ರ್ಪನಖಿ ಯುದ್ಧೋನ್ಮತ್ತ ಮುಖ್ಯರಾಕ್ಷಸರಿಪ್ಪ |
ಮನೆ ಮನೆಗಳನೆಲ್ಲ ತಿರುಗಿ ತಿರುಗಿ ಪೊಕ್ಕು
ಅನಲನಿಂದಹಿಸಿ ಭಸ್ಮೀಭೂತವನುಗೈಸಿ |
ವಿನುತವಾಗಿಪ್ಪ ವಿಭೀ | ಷಣನರಮನೆ ||
ಯನುನೋಡಿ ಇವ ಯೋಗ್ಯನು | ಶ್ರೀಹರಿಪಾದ |
ವನಜಗಳಿಗೆ ಭಕ್ತನು | ರಾಮನಕಾರ್ಯ |
ವನುಮಾಡಲಿವ ಶಕ್ತನು | ಮುಂದಿವನೆ ಈ |
ದನುಜವಂಶವಿನಾಶನು | ಸಂಶಯ ಸಲ್ಲ || ದೆನುತ
ಲಾತನ ಮನೆಯ ರಕ್ಷಿಸಿ | ದನು ದಯಾವನರಾಶಿ ಹನುಮನು || ೨ ||

ಮುಂದೆ ಪೋಗುತ ಬ್ರಹ್ಮಕ್ಷತ್ರ ವಿಟ್ಶೂದ್ರರ |
ಮಂದಿರಗಳನು ಗೋಪುರ ದೇವಾಲಯಗಳ |
ವೃಂದಗಳನುಕರಿಹಯ ರಥಶಾಲೆಯ |
ಸಂದೋಹಗಳನು ಶಸ್ತ್ರಾಸ್ತ್ರ ವಸ್ತ್ರಾಗಾರ | ದಂಡ
ಗಳನು ಧನಧಾನ್ಯ ಸನ್ಮಣಿಗಣ |
ದಿಂದಿಪ್ಪ ಕೋಶರಾಜಿಗಳ ಮಲ್ಲಾಲಯ |
ಚಂದದಿಂದಿಹ ರಾಜವೀಧಿಗಳುಪವೀಧಿ |
ಕುಂದ ದಿಷ್ಟಾರ್ಥವನೀವ ಪುಣ್ಯವೀಧಿ |
ಸಂದು ಗೊಂದುಗಳು ಗಾಯಕ ವಿಟ ನಟ ವೇಶ್ಯಾ |
ಸುಂದರಿಯರ ಸದನಂಗಳು ಸೌಧಗಳ್ ||
ಚಂದಿರ ಶಾಲೆಗಳು | ಕ್ರೀಡಾರ್ಹಕೆ | ಸಂದಿಹ ಭವನಂಗಳು |
ಏಕಾಂತಕಾ | ನಂದ ನಿವಾಸಗಳು |
ಮುಂತಾದುದ || ಬೆಂದು ನಿಂದುರಿವಂದದಲಿ ತನ್ನ |
ತಂದೆಗೆಳೆಯಗೆ ವಂದಿಸುತ್ತಲಿ

|| ೩ ||

ಕೇರಿ ಕೇರಿಗಳಲ್ಲಿ ಬೀದಿ ಬೀದಿಗಳಲ್ಲಿ |
ನಾರಿಯರನು ಕಾಣದರಸುವ ಪುರುಷರು
ನೀರೆಯರ್ಪತಿಗಳಿಂದಗಲಿ ಶೋಕಿಪುವರು |
ಓರಂತೆಸುತರ ಕಾಣದೆ ಚಿಂತೆ ಪಡುವರು |
ಘೋರಾಗ್ನಿಯಿಂ ಬೆಂದು ಬಳಲುವರ್ಕೆಲವರು |
ನೀರ ತೋರೆಂದು ಬಾಯಾರುವರ್ಕೆಲವರು |
ಚಾರುತರದೊಳುಟ್ಟ ವಸನಗಳುರಿಗೊಂಡು |
ಸೂರೆಯಾಗಲು ಮಾನಕಳುಕಿ ಸಮುದ್ರಜೊ |
ಳ್ಹಾರಿಬಿದ್ದ ಸುವನೀಗುವರಾಗ ಕೆಲವರು |
ನಾರಿಯ ತಂದೀತೆರನಗೈದನೂರನೆಂ ||
ದಾರಾವಣನ ಬೈವರು | ಇನ್ನ್ಯಾಕೆ ಸಂ |
ಸಾರವೆಂದಳಲುವರು | ಲಂಕೆಗೆ ಉರಿ |

ಮಾರಿ ಈ ಕಪಿಯೆಂಬರು । ದೈತ್ಯರಿಗೆಲ್ಲ ।
ವೈರಿ ಭೂಸುತೆಯೆಂಬರು ॥ ಸತ್ಯ ನಾವಿ ॥
ನ್ನೊರಲಿನ್ನಿರಬಾರದೆನುತಲಿ । ಪೌರಜನಗಳು ಸಾರಿ ಗೋಳಿಡೆ ॥ ೪ ॥

ವಾನರ ನೋರ್ವನ ಪಿಡಿದು ವಾಲವನು ವೈ ।
ಶ್ವಾನರ ನಿಂದಲುರುಹಿ ಪುರದೊಳಗೆ ದ ।
ಶಾನನ ಮೆರೆಸುವನೆಂದು ತ್ರಿಜಟೆಯೊಳು ।
ದಾನವಿಯೋರ್ವ್ವಳುಸುರುತಿರಲದ ಕೇಳಿ ।
ಜಾನಕಿ ಚಿಂತಿಸಿ ವಹ್ನಿ ಸೂಕ್ತವ ನಿಜ ।
ಮಾನಸದಲಿ ಧ್ಯಾನವ ಮಾಡೆ ಅನಿಲನ
ಸೂನು ಚಂದನಲಿಪ್ತ ದೇಹನಾಗುತ ಪರ ।
ಮಾನಂದ ಸಾಂದ್ರನಾಗುತ ಮುಪ್ಪುರಗಳ ಈ
ಶಾನನುರುಹಿದಂತೆ ಪಙ್ಕ್ತಿಕಂಠನಪುರ ।
ಹೀನಾಲಂಕಾರವ ಮಾಡಿ ನೀರಧಿಯೊಳು ॥
ಸ್ನಾನವಮಾಡಿ ಬೇಗ । ಸೀತಾದೇವಿ ।
ಯೇನಾದಳೆನುತಲಾಗ । ಚಿಂತಿಸಿ ಬಂದು
ಮಾನಿನಿ ಮಣಿಯರಾಗಾ । ನ್ವಿತದಿಕಂಡು ।
ತಾನಾಲಂಕೆಯ ಶಿಖಿಗಾ । ಹುತಿಯನಿತ್ತ ॥
ವೈನವೆಲ್ಲವ ತಿಳುಹಿದನು ಖಾದ್ರೀನೃಸಿಂಹಾ । ಧೀನವಾಗುತಿ ॥ ೫ ॥

ದಾಸರ ಪದಗಳೊಂದೊಂದನ್ನು ಓದುವಾಗಲೂ, ರಾಗ ತಾಳಗಳಲ್ಲಿ, ಕಾಲಗತಿಗಳಲ್ಲಿ, ಓದುಗರು ಓದಿದರೆ-ಹಾಡಿದರೆ-ಸಾಹಿತ್ಯದ ಗಾಂಭೀರ್ಯ, ಶಬ್ದ ಸಮೃದ್ಧಿ, ಅರ್ಥಪೂರ್ಣತೆ, ರಸಭಾವಗಳ ಆವಿರ್ಭಾವ, ಒಂದೊಂದೂ ಗೊತ್ತಾಗಿ ಆನಂದವಾಗುತ್ತದೆ. ಲಘು ಮನಸ್ಸಿನಿಂದ ಹೊತ್ತು ಕಳೆಯಲೆಂದು ಹಾಳೆಗಳನ್ನು ಮಗುಚಿದರೆ ಅರ್ಥವಾಗುವುದಿಲ್ಲ. ಈ ಒಂದೇ ಪದದಲ್ಲಿರುವ ಒಂದೊಂದು ಔಚಿತ್ಯ ನೋಡಿದರೂ ದಾಸ ಸಾಹಿತ್ಯದ ನಿಜಸ್ವರೂಪ ಗೊತ್ತಾ

ಗುತ್ತದೆ. ಇದೇ ಕವಿಯು, ಶಿವನು ಯುದ್ಧಕ್ಕೆ ಹೊರಟಾಗ ಸಾಮಗ್ರಿಗಳನ್ನೊದಗಿಸಿ ಕೊಟ್ಟಿರುವುದನ್ನು ನೋಡಿದರೆ ಪುರಾಣ ಕಥೆಗಳಲ್ಲಿ ಕೊಟ್ಟಿರುವ ಅದ್ಭುತವೊಂದನ್ನೂ ಬಿಡದೆ, ಇದ್ದಷ್ಟನ್ನೂ ಮತ್ತಷ್ಟು ಸಂಗ್ರಹ ಮಾಡಿ ಸಂಪೂರ್ಣ ಮಾಡಿ ಕೊಟ್ಟಿರುವಂತೆ ಕಾಣುತ್ತದೆ. ಆ ಸಂಗತಿ ಪದ್ಯ ರೂಪದಲ್ಲಿ—

ಧರೆರಥ ವೇದಘೋಟ ಶಶಿಸೂರ್ಯರಥಾಂಗ ವಿಧಾತಸೂತ ನಿ
ರ್ಜರಗಿರಿಚಾಪ ಶೇಷಗುಣ ಮಾಧವನ ಕಾಂಡವಮಾಡಿ ಸಾಂಬ ಮು
ಪ್ಪುರಗಳಗೆಲ್ದುದೇನರಿದು ಮಾರುತಿಯೊಬ್ಬನೆ ಲಂಕೆಯನು ಧ
ಕ್ಕುರಿಗೆಡೆಗೊಟ್ಟನಚ್ಚರಿಯಿದೆಂದು ಸುರರ್ನುತಿಗೈದರಭ್ರದೋಳ್ ॥೧॥

ಎಂಬಂತಿದ್ದು, ಶಿವನು ಅಷ್ಟೊಂದು ಸಾಮಗ್ರಿಗಳ ಸಹಿತ ಯುದ್ಧಮಾಡಿ ಮುಪ್ಪುರಗಳನ್ನು ಸುಟ್ಟದ್ದು ದೊಡ್ಡದಲ್ಲ ; ಮಾರುತಿ ಯೊಬ್ಬನೇ ಇಷ್ಟು ಕಾರ್ಯವನ್ನು ಮಾಡಿದ್ದು ಆಶ್ಚರ್ಯ; ಎಂದು ದೇವತೆಗಳು ನುಡಿದಂತೆ ಅವರ ಬಾಯಿಗೆ ಈ ಮಾತನ್ನು ಹಾಕಿ ನುಡಿಸಿ ಬಿಟ್ಟಿದ್ದಾನೆ.

ಅದ್ಭುತ ರಸದ ಸವಿಯುಂಡು ಶ್ರಮ ಪರಿಹಾರಕ್ಕೆ ಸ್ವಲ್ಪ ಹಾಸ್ಯ ಬೇಕೆಂದು ಬಯಸುವವರಿಗೆ ಹರಿದಾಸರ ತಿಳಿಹಾಸ್ಯ ಕೆಳಕಂಡಂತಿರುತ್ತದೆ.

——o——

## ಹಾಸ್ಯರಸದಲ್ಲಿ

ರಾವಣನ ಸಭೆಯಲ್ಲಿ ತಾ ಸಿಂಧವನೆಂದು ಪರಿಚಯಮಾಡಿಸಿ, ಸಿಂಹಾಸನಾರೂಢನಾಗಿರುವ ರಾವಣನನ್ನು ನೋಡಿ, ರಾವಣನೆಂಬುವನು ನೀನೇನೇ ಎಂದು ಕೇಳುವ ವ್ಯಾಜವಿಟ್ಟುಕೊಂಡು ಮಾರುತಿಯು ಹಾಸ್ಯಮಾಡಿ ಬುದ್ಧಿ ಹೇಳುತ್ತಾನೆ.

ದ್ವಿಜಾವಂತಿ — ಆದಿತಾಳ

ನೀನೇನೇ ರಾವಣನೆಂಬಾತನು । ದಾನವವಂಶಜನು । ದಶಮುಖ ॥ ಪ ॥
ಭಾನುಕುಲೇಶ್ವರರಿಲ್ಲದ ಸಮಯದಿ । ಜಾನಕಿದೇವಿಯ ಚೌರ್ಯದಿತಂದವ ॥ಅ॥

ಸುರೇಶ್ವರಋಷಿಗಳ ಪರಿಭವಗೊಳಿಸಿದೆ | ಸರಿ ಎನಗಾರೆಂಬ | ಗರ್ವದಿ |
ಹರನಗಿರಿಯ ನೀನೆಗಹಲು ಕೋಳ್ಗಳು |
ಗಿರಿಯಲಿ ತಗಲಿರಲು | ನೋಯುತ |
ಹರುಷವಳಿದು ಸಾ | ಸಿರವರುಷಂಗಳು |
ನರಿಯೊರಲುವಪರಿ | ನರಳಿದ ಧೀರನು || ೧ ||

ಸ್ವರ್ಗಭುವನವರ | ವೆನಗುಂಟೆಂಬುವ | ಘನತರವಹ ಮದದಿ | ಪೂರ್ವದಿ |
ಜನನುತಕಾರ್ತವೀರ್ಯನೊಳಾಹವದಲಿ | ಶಿಕ್ಷಿಸಿ ದುರುಳತನದಿ | ತಿಳಿಯದೆ ||
ವಿನುತ ಭುಜಸಹ | ಸ್ರನಪುರದಲ್ಲಿ ಸೆರೆ | ಮನೆಯೊಳು ಸಿಲುಕಿ |
ಬದುಕಿ ಬಂದಾತನು || ೨ ||

ಬಲದೊಳಧಿಕನೆಂಬ ಮಾಹಂಕಾರದ | ಜಲಧಿಯೊಳೋಲಾಡಿ | ನೀನಿರು
ತ್ತಲಿದ್ದಲ್ಲು ವಾಲಿ ನಿನ್ನನು ಪತ್ತುತಲಿಯ |
ಹುಳುವೆನ್ನುತಲಿ ಪಿಡಿದು | ನಿಜಸುತ ||
ಮಲಗಿಹ ತೊಟ್ಟಿಗೆ ಬಂಧಿಸೆ ಶಿಶುಪದ |
ಗಳಲಳವಡಿಸಲು | ಪಲುಕಿರಿದಾತನು || ೩ ||

ಕಾಮಾತುರದಲಿ ಬಹುಪತಿವ್ರತೆಯರ | ನೇಮವಳಿದು ಮರುಳಾ | ಹೆಂಗಳ |
ಕಾಮುಸರೊಳಗಗ್ರೇಸರನಾಗುತ | ನೀಮಾಣದೆ ವೇದಾ | ವತಿಯನು ||
ಕಾಮಿಸಿ ಪಿಡಿಯಲು ಕಡುಖತಿಗೊಳುತಲಿ |
ಕಾಮಿನಿ ಶಪಿಸಲು ಕರದಲಿ ತಾಳ್ದವ || ೪ ||

ಜಗದೊಳಗನುಪಮ | ಸಾಹಸನೆನುತಲಿ | ನಗಜಾಧೀಶ್ವರನ | ಚಾಪವ |
ನೆಗಹುವೆನೆನುತಡಿಯಲಿ ಬಿದ್ದಳಲುತ | ನಗೆಗೊಳಗಾಗುತಲಿ | ಲಜ್ಜೆಯ |
ಬಗೆಯದೆ ಕಡೆಯಲಿ ಖಾದ್ರಿ ನೃಸಿಂಗನ |
ಹಗೆಯ ಮಾಡಿಕೊಂಡು | ಹಗರಣವಾದವ || ೫ ||

ಇದು ಹೀಗಿದ್ದರೆ, ಭಾರತದಲ್ಲಿ ದ್ರೌಪದೀ ಸ್ವಯಂವರ ಘಟ್ಟದಲ್ಲಿ ಮತ್ಸ್ಯ ಯಂತ್ರವನ್ನು ಕತ್ತರಿಸುವ ಸಂದರ್ಭದಲ್ಲಿ ಒಬ್ಬರಾಗುತ್ತಲೊಬ್ಬರು

ರಾಜರು ಬಂದು ಸೋಲುತ್ತಿರಲು ಮದ್ರಾಧಿಪತಿಯಂಥವನು ಸಹ ಬಿದ್ದು ದನ್ನು ಕಂಡು ಸ್ತ್ರೀಯರು—

ವಾರ್ಧಿಕ ಷಟ್ಪದಿ.

ಕೈಯ್ದೊಡೆದು ನಗುತಿರ್ದರಬಲೆಯರ್ ಮಾದ್ರೀಶ
ಸೈಯ್ಯ ಸೈ ಸೈ ಶಬಾಸ್ಸೆಂದೆನಲು ಮಿಡಿದೆರ್ದು
ಮೆಯ್ಯುಧೂಳಿಯಲಿಂದ ಮುರಿದೋಡುತಿರಲಾಗ ಶಲ್ಯನಂಕಂಡು ಕರ್ಣ
ವಯ್ಯಾರದಿಂದೆ ಮುಂಗೈಯ ಸರಪಳಿ ತಿರುಹು
ತೆಯ್ಯನೈತಂದವನ ನೋಡಿ ಭೂಪತಿಮನಕೆ
ಪ್ರಿಯವಾಗದೆ ಇವನ ಸೌಂದರ್ಯ ಫಲುಗುಣನ
ಹರಿಯೊಂದು ಭ್ರಮಿಸಿತ್ತಿಂತು ॥ ೧ ॥

ಕರ್ಣನೂ ಪರಾಜಿತನಾಗುತ್ತಾನೆ. ಬಲರಾಮನನ್ನು ಶ್ರೀ ಕೃಷ್ಣನು ಮತ್ಸ್ಯ ಯಂತ್ರದ ಗೊಡವೆ ಬೇಡೆಂದು ತಡೆಯುತ್ತಾನೆ. ಬ್ರಾಹ್ಮಣ ಸಭೆ ಯಲ್ಲಿ ಶಿಷ್ಯ ವೃತ್ತಿಯವನಂತೆ ಕುಳಿತಿದ್ದ ಛದ್ಮವೇಷಧಾರಿ ಅರ್ಜುನನನ್ನು ಕೃಷ್ಣನು ನೋಡುತ್ತಾನೆ. ವೈದಿಕ ಬ್ರಾಹ್ಮಣ ವೇಷದಿಂದ ಮತ್ಸ್ಯ ಯಂತ್ರ ವನ್ನು ಛೇದಿಸಲು ಬಂದ ಅರ್ಜುನನನ್ನು ನೋಡಿ ಬ್ರಾಹ್ಮಣರು ಹಾಸ್ಯ ಮಾಡುತ್ತಾರೆ.

ಅದರ ಬಗೆ ಕೇಳಕಂಡಂತಿದೆ.

ಅರ್ಥ॥ ಏನೀ ಬ್ರಾಹ್ಮಣ ಎದ್ದು ನಿಂತಿಹನು ।
ಮಾನನಿಧಿಗಳೆಲ್ಲರು ಇರಲು
ಮಾನಿನಿಯಳ ಮೇಲಾಶೆಗೈದಿಹನು ।
ಮೀನಕೇತನನ ಭಾಧೆಯೊಳು ॥ ೧ ॥

ಬಾಣಾಸನನ ಕೃಷ್ಣಾ ಜಿನವಲ್ಲಿದು ।
ತಾನೆತ್ತಲು ಪೃಥುಕದ ಗಂಟೇ
ಏನಿದು ಬಿಷಾಸನದ ಕೋಳವಿಯೊ ।
ಶ್ರೀನಿಧಿ ದಯ ಇವನಲ್ಲುಂಟೇ ॥ ೨ ॥

ಹಗರಣ ಮಾಡುವ ಬ್ರಾಂಹರನೆಲ್ಲರ ।
ನಗೆಗೀಡಾಗುವದೀ ಸಭೆಗೆ
ಸೊಗಸು ಭೋಜನ ದಕ್ಷಿಣೆ ಉಡುಗೊರೆ ।
ಹಗೆಯಾಯಿತು ಸಿದ್ಧವು ನಮಗೆ ॥ ೩ ॥

ಮತ್ತೆ............

ಧನಾಸರಿ — ಆದಿತಾಳ

ಎದ್ದಷ್ಟೇನು ಕಾರಣವಯ್ಯ । ಕಾರಣವಯ್ಯ ॥ ಪ ॥
ಈ । ಮುದ್ದುಮೋಹನಾಂಗಿಗೆ ಮೋಹಿಸಿ ನೀನೆದ್ದದ್ದೇನು ॥ಅ॥

ಗದ್ದುಗೆಯವರೆಲ್ಲ । ಬಿದ್ದದ್ದು ನೋಡಿ । ಈ ।
ಮುದ್ದೆಗೂಳಿನಮದ । ಬುದ್ಧಿಯಿಂದ ನೀ ॥ ೧ ॥

ತರುಣಿಯು ಕಾಂತಿಗೆ । ಶರಣೆನಾಡುವನು । ನಿ ।
ನ್ನಿರುವಿಕೆ ಸಭೆಗೆ ಗಾ । ಬರಿ ಗೈಸುತಲಿ ॥ ೨ ॥

ಈ ಸಭೆಯೊಳ್ ಶಮ । ಲೇಶ ವಿಠಲ ತನ್ನ
ದಾಸಾಭೀಷ್ಟೆ ಪೂ । ರೈಸುವದರಿತು ನೀ ॥ ೩ ॥

ಭಯೋತ್ಪಾದನೆಕರಣದಲ್ಲಿ

ನಮ್ಮ ಶಾಸ್ತ್ರದಲ್ಲಿ ಮಾಡಬೇಕಾದುದನ್ನು ಮಾಡಬೇಕೆಂದು ವಿಧಿಸುತ್ತಾರೆ. ಮಾಡಬಾರದುದನ್ನು ಮಾಡಕೂಡದೆಂದು ನಿಷೇಧಿಸುತ್ತಾರೆ. ಅಷ್ಟು ಮಾತ್ರದಿಂದ ಜನರು ವಿಧಿಗೊಳಗಾಗುವುದಿಲ್ಲ. ಮಾಡಬೇಕಾದುದನ್ನು ಮಾಡುವುದಿಲ್ಲ. ಬಿಡಬೇಕಾದುದನ್ನು ಬಿಡುವುದಿಲ್ಲ. ಅದಕ್ಕಾಗಿ ಕೆಲವು ಆಶೆಗಳನ್ನೂ ಭಯಗಳನ್ನೂ ತೋರಿಸಬೇಕಾಗುತ್ತವೆ. ಆಶೆಯೆಂದರೆ ಪರಲೋಕದಲ್ಲಿ ಒಳ್ಳೆಯದಾಗುವುದೆಂಬುವುದು. ಭಯವೆಂದರೆ ಪರಲೋಕದಲ್ಲಿ ಕೆಟ್ಟದ್ದಾಗುವುದೆಂಬುವುದು. ಅಷ್ಟಲ್ಲದೆ ಅಜೆ ಹಾಕಿದಂತೆ ಕೆಲವು ಮಾತನ್ನೂ ಹೇಳುತ್ತಾರೆ. ಇದರಂತೆ ರಾಜ್ಯಾಂಗದಲ್ಲಾದರೂ ನಿಯಮಗಳೇರ್ಪಟ್ಟಿವೆ.

ಹೆಚ್ಚು ನಿಯಮಗಳಿಗೊಳಪಟ್ಟ ಜನಾಂಗವು ನಾಗರಿಕ ಜನಾಂಗವೆನಿಸುತ್ತದೆ. ಶಾಸ್ತ್ರದಲ್ಲಿ ಹೆಚ್ಚು ವಿಧಿಬದ್ಧನಾದವನು ಶಿಷ್ಟನೆನಿಸುತ್ತಾನೆ; ಆಗದವನು ದುಷ್ಟನೆನಿಸಿಕೊಳ್ಳುತ್ತಾನೆ.

ಹಿಂದೂ ಜನ ಸಾಮಾನ್ಯರಲ್ಲಿ ಏಕಾದಶೀ ವ್ರತವು ಎಲ್ಲ ವ್ರತಗಳಿಗಿಂತ ಶ್ರೇಷ್ಠ ವ್ರತವೆಂಬ ನಂಬಿಕೆಯಿದೆ. ಏಕಾದಶೀ ವ್ರತ ಮಾಡಿದವರಿಗೆ ಮಹಾ ಫಲವಿದೆಯೆಂದು ಹೇಳುವ ಪುರಾಣಗಳಿವೆ. ವ್ರತ ಮಾಡದವರಿಗೆ ಕೆಲಕೆಲವು ಭಯಗಳೂ ಆಣೆಗಳೂ ಇವೆ. ಶಾಸ್ತ್ರದ ಮಾತನ್ನು ಹರಿದಾಸರು ಕೆಳಕಂಡ ಬೇಹರ ನಾಮದಲ್ಲಿ ಹಾಡಿ ಭಯ ತೋರಿಸಿದ್ದಾರೆ.

ಪಂತುವರಾಳಿ — ಅಟ್ಟತಾಳ

ಹರಿದಿನದಲಿ ಉಂಡನರರಿಗೆ । ಘೋರ ।
ನರಕ ತಪ್ಪದು ಎಂದು ಶೃತಿಸಾರುತಲಿದೆ ॥ ಪ ॥

ಒಂದೊಂದು ಅಗಳಿಗೆ ಕೋಟಿ ಕ್ರಿಮಿಗಳು ।
ಅಂದಿನನ್ನವು ನಾಯಿ ಮಾಂಸವು
ಮಂದರೋದ್ಧಾರನ ದಿನದಲ್ಲುಂಡವರನ್ನು ।
ಹಂದಿಯ ಸುಡುವಂತೆ ಸುಡಿಸುವ ಯಮನು ॥ ೧ ॥

ಗೋವುವಿಪ್ರರುಗಳ ಕೊಂದ ಪಾಪ ।
ಸಾವಿರ ಜೀವ ಹತ್ಯದ ಪಾಪ
ಭಾವಜನಯ್ಯನ ದಿನದಲುಂಡವರನ್ನು ।
ಕೀವಿನೊಳಗೆ ಹಾಕಿಸುವನು ಯಮನು ॥ ೨ ॥

ಅನ್ನೋದಕ ತಾಂಬೂಲದರ್ಪಣ ನೋಟ ।
ಭಿನ್ನ ಅವಸ್ಥೆಗಳು ವಿಶೇಷದಿ
ತನ್ನ ಸತಿಯ ಸಂಗಮಾಡಿದ ಮನುಜನ ।
ಬೆನ್ನಿನ ಚರುಳಾಬಗೆಸುವ ಯಮನು ॥ ೩ ॥

ಝಾವದ ಜಾಗರ ಕ್ರತು ನಾಲ್ಕುಸಾವಿರ ।
ಝಾವ ನಾಲ್ಕರ ಫಲಮಿತಿಯಿಲ್ಲವೋ
ದೇವ ದೇವೇಶನ ದಿನ ನಿದ್ರೆಗೈವರ ।
ಕಾವಲಿ ಮೇಲಿಟ್ಟು ಸುಡಿಸುವ ಯಮನು ॥ ೪ ॥

ಇಂತು ಏಕಾದಶಿಯುಪವಾಸ ಜಾಗರ ।
ಸಂತಸದಿಂದ ಮಾಡುವ ಜನಕೆ ॥
ಸಂತೋಷಗಳನಿತ್ತು ಪೊರೆಯುವ ಲಕ್ಷ್ಮೀಕಾಂತನು ನಮ್ಮ ಶ್ರೀ ।
ಪುರಂದರ ವಿಠಲ ॥ ೫ ॥

---

## ಭೀಭತ್ಸ ರಸದಲ್ಲಿ

ರಕ್ತಮಾಂಸ ಮದ್ಯ ವ್ರಣ ಇಂತಹ ಕೇಳಲು ಕರ್ಕಶ ನೋಡಲು ಅಸಹ್ಯ ವಿಷಯವನ್ನು ವರ್ಣಿಸಿ ಹೇಳಿದರೆ ಅದು ಭೀಭತ್ಸವೆನಿಸುತ್ತದೆ. ವೀರರಸದಲ್ಲಿ ಕ್ರೌರ್ಯ ಬಂದ ಕೂಡಲೇ ಅದು ರೌದ್ರವಾಗುತ್ತದೆ. ರೌದ್ರದ ಎಲ್ಲೆ ಮೀರಿದರೆ ಅದೇ ಭೀಭತ್ಸವೆನಿಸುತ್ತದೆ. ವೀರರಸದಲ್ಲಿ ಇವೆರಡರ ಸಮಾವೇಶವೂ ಆಗುವುದರಿಂದ ಭೀಭತ್ಸವೆಂದು ಪ್ರತ್ಯೇಕ ಮಾದರಿಯನ್ನು ಬರೆಯುವುದು ಯೋಗ್ಯವಲ್ಲ. ಭಯಾನಕದಲ್ಲಿ ಕೊಂಚ ಭೀಭತ್ಸವೂ ಬಂದಿರುವುದರಿಂದ ಅದಷ್ಟು ಭಾಗವನ್ನು ಭೀಭತ್ಸವೆಂದು ಕೊಳ್ಳಬಹುದು. ನರಕ ಯಾತನೆಗಳನ್ನು ವರ್ಣಿಸುವ ಹಾಡುಗಳಿದ್ದರೂ ಕೊಡಲು ಮನವೊಡಂಬಡುವುದಿಲ್ಲ.

## ರೌದ್ರರಸದಲ್ಲಿ

ಭೀಮಸೇನನು ದುಶ್ಶಾಸನನನ್ನು ರಣಾಂಕಣದಲ್ಲಿ ಕೆಡಹಿ ಅವನ ವಕ್ಷಸ್ಥಳವನ್ನು ಬಗೆದು ಕುಣಿದಾಡಿದ ದೃಶ್ಯವೊಂದು ಭಾರತದಲ್ಲಿ ಬರುತ್ತದೆ. ಅದನ್ನು ಬರೆಯುವಾಗಲೂ ಎಲ್ಲೆ ಮೀರದೆ ಬರೆದಿರುವ ಒಂದು ನುಡಿಯನ್ನು

ಕೆಳಗೆ ಓದಬಹುದು. ಅದರ ಮುಂದಿನ ನುಡಿಯನ್ನು ನೋಡಿದರೆ ಭೀಮನಲ್ಲಿ ಭಕ್ತಿ ಬರುತ್ತದೆ. ಈ ನುಡಿ ಓದಿದರೆ ಭಯವಾಗುತ್ತದೆ.

ಪದ — ಅಟ್ಟತಾಳ

ಜಯ ಜಯ ಭೀಮಸೇನ || ಪ ||

ಜಯ ಭೀಮಸೇನ ದುರ್ಜಯ ಪರಾಕ್ರಮ ಧೀರ |
ಪಯಾ ಪಯೋನಿಧಿಯೆ ನಿರ್ಭಯ ವೈಷ್ಣವಾಗ್ರಣಿ || ಅ ||

ಮಣಿಮಯ ರಥವೇರಿ | ಫಣಿಕೇತನನನುಜನು |
ರಣದಿ ದುರ್ಗಣನು ಮಾ | ರ್ಗಣಗಣಾಂಗಣದೊಳು
ರಣ ಅಂಗಣದಿ ನಿನ್ನ ಕೆಣಕಲಾಕ್ಷಣ ನೋಡಿ |
ತೃಣಮಾಡಿಗದೆಯಿಂ [illegible] ಯ ಮೆಟ್ಟಿ
[illegible] ಝಣಕು ಕಿಂಝುಣಕೆನ್ನೆ |
ರಣಾಧಿ ಮುಡಿವ ವಾಕ್ಪ್ರಣವ ತೀರಿಸಿ ಅತ್ಯು ||
ಲ್ಬಣದಿಂದವಗೆ ಲಂಘಿಸಿ | ವಕ್ಷದಿಂ ಕ್ತ ಕೊಣನ ಶಸ್ತ್ರದಿ ನಿರ್ಮಿಸಿ |
ಕಾದಾಡಿ ಕೂಗಿ | ರಣಮೊಳೊಪ್ಪಿದೆ ನಿನಗೆಣೆಯಿಲ್ಲವೆನಿಸಿ ||

ದುಃಶ್ಯಾಸನನ ವಕ್ಷಸ್ಥಳದ ರಕ್ತಪಾನ ಮಾಡಿದನೆಂದಾಗಲಿ, ಅವನ ಹಲ್ಲುಗಳ ಬಾಚಣಿಗೆಯಿಂದ ದ್ರೌಪದಿಯ ಕೆದರಿದ ಮುಡಿಯನ್ನು ರಕ್ತ ಬಳಿದು ಬಾಚಿದನೆಂದಾಗಲಿ ಹೇಳುವಷ್ಟು ದೂರ ದಾಸರ ಹೋಗಿಲ್ಲ.

ಶಾಂತರಸವಲ್ಲಿ

ಪ್ರಸಕ್ತ ಶಾಂತರಸದಿಂದ ರಸಾಧ್ಯಾಯವು ಸಂಪೂರ್ಣವಾದರೆ, ರಸಗಳ ಸಂಖ್ಯೆ ಒಂಭತ್ತಾಗುತ್ತದೆ. ನವವಿಧ ಭಕ್ತಿಯೆಂದು ಭಾಗವತ ಕಾಲದಿಂದ ಪ್ರಸಿದ್ಧಿಯಿರುವಂತೆ, ನವರಸಗಳೆಂಬ ಪ್ರಸಿದ್ಧಿಯನ್ನೂ ಪೋಷಿಸಿದಂತಾಗುತ್ತದೆ ಭರತ ಮುನಿಯ ಮತದಂತೆ ರಸಗಳು ಎಂಟು ಮಾತ್ರ. ಪ್ರಾಕವಿ ಧಂಡಿಯು ಭರತ ಮುನಿಯನ್ನು ಅನುಸರಿಸಿ ಮಹಾ ಕಾವ್ಯಗಳನ್ನು ಬರೆ

ಡನು. ಅಗ್ನಿ ಪುರಾಣದಲ್ಲಿ ಅಂಗೀಕೃತವಾಗಿರುವ ಶಾಂತರಸವನ್ನು ರುದ್ರ ಭಟ್ಟನೂ ಹರಿಚಂದ್ರನೂ ಸ್ವೀಕರಿಸಿದನು. ಅನಂತರ ವಾತ್ಸಲ್ಯವೂ ಒಂದು ರಸವಾಯಿತು. ಬರುತ್ತ ಬರುತ್ತ ಉಪನಿಷತ್ಕಾಲದ "ರಸ" ಶಬ್ದಾರ್ಥವು ಕೇವಲ ವೈಷಯಿಕ ರಸವಾಗಿ ರಾಜಸವಾಯಿತು. ಸ್ವಚ್ಛಂದವಾಗಿ ಬೆಳೆಯು ತ್ತಿರುಹ ರಸ ಕಾವ್ಯಗಳಿಂದ ಆಗುವ ಮಾನಸಿಕ ಪರಿಣಾಮವನ್ನು ಚೈತನ್ಯ ಪಂಥಿಗಳು ತಡೆದು ಕೇವಲ ಸಾತ್ವಿಕಾರ್ಥದ ಐದು ರಸಗಳಲ್ಲಿ ಸಾಧನೆ ಗಳನ್ನೇರ್ಪಡಿಸಿದರು. ಕರ್ಣಾಟಕದ ಹರಿದಾಸರಾದರೂ ಭಕ್ತಿಯ ಬೆಳವಣಿ ಗೆಗೆ ಅನುಕೂಲವಾಗುವ ರೀತಿಯಲ್ಲಿ ರಸ ವಿಕಾಸವಾಗುವ ಸಾಹಿತ್ಯಗಳನ್ನು ಬರೆದು ತಾವು ಅನುಭವಿಸಿ ತನ್ಮಯರಾಗಿ ಲೋಕಕ್ಕೂ ಹಂಚಿದರು. ಶಾಂತ ರಸದಲ್ಲಿರುವುದು ವೈರಾಗ್ಯ ಮತ್ತು ಅದರಿಂದುಂಟಾಗುವ ತೃಪ್ತಿ. ಮಾನವ ಜನ್ಮದ ಅಸ್ಥಿರತೆ, ಪರಾಧೀನತೆ ಮೊದಲಾದವು ಶಾಂತರಸದಲ್ಲಿ ಸಮಾವೇಶ ವಾಗುತ್ತವೆ. ಶಾಂತರಸಕ್ಕೆ ಹೊಂದಿದ ಸಾಹಿತ್ಯವು ಹೇರಳವಾಗಿ ಇರುತ್ತದೆ.

"ನಸಾಧಯತಿಮಾಂಯೋಗೋ ನಸಾಂಖ್ಯಂ ಧರ್ಮ ಉದ್ಧವ ॥ ನಸ್ವಾ ಧ್ಯಾಯಸ್ತಪಸ್ತ್ಯಾಗೋ ಯಥಾ ಭಕ್ತಿರ್ಮಮೋರ್ಜಿತಾ" ಎಂಬ ಭಾಗವತ ಏಕಾದಶಸ್ಕಂಧದ ಉಕ್ತಿಯಂತೆ ಶಾಂತಭಾವವನ್ನು ತಳೆದ ಮಾನವನು ಸಿದ್ಧನೆನಿಸುತ್ತಾನೆ, ತೃಪ್ತನಾಗುತ್ತಾನೆ, ಜೀವನ್ಮುಕ್ತನಾಗುತ್ತಾನೆ. ಅವನ ಮಾತಿನಲ್ಲಿ ಶಾಂತತೆಯು ಸರ್ವದಾ ನೆಲೆಸಿರುತ್ತದೆ. ಶಾಂತಿಯಿಂದ ತೃಪ್ತಿ ಯುಂಟಾಗುತ್ತದೆ. ಶ್ರೀ ಮದ್ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು

ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವಚ
ನಿರ್ಮಮೋನಿರಹಂಕಾರಃ ಸಮದುಃಖ ಸುಖಃ ಕ್ಷಮಿ
ಸಮಶ್ಶತ್ರೌಚ-ಮಿತ್ರೇಚ-ತಥಾಮಾನಾಪಮಾನಯೋಃ
ಶೀತೋಷ್ಣ ಸುಖದುಃಖೇಷು ಸಮಸ್ಸಂಗ ವಿವರ್ಜಿತಃ

ಎಂಬು ಹೇಳಿರುವಂತೆ ಅವನಲ್ಲಿ ಸಮಭಾವವು ತಾನೇ ತಾನಾಗಿರುತ್ತದೆ. ಅವನ ಮಾತಿನಲ್ಲಿ ಸ್ಥಾಯಿಭಾವವಿರುತ್ತದೆ. ಇಂತಹ ನಿರ್ವೇದ ಸ್ಥಿತಿಯಲ್ಲಿ

ಪುರಂದರದಾಸರು ವ್ಯಾಸರಾಯರಿಂದ ಅಂಕಿತೋಪದೇಶ ಪಡೆದು "ಇಂದಿನ ದಿನವೇ" ಎಂಬ ಉಗಾ ಭೋಗವನ್ನು ಹಾಡಿದ ನಂತರ ಪ್ರಶಾಂತಿಯ ಪರಮಾವಧಿಯಲ್ಲಿ ನಗರ ವೀಧಿಯಲ್ಲಿ ಬರುತ್ತಾ—

ಎರುಕುಲ ಕಾಂಬೋದಿ — ಆದಿತಾಳ

ಕೃಷ್ಣಮೂರ್ತಿ । ಕಣ್ಣಮುಂದೆ । ನಿಂತಿದ್ದಂತಿದೆ ॥ ಪ ॥
ಮಸ್ತಕದಲಿ ಮಾಣಿಕದ ಕಿರೀಟ ।
ಕಸ್ತೂರಿ ತಿಲಕದಿಂದೆಸೆವಲಲಾಟ
ಸಿಸ್ತಾಗಿ ಕೊಳಲನೂದುತ ಓರೆನೋಟ ।
ಕೌಂಸ್ತುಭ ಎಡಬಲದಲ್ಲಿ ಓಡಾಟ ॥ ೧ ॥

ಝಗಝಗಿಸುವ ಸೊಬಗಿನ ಸುಳಿಗುರುಳು ।
ಚಿಗುರು ಶ್ರೀ ತುಳಸಿಮಾಲೆಯ ಕೊರಳು [illegible] ॥ ೨ ॥
ಬಗೆ ಬಗೆ ಹೊನ್ನುಂಗುರವಿಟ್ಟು ಬೆರಳು ।
ಸೊಗಸಿನನಾಭಿಯ ತಾವರೆ ಅರಳು ॥ ೩ ॥

ಉಡುದಾರ ಒಡ್ಯಾಣ ನಿಖಿಲಾಭರಣ ।
ಬೆಡಗು ಪೀತಾಂಬರ ಶತರವಿಕಿರಣ
ಕಡಗನೂಪುರಗೆಜ್ಜೆಗಳನಿಟ್ಟ ಚರಣ ।
ಒಡೆಯ ಪುರಂದರ ವಿಠಲನ ಕರುಣ ॥ ೪ ॥

ಎಂಬ ಪದವನ್ನು ಹಾಡಿದರು.

ಕೆಳಕಂಡ ಸುಳಾದಿಯಲ್ಲಿ ಶಾಂತರಸದ ತೃಪ್ತಿಯ ಉದ್ಗಾರಗಳಿವೆ.

ಧ್ರುವತಾಳ

ನಿನ್ನ ಚಿತ್ತ ಎನ್ನ ಭಾಗ್ಯ । ಇನ್ನೊಬ್ಬರೆನಗಿಲ್ಲ ।
ಮನ್ನಣೆ ಅಮನ್ನಣೆ ನಿನ್ನದೊ ಸರ್ವೇಶ
ಬೆನ್ನ ಕೊಟ್ಟೆನೊ ನಿನಗೆ ಎನ್ನ ಏನನ್ನ ಮಾಡೊ ।
ಸನ್ನುತಾಂಗ ಶ್ರೀ ಶ್ರೀನಿವಾಸ

ನಿನ್ನ ಬಣ್ಣಿಸಿ ನಾನು ಘನ್ನ ಬೇಡುವದಿಲ್ಲ ।
ಎನ್ನದೆಂಬಹಂಕಾರವನ್ನು ಬಿಡಿಸೊ ದೇವ
ಎನ್ನ ಸಂಕಲ್ಪವೆಲ್ಲ ನಿನ್ನ ಆಧೀನವೈಯ್ಯಾ
ನಿನ್ನ ಸಂಕಲ್ಪಕಿನ್ನು ಭಿನ್ನ ಭಿನ್ನಗಳಿಲ್ಲ
ಎನ್ನಿಚ್ಛಾಪ್ರೇರಕ ಎನ್ನೊಡೆಯನೆ ಕೇಳೊ ।
ಮನವಚನ ಕಾಯದಿಂದ ಇನ್ನೊಂದ ಹಾರೈಸೆ
ಬಿನ್ನಪ ಮಾಡುವೆ ಇದನೆ ನಿಲ್ಲಿಸಿಕೊಡು ।
ಇನ್ನು ಮುನ್ನೆಂದೂ ಇದೆ ಸಿದ್ಧನಯ್ಯಾ
ಚಿನ್ಮಯ ಮೂರುತಿ ಗೋಪಾಲ ವಿಠಲ ।
ನಿನ್ನ ಬಿಡಲರಿಯೆ ಅನ್ಯರಿಂಗಾಲ್ಪರಿಯೆ ॥ ೧ ॥

ಮಟ್ಟತಾಳ

ನಿನ್ನಿಂದಲಿ ದತ್ತವಾಗದವಸ್ತು ।
ಅನ್ನಂತವಿದ್ದರು ಅದು ಎನಗೆ ಬೇಡ
ಅನ್ಯಕರ್ಮವಮಾಡಿ ಅನ್ಯದೇವರ ಬೇಡಿ ।
ಎನ್ನುದರ ಪೂರ್ತಿಯನ್ನು ಮಾಡಲಾರೆ
ಬಣ್ಣಗೆಟ್ಟವನಾಗಿ ಅನ್ನವಿಲ್ಲದೆ ಆ ।
ರಣ್ಯವ ಸೇರೀ ಪಣ್ಣು ಮೆಲುವೆ
ಚಿನ್ಮಯ ಮೂರುತಿ ಗೋಪಾಲ ವಿಠಲ ।
ನಿನ್ನ ಚಿತ್ತಕೆ ಬಾರದ್ದಿನ್ನೊಂದಾಗುವದಿಲ್ಲ ॥ ೨ ॥

ರೂಪಕತಾಳ

ನೀನಿತ್ಯ ನೀ ಸತ್ಯ ಅನಾದಿಕಾಲಕ್ಕೆ ।
ಏನುಪಡುವ ತೃಪ್ತಿ ನಿನ್ನಿಂದಲಿನ್ನಕೆ
ಕಾಣದ್ದು ಒಂದುಂಟೆ ನಿನ್ನ ಕಂಡವರಿಗೆ ।
ಜಾಣತನವೇಕೆ ಎನ್ನೊಡೆಯ
ಪ್ರಾಣಿಗಳಿಗೆ ಅನಿತ್ಯವಸ್ತುಗಳಲ್ಲಿ ।

ಏನುಭ್ರಮೆಯ ಪುಟ್ಟಿಸಿ ಮರುಳುಗೈಸುವೆಯೊ
ಶ್ರೀನಾಥ ನಿನ್ನ ಸಾಹಸಕೆ ನಾನೇನೆಂಬೆ ।
ಧ್ಯಾನಿಸಿನೋಡೆ ಶತಾನಂದಗೋಚರವಲ್ಲ
ದೀನರಕ್ಷಕ ದೇವ ಗೋಪಾಲ ವಿಠಲ ।
ನೀನು ಕುಣಿಸಿದಂತೆ ನಾ ಕುಣಿವೆನಯ್ಯ ॥ ೩ ॥

ಜಂಪೆತಾಳ

ಹಾಗೆ ಆಯಿತಿನ್ನು ಹಾಗೆ ಆಗಲಿ ದೇವ ।
ಹೀಗೆ ಆಯಿತಿನ್ನು ಹೀಗೆ ಆಗಲಿ ದೇವ
ಹಾಗು ಹೀಗು ಇನ್ನು ಎರಡು ಆಗಲಿ ದೇವ ।
ಆಗ ಅಂಜಿದನ್ಯಾರೋ ಈಗ ಅಳುಕುವನ್ಯಾರೊ
ಆಗುವಂಥಾ ಕಾರ್ಯ ಆಗಲೀಸದನ್ಯಾರೋ ।
ಆಗದಂಥಾ ಕಾರ್ಯ ಆಗಲೀಸುವನ್ಯಾರೋ
ತೂಗುವ ತೊಟ್ಟಿಲು ತೂಗಿ ತೂಗಿ ತೂಗಿ ।
ಹೋಗಿ ತನ್ನ ಸ್ಥಳಕೆ ನಿಲ್ಲುವದಯ್ಯ
ಸಾಗರಶಯನ ಶ್ರೀ ಗೋಪಾಲ ವಿಠಲ ।
ಭೋಗ ತೀರಿಸಿ ದೇವ ಬೇಗ ಸಲಹೊ ॥ ೪ ॥

ತ್ರಿಪುಟತಾಳ

ವಾಸುದೇವ ನಿನಗೆ ವಾರ್ತೆಯೊಂದೇ ಕೇಳು ।
ಈಶನೆಂಬೋ ಪೆಸರು ನಿಮ್ಮದಯ್ಯ
ದಾಸನೆಂಬೋ ಪೆಸರು ಎಂದಿಗು ನಿಮಗಿಲ್ಲ ।
ದಾಸತನವೆಲ್ಲ ನಮ್ಮದಯ್ಯ
ದಾಸತ್ವವಿಲ್ಲದೆ ಈಶತ್ವ ಪ್ರಕಟಿಸದು ।
ದಾಸನಿಲ್ಲದ ಈಶತನವೇತಕೆ
ದೋಷರಹಿತ ರಂಗಗೋಪಾಲ ವಿಠಲ ।
ದಾಸರ ಬಿಡದಿರು ಏಸೇನು ಬಂದರು ॥ ೫ ॥

### ಅಟ್ಟತಾಳ

ಕ್ಷಮವಿದ್ದ ನೆಂಟರು ಕೆಲವರು ಎನಗಿನ್ನು ।
ಧನದಿಂದ ನೆಂಟರು ಕೆಲವರು ಎನಗಿನ್ನು
ಗುಣದಿಂದ ನೆಂಟರು ಕೆಲವರು ಎನಗಿನ್ನು ।
ಋಣದಿಂದ ನೆಂಟರು ಕೆಲವರು ಎನಗಿನ್ನು
ದಿನದಿಂದ ನೆಂಟರು ಕೆಲವರು ಎನಗಿನ್ನು
ಇನಿತು ನೆಂಟರೊಳು ಎನಗೆ ಒಬ್ಬರಕಾಣೆ ।
ಅನುವಾಗಿ ಇದ್ದರೆ ಆಪ್ತ ನಮ್ಮವರೆಲ್ಲ
ಅನುವು ತಪ್ಪಿದರಿನ್ನು ಆರು ನಮ್ಮವರಲ್ಲ ।
ನಿನಗೆ ಎನಗೆ ನೆಂಟತನವು ಹೀಗೆ ಅಲ್ಲ
ಅನಿಮಿಷ ಅಗಲದೆ ಅನಿಮಿತ್ತ ಬಂಧುವಾಗಿ ।
ಕ್ಷಣಬಿಡದಲೆ ಕಾವ ಗೋಪಾಲ ವಿಠಲ
ನಿನಗೆ ಮಾಡುವದೇನೊ ಎನ್ನಿಂದ ನಮೋ ನಮೋ ॥ ೬ ॥

### ಆದಿತಾಳ

ನೀನೆ ವೈಕುಂಠ ನೀನೇ ಮುಕುತಿ ಎನಗೆ ।
ನೀನೆ ಸಕಲತೀರ್ಥ ಕ್ಷೇತ್ರಂಗಳೆನಗೆ
ನೀನೆ ಫಲಪ್ರದ ಸಕಲರಲ್ಲಿ ನಿಂತು ।
ನೀನಿದ್ದ ಸ್ಥಳದಲ್ಲಿ ಸಕಲ ದಿವಿಜರು
ದೀನಜನರಪಾಲ ಗೋಪಾಲ ವಿಠಲ ।
ಜ್ಞಾನಿಗಳಿಗೆ ಪ್ರಿಯ ನಾ ನಮಿಸುವೆನೊ ॥ ೭ ॥

### ಜತೆ

ಕಾಣದವನೆ ನಿನ್ನ ಕರುಣಾಪಾತ್ರನವ ।
ಕಾಣುವವ ಬೇಡನು ಗೋಪಾಲ ವಿಠಲ ॥ ೧ ॥

ವ್ಯಾಸರಾಯರು ಶ್ರೀರಂಗ ಕ್ಷೇತ್ರದಲ್ಲಿ ಪ್ರತ್ಯಕ್ಷ ಭಗವದ್ದರ್ಶನವಾದಾಗ ಹಾಡಿದ ಪದವನ್ನು ಕೆಳಗೆ ಉದಹರಿಸಿರುತ್ತದೆ. ಈ ಪದವನ್ನು ಹಾಡಿದ್ದು ಧ್ವಜಸ್ತಂಭದ ಬಳಿ ಬೆಣ್ಣೆ ಮಾರುತಿ ಇರುವ ಸ್ಥಳದಲ್ಲಿ. ಆಗ ಮಾರುತಿಯನ್ನು ಆ ಸ್ಥಳದಲ್ಲಿ ಪ್ರತಿಷ್ಠಿಸಿದವರು ವ್ಯಾಸರಾಯರು. ಕೃಷ್ಣದೇವರಾಯನು ಸಮ್ಮುಖದಲ್ಲಿದ್ದು ಭಕ್ತ ಮಾರುತಿ ವಿಗ್ರಹವನ್ನು ಪ್ರತಿಷ್ಠಿಸಲು ಸಹಾಯ ಮಾಡಿದನೆಂದು ಇತಿಹಾಸವಿದೆ. ಈಗಲೂ ರಂಗನಾಥನ ದರ್ಶನ ಲಭಿಸದಿದ್ದರೆ ಮಾರುತಿಯ ದರ್ಶನಮಾಡಿ ಜನರು ತೃಪ್ತಿಪಡುತ್ತಾರೆ. ವ್ಯಾಸರಾಯರು ಪ್ರತಿಷ್ಠಿಸಿದ ಆ ಮಾರುತಿಯು ಇಷ್ಟಾರ್ಥ ಪ್ರದನೆಂದು ಜನರು ಸೇವೆಯನ್ನು ಸಲ್ಲಿಸುತ್ತಾರೆ.

ಆರಭಿ [illegible]

ಸೇರಿದೆನು ಸೇರಿದೆನು ಶ್ರೀರಂಗೇಶನ । ಶ್ರೀಪಾದಪಂಕಜಗಳ [illegible]
ಜನ್ಮ ನರಕದ ಭಯವು ಇನ್ನು ಎನಗಿಲ್ಲ [illegible] ॥ ಪ ॥

ನೇತ್ರಗಳು ಕೃಷ್ಣನ ಮೂರ್ತಿಯನು ನೋಡುತಿವೆ ।
ಶ್ರೋತ್ರಗಳು ಹರಿಕಥೆಯ ಕೇಳುತಲಿವೆ
ರಾತ್ರಿ ಹಗಲೂ ಎನ್ನ ಮನಸು ಶ್ರೀರಂಗನಲಿ ।
ಪಾತ್ರವಾಗುತಿದೆನ್ನ ಗಾತ್ರ ಕೃಷ್ಣನ ಮುಂದೆ ॥ ೧ ॥

ಹಸ್ತಗಳು ಮಂಟಪದ ಮಾರ್ಜನೆಯ ಮಾಡುತಿವೆ ।
ಮಸ್ತಕವು ಶ್ರೀಹರಿಯ ಚರಣ ಕೆರಗುತಿದೆ
ವಿಸ್ತಾರವಾಗಿ ಪದಪ್ರದಕ್ಷಣೆಯ ಮಾಡುತಿದೆ ।
ಕಸ್ತೂರಿ ಗಂಧವಾ ಮೂಗು ಘ್ರಾಣಿಸುತಿದೆ ॥ ೨ ॥

ಹರಿನಾಮ ಕೀರ್ತನೆಯ ಮಾಡುತಿದೆ ಎನ್ನ ಜಿಹ್ವೆ ।
ಹರಿನಾಮ ಜನ್ಮಪಾವನತೆಯಿಂದ
ಹರಿಪ್ರೀತಿಯಾಗಿದೆ ನೋಡಿದರೆ ಎನ್ನ ದೇಹ । [illegible]
ಶ್ರೀಕೃಷ್ಣ ನೆಲೆಸಿದನು ಎನ್ನ ಮನಮಂದಿರದಿ [illegible] ॥ ೩ ॥

ವಿಜಯದಾಸರಿಗೆ ಹರಿಸಾಕ್ಷಾತ್ಕಾರವಾದಾಗ ಶಾಂತಿಯಿಂದ ತೃಪ್ತಿಯಿಂದ ಹಾಡಿದ ಸುಳಾದಿಯ ಒಂದು ತಾಳ ಮಾತ್ರ ಮುಂದೆ ಉದಹರಿಸಿದೆ.

ಅಟ್ಟ ತಾಳ

ನರಿಮೇರುಗಿರಿ ಶಿಖರಾಗ್ರದಿ ಕುಳಿತು ।
ಕರದೊಳು ಪೀಯೂಷ ಪಾತ್ರೆಯ ಪಿಡಿದು
ಸುರಿವ ತೆರನಂತೆ ಎನಗಿಂದು ದೊರಕಿತು ।
ಹರಿಚರಣಾಮೃತ ಸುರಿದು ಸುಖಿಸಿದೆ
ಗುರುಗಳನುಗ್ರಹ ಪಿರಿದಾಗಿ ಸಿದ್ಧಿಸಿತು ।
ನರಿಗೆ ವಂಚಕನಾಮ ಪರಿಹರವಾಯಿತು
ಧರೆಯೊಳು ನಾನೊಬ್ಬ ವಂಚಕನಾಗಿದ್ದೆ ।
ಕರುಣಿಸಿ ಹರಿ ತನ್ನ ಇರವ ತೋರಿಸಿದ
ಸುರರಪಾಲಕ ರಂಗ ವಿಜಯ ವಿಠಲನ ।
ನಿರೀಕ್ಷಿಸಿ ಕೊಂಡಾಡಿ ಭವವನು ದಾಟಿದೆ ॥ ೪ ॥

ಇದೇ ಸುಳಾದಿಯ ಜತೆಯನ್ನು ನೋಡಿದರೆ-ಹಾಡಿದರೆ-ರೋಮಾಂಚವಾಗಿ ದೇವರನ್ನು ಕಂಡ ತೃಪ್ತಿಯಾಗುತ್ತದೆ.

ಜತೆ

ಗಿರಿರಾಯ ಸುರರಾಯ ಸುಖಪೂರ್ಣ ಮಹರಾಯ
ಉರಗಾದ್ರಿವೇಂಕಟ ವಿಜಯ ವಿಠಲರಾಯ ॥ ೧ ॥

---

ಕನ್ನಡ ಭಾರತವನ್ನು ರಚಿಸಿದ ನಾರಣಪ್ಪನು ಪುರಂದರದಾಸರ ಮನೆಯಲ್ಲಿಳಿದು ತನ್ನ ಗ್ರಂಥವನ್ನು ತಾನೇ ಓದಿ ತೋರಿಸಿದಾಗ, ತೃಪ್ತಿಯಿಂದ ಕೇಳಕಂಡ ಸುಳಾದಿಯನ್ನು ದಾಸರು ಹಾಡಿದರು. ನಾರಣಪ್ಪನನ್ನು ಪರಮ ಭಾಗವತನೆಂದು ತಿಳಿದುದರಿಂದ ಅವನ ಹೆಸರನ್ನು "ಕುಮಾರ ವ್ಯಾಸ"ನೆಂದು ಸೂಚಿಸಿ ಸುಳಾದಿ ಮಾಡಿದ್ದಾರೆ. ಐತಿಹಾಸಿಕ ಮಹತ್ವ ಶಾಂತ ರಸ

ನಿಂದುಂಟಾಗುವ ತೃಪ್ತಿಯ ಮಹತ್ವ ಎರಡೂ ಇರುವ ಕಾರಣ ಶ್ರೇಣೀಯಾಗಿ ಕೊಟ್ಟಿದ್ದೇನೆ.

## ಸುಳಾದಿ

### ಧ್ರುವತಾಳ

ಹರಿಶರಣಾರೆನ್ನ ಮನೆಯ ಮೆಟ್ಟಲು ಮನೆ ।
ಪರಮಪಾವನ್ನವಾಯಿತು ಆಆಆ
ಹರಿಶರಣ ರೆನ್ನ ಕೂಡಿ ಮಾತನಾಡೆ ಮನವು ।
ಕರಣಂಗಳು ಪಾವನ್ನ ಆಆಆ
ಹರಿಶರಣರು ಎನ್ನ ಮನೆಯಲ್ಲುಂಡರೆ
ಎನ್ನವರ ಇಪ್ಪತ್ತೊಂದು ಕುಲಪಾವನ ಆಆ
ಹರಿಗದುಗಿನ ವೀರ ನಾರಾಯಣಸ್ವಾಮಿ ।
ಹರಿಪುರಂದರ ವಿಠಲರೇಯ ಆಆ ॥ ೧ ॥

### ಮಟ್ಟತಾಳ

ಭಾರತ ಆಗಮ ಗೋಚರವೆಂದು ವಿ ।
ಚಾರಿಸೆ ಮನುಜರಿಗೆ ಗೋಚರವಪ್ಪಂತೆ
ವೀರನಾರಾಯಣ ನೀ ಕವಿಯೆನಿಸೀದೆ ಕು ।
ಮಾರ ವ್ಯಾಸನಿಂದ ಭಾರತ ವಿರಚಿಸಿದೆ ॥ ೨ ॥

### ರೂಪಕತಾಳ

ಬದರಿಕಾಶ್ರಮದಲ್ಲಿ ಇದ್ದು ಇದ್ದು ।
ಬಾದರಾಯಣನೆಂದೆನಿಸಿದಂತೆ
ವಿದುರವಂದಿತ ಪುರಂದರ ವಿಠಲ ನೀನು ।
ಗದುಗಿನ ವೀರನಾರಾಯಣ ನೆನಿಸಿದೆ ॥ ೩ ॥

### ಅಟ್ಟತಾಳ

ಭಾರತಮಲ್ಲ ಭೀಮನೆಂಬರುಗಡ ।
ಭಾರತಮಲ್ಲ ಅರ್ಜುನೆಂಬರುಗಡ
ಭಾರತಮಲ್ಲ ಕರ್ಣನೆಂಬರುಗಡ ।
ಭಾರತಮಲ್ಲರು ಇವರ್‍ಯಾರು ಅಲ್ಲಗಡ
ಭಾರತಮಲ್ಲ ಗದುಗಿನ ವೀರ ।
ನಾರೇಯಣನುಗಡ ಪುರಂದರ ವಿಠಲ ॥ ೪ ॥

### ಆದಿತಾಳ

ಯದುಕುಲದಲ್ಲುದಿಸಿ ಗೋಪೇರ ನೋಲಿಸಿದ ।
ಗದುಗಿನ ವೀರ ಪುರಂದರ ವಿಠಲ ॥ ೫ ॥

### ಜತೆ

ಪದುಮನಾಭಗಿರಿ ಪುರಂದರ ವಿಠಲ ।
ಗದುಗಿನ ವೀರನಾರಾಯಣಸ್ವಾಮಿ ॥ ೧ ॥

ಇದರಷ್ಟು ಚಿಕ್ಕ ಸುಳಾದಿ ಯಾವುದೂ ಇಲ್ಲ: ಸಾಹಿತ್ಯ ಕಡಮೆಯಾಗಿದ್ದಷ್ಟೂ ಸಂಗೀತಕ್ಕೆ ಹೆಚ್ಚು ಸ್ಥಾನ ದೊರೆಯುವುದರಿಂದ, ಇದನ್ನು ಸಾಹಿತ್ಯ ಸುಳಾದಿಯೆನ್ನುವುದಕ್ಕಿಂತ ಸಂಗೀತ ಸುಳಾದಿಯೆಂದು ಕರೆಯಬಹುದು. ಸ್ವಯಂ ರಚಿಸಿದ ಕಾವ್ಯವನ್ನು ಸ್ವಯಂ ಗಮಕಿಯಾಗಿ ನಾರಣಪ್ಪನು ಹೇಗೆ ಹಾಡಿರಬಹುದೋ ಉತ್ತರವಾಗಿ ಪುರಂದರದಾಸರು ಮೇಲ್ಕಂಡ ಸುಳಾದಿಯನ್ನು ಹೇಗೆ ಹಾಡಿರಬಹುದೋ ತಿಳಿಯಲು ಸಾಧ್ಯವಿಲ್ಲ. ಕಡೆಯದಾದ ಜತೆಯಲ್ಲಿ "ಪದುಮನಾಭಗಿರಿ" ಯೆಂಬ ಶಬ್ದವಿರುವುದರಿಂದ ಆ ಪ್ರಾಂತ್ಯದ ಕ್ಷೇತ್ರ ಪುರಾಣದಲ್ಲಿ ಗದುಗಿಗೆ ಏನು ಹೆಸರು ಇತ್ತೋ ವಿಚಾರಿಸಬೇಕು. ಅಥವ ಗದಗಿನ ಸಮೀಪದ ವೆಂಕಟಾಪುರವೆಂಬ ಸಣ್ಣಗುಡ್ಡವಿರುವ

ವಿಷ್ಣು ಕ್ಷೇತ್ರಕ್ಕೆ ಈಗಿನ ಗದಗು ಸೇರಿ ಪದುಮನಾಭಗಿರಿಯೆಂದು ಕರೆ ಕೊಳ್ಳುತ್ತಿತ್ತೋ ಎಂಬುದನ್ನು ತಿಳಿಯಬೇಕು.

ದಿಗ್ದರ್ಶನ ಮಾಡಿದಂತೆ ನವರಸಗಳ ಮಾದರಿಗಳನ್ನು ತೋರಿಸಿದ ದಾಯಿತು. ಗೀತಾಚಾರ್ಯನಾದ ಕೃಷ್ಣನು ಸಾಂಖ್ಯ ಯೋಗಗಳು ಪ್ರತ್ಯೇಕ ವಾದುವುಗಳಲ್ಲ, ಎರಡರ ಫಲವೂ ಒಂದೇ ಎಂಬಂತೆ, ಭಕ್ತಿ ಮತ್ತು ರಸ ಎಂಬುವು ಒಂದರಿಂದ ಮತ್ತೊಂದು ಬೇರೆಯಾದುದಲ್ಲ. ಭಕ್ತಿಯು ಅಭಿ ವ್ಯಕ್ತಿಗೆ ಬಂದಾಗ ರಸವೆನಿಸಿಕೊಳ್ಳುತ್ತದೆ. ರಸವನ್ನು ಶಬ್ದದಿಂದ ವರ್ಣಿಸಿ ದಾಗ ಅದರ ರಸವನ್ನು ಭಾವನೆಂದು ಕರೆಯುತ್ತಾರೆ. ಎಲ್ಲಕ್ಕೂ ಮೂಲ ವಾಗಿರುವುದು ಭಕ್ತಿ. ಭಕ್ತಿಯೆಂದರೆ ಪ್ರೇಮ. ಪ್ರೇಮವಿಲ್ಲದ ಕರ್ಮವಿಲ್ಲ. ಪ್ರೇಮವಿಲ್ಲದ ಜ್ಞಾನವಿಲ್ಲ. ಪ್ರೇಮವಲ್ಲದೆ ಭಕ್ತಿಯೆಂಬುವುದು ಅನ್ಯವಸ್ತು ವಲ್ಲ. ಭಕ್ತಿಯ ವೈವಿಧ್ಯಗಳು ಐದಾಗಲಿ ಒಂಭತ್ತಾಗಲಿ ಹನ್ನೊಂದಾಗಲಿ ಲೌಕಿಕವಾಗಿ ಗುರುತಿಸಲು ಮಾಡಿಕೊಂಡ ಅನುಕೂಲ್ಯಗಳು. ಎಲ್ಲದರ ಒಳಗಿರುವುದು ಪ್ರೇಮ. ಅದು ಶುದ್ಧ ಸತ್ವ. ಅದರ ಅಭಿವ್ಯಕ್ತ ಸ್ವರೂಪ ರಸ. ರಜೋಗುಣ ತಮೋಗುಣಗಳ ಮಿಶ್ರಣವಾದರೆ ವೀರ ರೌದ್ರ ಭೀಭತ್ಸ ಗಳುಂಟಾಗುತ್ತವೆ. ಪ್ರೇಮವು ಕಾಮ ವಾಸನೆಗೊಳಗಾದರೆ ಲೌಕಿಕ ಶೃಂಗಾರ ವಾಗುತ್ತದೆ. ಕಾಮವಾಸನೆಯಿಲ್ಲದ ಪ್ರೇಮ ಶುದ್ಧವಾಗಿ ಮಾನವನ ದೇಹೇಂ ದ್ರಿಯ ಮನಸ್ಸುಗಳ ಅಂತಸ್ಥಿನಿಂದ ಉಚ್ಚ ತರಗತಿಗೇರಿ ಅಮೃತ ವರ್ಷವನ್ನು ಗರೆದರೆ ಆ ಸಾತ್ವಿಕ ಪ್ರೇಮವು ರಸದ ಆವಿರ್ಭಾವವನ್ನು ತೋರಿಸುತ್ತದೆ. ಆ ಆವಿರ್ಭೂತ ರಸವೆಂಬುವುದು ಭಗವತ್ಸ್ವರೂಪ, ಪ್ರೇಮಮಯ ಶ್ರೀಕೃಷ್ಣ ಸ್ವರೂಪ. ಅವನಿಗೂ ಅವನ ರೂಪಕ್ಕೂ ಅವನಿಗೂ ಅವನ ಗುಣಕ್ಕೂ ಭೇದವಿಲ್ಲ. ಅವನೇ ಅದು ಅದೇ ಅವನು. ಉಪನಿಷತ್ತುಗಳು ಸಾರುವಂತೆ "ರಸೋವೈಸಃ" ರಸವೇ ಅವನು.

---

# ಅಧ್ಯಾಯ ೫

## ಸಂಕೀರ್ಣ

ಹಿಂದಿನ ಅಧ್ಯಾಯಗಳಲ್ಲಿ ಒಂದೊಂದು ಕ್ರಮವನ್ನುಸರಿಸಿ, ಆ ಕ್ರಮದಂತೆ ದಾಸ ಸಾಹಿತ್ಯದ ಮಾದರಿಗಳನ್ನು ಕೊಟ್ಟದ್ದಾಯಿತು. ಈ ಸಂಕೀರ್ಣಾಧ್ಯಾಯದಲ್ಲಾದರೋ—ವಿವಿಧ ಸನ್ನಿವೇಶಗಳಲ್ಲಿ ದಾಸರು ಹಾಡಿರುವ ಮಾದರಿಗಳನ್ನು ಕೊಡಲಾಗುತ್ತದೆ. ದಾಸರ ಸಾಹಿತ್ಯವೆಂದರೆ—ಕೇವಲ ಸಾಂಪ್ರದಾಯಿಕ ಹಾಡುಗಳು, ಜೀವನವನ್ನು ಉತ್ಸಾಹಗೊಳಿಸದ ನೀರಸ ನಿರಾಶೆಯ ಪದಗಳು, ಸಮಾಜದ ನಡತೆಯನ್ನು ನಿಂದಿಸುವ ಹಾಡುಗಳು, ಸಾಲದುದಕ್ಕೆ ಬೇಕಾದಷ್ಟು ನಾಮಾವಳಿಗಳು ; ಎಂದು ಸಾಧಾರಣ ಜನರು ತಿಳಿದಿರುವಷ್ಟು ಮಾತ್ರವೇ ಅಲ್ಲ. ಇವೆಲ್ಲದರಿಂದ ಬೇರೆಯಾದ, ಸಮೃದ್ಧಿಯಾದ, ಉತ್ಸಾಹಜನಕವಾದ, ಸಾಹಿತ್ಯವೂ ರಾಶಿರಾಶಿಯಾಗಿದೆ; ಎಂಬುದನ್ನು ತಿಳಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

ಭಾರತ ಪ್ರಪಂಚದಲ್ಲಿ ಯಾವ ಕವಿಯಾಗಲಿ, ತನ್ನ ಕಾವ್ಯಕ್ಕೆ ಪ್ರಾಶಸ್ತ್ಯ ಬರಲೆಂದು ಇತರ ಕಾವ್ಯಗಳನ್ನು ಒಂದಲ್ಲ, ಒಂದು ರೀತಿ ಜರಿದಿದ್ದುದು ಕಂಡು ಬರುತ್ತದೆ. ಮತಗಳನ್ನು ವಿಚಾರಿಸಿದರೆ, ತನ್ನ ಮತವೇ ಸರಿಯಾದುದೆಂದು ಸಮರ್ಥಿಸಿರುವುದು ಕಂಡು ಬರುತ್ತದೆ. ಯುಕ್ತಿಯಿಂದ ಮನಗಾಣಿಸಲು ಸಾಧ್ಯವಾಗದ ತತ್ವ ವಿಷಯಗಳನ್ನು ಎಲ್ಲ ಮತೀಯರೂ ಸ್ವರ್ಗ ನರಕಗಳ—ಪುಣ್ಯ ಪಾಪಗಳ—ಅಂಜಿಕೆ ತೋರಿಸಿ ಒಪ್ಪಿಸಿರುತ್ತಾರೆ. ಶೈವ ವೈಷ್ಣವ ಪಂಥಿಗಳು ಒಬ್ಬರನ್ನೊಬ್ಬರು ಪಾಷಂಡಿಗಳೆನ್ನುತ್ತಾರೆ. ಬೈಬಲ್ ಕೊರಾನುಗಳನ್ನು ನಂಬದವರನ್ನು ಆ ಮತೀಯರು ಹೀದನರು ಕಾಫರರು ಎನ್ನುತ್ತಾರೆ. ಜ್ಞಾನಿಗಳು ಕರ್ಮವನ್ನು ಜರಿಯುತ್ತಾರೆ. ತಾರ್ಕಿಕರು ಭಕ್ತಿ ಪಂಥವನ್ನು ಸೋಲು ಮನಸ್ಸಿನ ಮತವೆನ್ನುತ್ತಾರೆ. ಸತ್ಯದ ಹೆಸರಿನಲ್ಲಿ, ಸರ್ವಶಕ್ತನ ಹೆಸರಿನಲ್ಲಿ ಇಷ್ಟೆಲ್ಲ ಗೊಂದಲಗಳಿವೆ.

ಅಮೃತ ರಸವನ್ನು ಸುರಿಸುವ ಪನಸ ಫಲವನ್ನು ತಿನ್ನಬೇಕೆಂಬುವವರು, ಇಡೀ ಹಣ್ಣನ್ನು ಬಾಯ ಅಳತೆಗೆ ಹೆಚ್ಚಿ ಹಾಗೆಯೇ ತಿನ್ನುವುದಕ್ಕಾಗುವದಿಲ್ಲ. ಮೇಲಿನ ಮುಳ್ಳನ್ನು ತೆಗೆಯಬೇಕು, ಶಾಡೆಯನ್ನೊಗೆಯಬೇಕು, ಅಂಟು ತಗಲದಂತೆ ಕೈಗೆ ಎಣ್ಣೆಯನ್ನು ಬಳಿದುಕೊಂಡಿರಬೇಕು, ಮಧ್ಯದ ಕಾಂಡವನ್ನು ಬೇರ್ಪಡಿಸಬೇಕು, ತೊಳೆ ಸಿಕ್ಕಿದರೂ ಅದರೊಳಗಿನ ಬೀಜವನ್ನು ಬದಿಗಿಡಬೇಕು ; ಇಷ್ಟೂ ಮಾಡಿ ಫಲವನ್ನು ಸವಿಯಬೇಕು. ಯಾವ ಫಲವನ್ನು ಸವಿಯಬೇಕಾದರೂ ಇಷ್ಟಿಲ್ಲದಿದ್ದರೆ ತಕ್ಕಷ್ಟಾದರೂ ಪರಿಶ್ರಮ ಮಾಡಬೇಕು. ಪರಿಶ್ರಮ ಮಾಡದವರಿಗೆ ಅಮೃತದ ಸವಿ ಸಿಕ್ಕುವದಿಲ್ಲ. ಬೇರೆ ಬೇರೇ ಸಾಹಿತ್ಯಗಳು ಪನಸ ಫಲದಂತೆ, ನಾರಿಕೇಳ ಫಲದಂತೆ ಇದ್ದರೆ, ಹರಿದಾಸ ಸಾಹಿತ್ಯವು ಕೇವಲ ಸಿಪ್ಪೆಸುಲಿಯುವಷ್ಟು ಪರಿಶ್ರಮವಿರುವ ಕದಳೀ ಫಲವೆಂದು ತಿಳಿಯಬೇಕು. ಮುಳ್ಳು ಅಂಟು ಶಾಡೆಗಳಿವೆಯೆಂದು ಯಾರೂ ಪನಸ ಫಲವನ್ನು ಬಿಸುಡುವದಿಲ್ಲ ; ನಾರು ಕರಟಗಳಿವೆಯೆಂದು ನಾರಿಕೇಳವನ್ನು ತ್ಯಜಿಸುವುದಿಲ್ಲ ; ಅಂದ ಮೇಲೆ ರಸಕದಳಿಗಾಗಿ ಚಿಂತೆಯೇತರದು ?

ಗುರು ಶ್ರೀನಿವಾಸ ವಿಠಲಾಂಕಿತದಿಂದ ಬ್ರಹ್ಮ ಸೂತ್ರಗಳನ್ನೂ ಶ್ರೀಮದ್ಭಗವದ್ಗೀತೆಯನ್ನೂ ಕನ್ನಡ ಭಾಮಿನೀ ಷಟ್ಪದಿ ರೂಪದಲ್ಲಿ ಬರೆದಿರುವ ಕೃಷ್ಣದಾಸರೆಂಬ ಸತ್ಪುರುಷರು ಅದೇ ಷಟ್ಪದೀ ವೃತ್ತದಲ್ಲಿ ಗಯ ಚರಿತ್ರೆಯೆಂಬ ಕಾವ್ಯ ಗ್ರಂಥವನ್ನು ಬರೆದಿರುತ್ತಾರೆ. ಈ ದಾಸರು ೧೯ನೇ ಶತಮಾನದಲ್ಲಿ ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿ ಮೈಸೂರಿನಲ್ಲಿದ್ದವರು. ಗಯ ಚರಿತ್ರೆಯನ್ನು ವೈಶಂಪಾಯನ ಮುನಿಯು ಜನಮೇಜಯರಾಯನಿಗೆ ಹೇಳಿದಂತೆ ಕಥೆ ಪ್ರಾರಂಭವಾಗುತ್ತದೆ. ನಾರಾಯಣನ ನಾಭಿಯಿಂದ ಬ್ರಹ್ಮ, ಅವನಿಗೆ ಪುಲಸ್ತ್ಯ, ಅವನಿಗೆ ಪೌಲಸ್ತ್ಯ, ಅವನಿಗೆ ವಿಶ್ರವಸು, ಅವನಿಂದ ಕುಬೇರ ; ಹೀಗೆ ಸೃಷ್ಟಿಯಾಗುತ್ತದೆ. ಕುಬೇರನು ತಪಸ್ಸಿನಿಂದ ಶ್ರೀ ಹರಿಯನ್ನು ಮೆಚ್ಚಿಸಿ ದಿಕ್ಪಾಲಕನಾಗುತ್ತಾನೆ. ಅವನ ನಗರವರ್ಣನೆ, ವನವರ್ಣನೆ, ವನದಲ್ಲಿ ವಿಹರಿಸುವ ತರುಣಿಯರ ವರ್ಣನೆ, ಇತರ ಕಾವ್ಯಗಳಂತೆ ಹೃದಯಂಗಮವಾಗಿವೆ. ತೆಂಗು, ಬಾಳೆ, ಹಲಸು, ಖರ್ಜೂರ,

ಅಡಿಕೆ, ಮೊದಲಾದ ವೃಕ್ಷಗಳನ್ನು ವರ್ಣಿಸುವ ಸಂದರ್ಭದಲ್ಲಿ, ಗಿಡಗಳು ಒಂದನ್ನೊಂದು ಜರಿಯುವ ಚಿತ್ರವಿಲ್ಲಿ ಗಮನಾರ್ಹವಾಗಿದೆ. ಆದ್ದರಿಂದ ಆ ಮಾದರಿಗಳನ್ನಿಲ್ಲಿ ಉದಹರಿಸುತ್ತೇವೆ.

ವನಕದಳಿಗಳು ಪನಸ ವೃಕ್ಷವನ್ನು ನೋಡಿ:—

ಪೊಡವಿಯೊಳು ನಮಗೊಂದೆ ಬಾಳುವೆ
ನಡೆಯದೊಂದಾಗಿಹುದರಿಂದೆಡೆ
ಬಿಡದೆ ಹಲವಾಗಿಹುದು ಫಲವಿದನರಿದು ಸಜ್ಜನರು
ಕೆಡದೆ ಇಹದಲಿ ಹಲಬರರ್ಚಿಸಿ
ನಡೆಯಲೊಂದೇ ಪಥದೊಳೋರ್ವನ
ಹಿಡಿದು ನಾರಾಯಣನ ಬದುಕಲು ಹಲವು ಸುಖವೆಂದು || ೨೪ ||

ಸುಲಭ ನಿಜ ಸತ್ಪುರುಷ ಸೂಚಿಸಿ
ಒಲಿವವೋಲ್ ತಲೆವಾಗಿ ಕದಳೀ
ಫಲವೆರಸಿ ಬಲು ತರುಗಳೆಸೆದವು ಗೊನೆಯ ಭಾರದಲಿ
ನೆಲದಮೇಲಂಕುರಿಸುತಲೆ ಮಿಗೆ
ಮಲರಹಿತರೆನಿಸದಲೆ ವ್ಯೆಯೊಳು
ದಳೆದಮುಳ್ಳತಿ ಸ್ಥೂಲವೆನಿಸುವೆವೆಂಬ ಗರ್ವದಲಿ || ೨೫ ||
ಕಳೆಯದಿರಿ ಕಾಲವನು ಕೊಂಡೊಯಿ
ದೆಳದಿನಲಿ ಕೊತ್ತುವರು ನಿಮ್ಮನು
ಬಲಿತರೆಯು ಛೇದಿಸುವರೆನುತಲೆ ಹಲಸನುರೆ ಜರಿದು
ಸುಲಭರಾಗಿರೆ ಸರ್ವರೆಮ್ಮನು
ಫಲದಲಾಶೀರ್ವದಿಸಿ ಗ್ರಹಿಸುವ
ರೆಲೆಮರುಳೆ ಕೇಳೆಂದು ಖರ್ಜೂರಗಳು ನಗುವವೊಲು || ೨೬ ||
ತರುಗಳೊಳು ರಾಜಿಸಲು ಕಾಣುತ
ಕೆರಳಿಮಿಗೆ ಕಂಟಕ ಫಲಂಗಳು
ಜರಿಯುತಾ ಖರ್ಜೂರ ತತಿಗಳನುರುಬಿ ಮುಂಕೊಂಡು

ಅರಿಯದಜ್ಞಾನದಲಿ ನಮ್ಮನು
ಜರಿದು ಹುರುಡಿಗೆ ನಾಡಿಯೆ ಧರೆಯೊಳು
ಬರುವುದೇ ಸ್ಥೂಲತ್ವ ಕಾಣಿಗೆ ಬೆಳೆಯುನ್ನೈದುವಿರಿ || ೨೭ ||

ಹೊರ ತರಕೆ ಕಂಟಕವೆನಿಸಿ ಗೋ
ಚರಿಸಿ ಅಂತಶ್ಶುದ್ಧಿಯಿರಲೆ
ಮ್ಮಿರವನೀಕ್ಷಿಸಿ ಸ್ವೀಕರಿಸಿ ಕಾಂಚನವನಿತ್ತು ಪರು
ಹೊರಗೆನಿಸಿ ಮಾಧುರ್ಯ ಹೊಟ್ಟೆಯೊ
ಳಿರಿಸಿದೀಕೃತ್ರಿಮವ ಕಾಣುತ
ಕೊರೆದುರವ ಬಿಸುಡುವರು ನಿಮ್ಮನು ಬರಿದೆ ಗಳುಹದಿರಿ || ೨೮ ||

ಹಗಲಿರಳು ಬಿಟ್ಟಗಲದೊಂದೇ
ಸೊಗಸಿ ನುದ್ಯಾನದಲಿ ರಾಜಿಸಿ
ಜಗದಿ ಜೀವನದಿಂದ ರಾಜಿಪ ನಮ್ಮ ನಪ್ಪೊಳಗೆ
ಹಗೆತನವದೇಕೆನುತ ಖರ್ಜೂ
ರಗಳಿಗುತ್ತರ ಕೊಡುವವೋಲ್ ಸ
ಮ್ಮೊಗದಿ ಮೆರೆದವು ಪನಸ ವನಮಧ್ಯದಲಿ ನೋಳ್ಪರಿಗೆ || ೨೯ ||

ಜಗದಲೆಮಗಿನ್ನಾರು ಸಮರೆಂ
ದೊಗುಮಿಗೆಯ ದೀರ್ಘದಲಿ ಬೆಳೆದಿರೆ
ಸುಗುಣರೆಂಬರೆ ಸೊಗಸುಗಾರರು ನಿಮ್ಮ ಪತಿಕರಿಸಿ
ಮುಗಿದು ನಾರಿನೊಳಡಗಿ ಮೂವಗೆ
ಯಗಲದಿಹ ಪೆಸರಾಂತು ವಂಚಿಸಿ
ಹಗಲಿರಳು ಮಾಧುರ್ಯಯುತ ವಿಷಧರಿಸಲೇನಹುದು || ೩೦ ||

ಇರಿದು ನೆತ್ತಿಯನೊಡೆದು ರಂಧ್ರವ
ಕೊರೆದು ಬಿಸುಡುವರುಳಿದರದರೊಳು
ಮರಳಿ ಶಸ್ತ್ರಾದಿ ಛಿದ್ರಗೈವರು ವಿಷವಡಗೆ ಬಳಿಕ

ಆರಿದು ಗಾಣದೊಳಿಟ್ಟರೆದು ಬಾಧಿ
ಸರು ಮನುಜರು ನಿಮ್ಮನರಿಯಿರೆ
ತೆರಹುಗೊಡದಂತಿನಿತು ಬಾಧೆಗಳಿಲ್ಲವೆಮಗಿನ್ನು ॥ ೩೧ ॥

ಕರೆವರೊಂದೇ ನಾಮದಲಿ ಸ್ತ್ರೀ
ಕರಿಸಿ ಭೋಗಿಗಳೊಮ್ಮೆಗಾದರು
ತೊರೆಯರೆಮ್ಮನೆಂದು ಜರಿಯುತ ನಾರಿಕೇಳಗಳ
ತರುಬವ್ರೋಲ್ರಾಜಿಸಲು ಪೂಗೀ
ವರ ಫಲಗಳಿದಿರಿನಲಿ ಸ್ಥೈಯು
ಬ್ಬಿರದೆ ಕೋಪದಿ ಹರನ ಸಾಮ್ಯಾಪನಾಂತು ವಾದಿಸಲು ॥ ೩೨ ॥

ಧರಿಸಿ ಕಾಯದೊಳಕ್ಷಿ ಪ್ರಾಣನ
ಹಿರಿದೆನಿಪ ವರ ನಾರಿಕೇಳಗ
ಳುರುಬಿಕೇಳೆಲೆ ಪೂಗಧರುಗಳತ್ಯಲ್ಪರದೃಢರು
ಹುರುಡಿಸಲು ನೀವೆಮಗೆ ಕುಂದಿ
ಲ್ಲರಿವೆವಾವ್ ಸೂಕ್ಷ್ಮನಲಿ ಮೆರೆವಿರಿ
ಬರದೆ ಉನ್ನತವಾಗಿ ಬೆಳೆದರೆ ಹಿರಿಯರೆನಿಸುವಿರೇ ॥ ೩೩ ॥

ಧರೆಯೊಳಾದ್ಯಂತದಲಿ ಮಧ್ಯದಿ
ನರರ ಕೈಯಲಿ ಮನ್ನಣೆಯ ಪಡೆ
ದಿರುವರೈಸಲೆ ಧನ್ಯರುಪಕಾರಿಗಳು ಸರ್ವರಲಿ
ಸರಿಯೆನಿಸಿಕೊಂಬೆವುಕಣಾ ಪರಿ
ಪರಿಯೆನಿಸಿ ರಾಜಿಸಿದ ಕಾಲಕು
ತೊರೆದಪೆವು ಕಾಯವನು ಪರರುಪಕಾರ ಗೋಸುಗರ ॥ ೩೪ ॥

ಸರಿಬಹಿರೆ ನಮಗೆಂದಿಗಾದರು
ಫಿರುತ ಪಕ್ಷಾಶ್ರಯದಲೇ ನಿ
ಮ್ಮುರವಣಿಗೆ ಪರಿಕಿಸಲು ಬೇರಿನ್ನುಂಟೆ ಸ್ವಾತಂತ್ರ್ಯ

ಹಿರಿದು ಬಲಿತರೆ ನಿಮ್ಮನೊಲ್ಲರು
ಜರಿದು ಬಿಸುಡುವರೆಳದಿನಲಿ ಸ್ತ್ರೀ
ಕರಿಸರೊಬ್ಬರು ಮಧ್ಯಕಾಲದಿ ಸಿಗಿದು ನಿಮ್ಮುವನು ॥ ೩೫ ॥

ಧರೆಯೊಳೀರೆರಡೆರಡು ನಾಲ್ಕೆರ
ಡೆರಡು ಎಂಟನೆಗೈಸಿ ಬೇಯಿಸಿ
ನರರು ವದನದೊಳಿಟ್ಟು ತಂಬುಲವೆಂದು ಉಗುಳುವರು
ಪರಮ ಶುಚಿಯಾಗಿದ್ದ ಪರ್ಣವು
ದುರುಳರಾದೀ ನಿಮ್ಮ ಸಂಗಡ
ಬೆರೆದ ಕಾರಣ ಮನುಜರುದರವನೈದಲರಿದಾಯ್ತು ॥ ೩೬ ॥

ಇರದೆ ಸಂಗಡಿಗರನು ಕೆಡಿಸುವ
ಕರುಬುತನವಿಲ್ಲೆಮ್ಮೊಳಗೆ ಬೆರೆ
ತರನು ಪಾವನಗೈದು ಶುಚಿ ರುಚಿಯೆನಿಸುವೆಮ್ಮುವನು
ಜರಿಯದಿರಿ ಶಿಖಿಬಾಹಿರರು ನೀ
ವರಕೆ ಪೂಗಿಗಳೆಂದು ನಿಂದಿಸು
ತಿರುವವೊಲು ಗೋಚರಿಸಿ ಮೆರೆದವು ನಾರಿಕೇಳಗಳು ॥ ೩೭ ॥

ಎಂಬಂತೆ ವೃಕ್ಷ ವೃಕ್ಷಗಳಿಗೂ, ಮುಂದೆ ಪರಸ್ಪರ ಪುಷ್ಪಲತೆಗಳಿಗೂ ಸಂವಾದವುಂಟಾಗಿರುವಂತೆ ಅನೇಕ ಪದ್ಯಗಳನ್ನು ರಚಿಸಿರುತ್ತಾರೆ. ಕೃಷ್ಣ ದಾಸರು ರಚಿಸಿರುವ ಗಯೋಪಾಖ್ಯಾನವು, ಹನ್ನೆರಡು ಸಂಧಿಗಳುಳ್ಳ ಅರುನೂರ ಎಂಭತ್ತೈದು ಪದ್ಯಗಳ ದಿವ್ಯವಾದೊಂದು ಕಾವ್ಯವಾಗಿದೆ. ಈ ಕಾವ್ಯದಲ್ಲಿ ಕೃಷ್ಣಾರ್ಜುನರ ಯುದ್ಧವು ಬಲರಮ್ಯವಾಗಿ ವರ್ಣಿಸಲ್ಪಟ್ಟಿದೆ. ಸಂದರ್ಭಗಳಲ್ಲಿ ಶ್ರೀ ಕೃಷ್ಣ ಭಕ್ತಿಯು ತಾಂಡವಾಡುತ್ತ ನಾರಣಪ್ಪನ ನೆನ ಪನ್ನು ತಂದು ಕೊಡುತ್ತದೆ. ಕಾವ್ಯದಲ್ಲಿ ಮಾಡಿರುವ ರಸ ಪೋಷಣೆ ಅಡಿ ಗಡಿಗೂ ಅಪ್ರತಿಮವಾಗಿದೆ.

## ಹರಿದಾಸರ ಜಾನಪದ ಸಾಹಿತ್ಯ

### ಬುಡುಬುಡಿಕೆಯ ಹಾಡು.

ಪುರಂದರ ದಾಸರು ಮೇಲ್ಮಟ್ಟದ ಜನರಿಂದ, ದೀನದರಿದ್ರರ ತನಕ ಒಂದೇ ಸಮನಾಗಿ ಧರ್ಮ ಪ್ರಚಾರ ಮಾಡಬೇಕೆಂಬ ಸದ್ಭಾವನೆಯಿಂದ ಕೆಳ ಕಂಡ ಬುಡುಬುಡಿಕೆಯ ಹಾಡನ್ನು ರಚಿಸಿರುತ್ತಾರೆ. ಬುಡುಬುಡಿಕೆಯವರು ಭಟ್ಟರಾಜುಗಳು ಸಹ, ತಮ್ಮ ಜೀವಿಕೆಗಾಗಿ ಭಿಕ್ಷ ಬೇಡುತ್ತಿದ್ದರೆ ಅವರ ಬಾಯಿಯಿಂದಲೂ ಧರ್ಮದ ಮಾತು ಬರಬೇಕೆಂಬುದು ದಾಸರ ಉದ್ದೇಶ. ಹಾಡು ಬಡುಬುಡಿಕೆಯದಾದರೂ ಉಪನಿಷದರ್ಥ ಹೇಗೆ ಗರ್ಭಿತವಾಗಿದೆ ಯೆಂಬುದನ್ನು ಬಲ್ಲವರು ನೋಡಬೇಕು.

ಬುಡುಬುಡಿಕೆಯನ್ನು ಬಾರಿಸುತ್ತಾ ಭಿಕ್ಷುಕನು ಹೇಳುವ ಪರಿಯೆಂ ತೆಂದರೆ :—

ಜಹಾ ಜಹಾ ಜಹ ಜಹ ವೈತಣ್ಣಾ
ಜಹ ಜಹ ಜಹ ವೈ ಕೇಳೋ ತಮ್ಮಾ
ಜಯವದೆ ಜಯವದೆ ಈ ಮನೆತನಕೆ
ಬುಡು ಬುಡು ಬುಡು ಬುಡು ನಿನ್ನ ಸಂಶಯುವ || ಪ ||

ಶುಕನೆಂಬೋ ಪಕ್ಷಿ ಹೇಳುತದಪ್ಪಾ | ಜಗವೆಂಬೋ ಗಿಡ ಹುಟ್ಟೈತಣ್ಣಾ
ಹಣ್ಣುಗಳೆರಡೂ ಹೈದಾವಪ್ಪಾ | ಮೂರು ಬುಡದ ಗಿಡಕೇಳಣ್ಣಾ
ಹಣ್ಣಿನವಳಗೇ ನಾಲ್ಕು ರಸವೂ | ಐದು ದೊಡ್ಡಾ ಹರೆ ಕಾಣಪ್ಪಾ
ಆರು ಬಗೆಯ ರೂಪವು ಕೇಳೊ | ಏಳು ಬಗೆಯ ತೊಗಟೆಂಟಣ್ಣಾ
ಸಣ್ಣ ಗರಿಗಳು ಎಂಟೈಥಾವೇ | ಅಕ್ಷವು ಅದಕೆ ಒಂಭತ್ತೈತೇ
ಎಲೆಗಳು ಹತ್ತು ಐದಾವಪ್ಪಾ ಒಂದೇ ಹಕ್ಕೀ ಹಣ್ತಿಂತೈತೇ
ಮತ್ತೊಂದ್ಹಕ್ಕೀ ನೋಡುತದಪ್ಪಾ ! ಹಣ್ತಿಂದ್ಹಕ್ಕೀ ಬಡವಾಗೈತೇ
ತಿನ್ನದ ಹಕ್ಕೀ ಬಲ್ತೈತಣ್ಣಾ ಸುಳ್ಳಲ್ಲಾ ನೀಕೇಳೋ ತಮ್ಮಾ

ದ್ವಾಸುಪರ್ಣದ ಶ್ರುತಿಯಲ್ಲ್ಯೆತೆ । ಒಂದೇ ಕುಲದಹಕ್ಕ್ಯಲ್ಲಣ್ಣಾ
ಒಂದೇ ಕುಲವೆಂದು ತಿಳಿಯಲಿ ಬ್ಯಾಡ । ತಿಳಿದರೆ ನಿನಗೆ ಕೇಡಾದೀತೊ
ಹಳೇ ವಸ್ತ್ರ ಬೀಸಾಡಣ್ಣಾ । ಹೊಸ ವಸ್ತ್ರ ದೇವರು ನಿನಗೆ ಕೊಟ್ಟಾನು
ಹಕ್ಕೀ ನುಡಿಸ ಹೇಳಿದ ಮಾತು । ಸುಳ್ಳೀ ಎಂದೂ ತಿಳಿ ಬ್ಯಾಡಣ್ಣಾ
ಮಾರ್ಗವ ಕಟ್ಟೇಸುಲಿಯುತ್ತಾರೆ । ಗಿರಿದುರ್ಗಾವೂ ಐದಾವಪ್ಪಾ
ಮಾಳನೆಂಬೋ ಕಳ್ಳೈಧಾನೇ । ಪುರಂದರ ಬಂದರು ಬಿಡುವೋನಲ್ಲಾ
ಹಮ್ಮಾಳನಾದರೆ ಹೊಂಟ್ಹೋಗ್ತಾನೆ । ಹನುಮನ ಹಾದೀ ಹಿಡಿಯೋ ತಮ್ಮಾ
ಕಣ್ಣು ಮೂಗು ಕಿವಿನಾಲಿಗೆಯಪ್ಪಾ । ಒಂದೊಂದೊಬ್ಬರ ಕೊಂದಾವಣ್ಣಾ
ಕುರಂಗ ಮಾತಂಗಪತಂಗ ಕೇಳೋ । ಭೃಂಗ ಮೀನವೂ ಹತವಾದವಣ್ಣಾ
ಜ್ಞಾನ ಭಕ್ತೀ ಎಂಬೋ ಮಾರ್ಗಾ । ದೊಡ್ಡ ಮಾರ್ಗವ ಹಿಡೀ ಬೇಕಣ್ಣಾ
ದೊಡ್ಡ ಸಂಗತೀ ಸಿಗುವ್ದೋ ತನಕ । ಎರಡೂ ಮನೆಯಲ್ಲಿರ ಬೇಕಣ್ಣಾ
ದಾನದಕಯ್ಯಾ ತೋರಿಸಬೇಕು । ಆದರಿಂದ ನದಿಯ ದಾಟುತಿಯಪ್ಪಾ
ನಿನ್ನ ಯೋಗ್ಯಿತೀ ತಿಳಿದಾಮೇಲೇ । ಪುರಂದರವಿಠಲ ಸ್ಥಳಕೊಟ್ಟಾನು ॥ ೧ ॥

## ಗುಡಿಗುಡಿ ಹಾಡು

### ಆನಂದಭೈರವಿ — ಛಾಪು

ಗುಡಿ ಗುಡಿಯನು ಸೇದಿ ನೋಡೊ । ಸೇದಿ ನೋಡೋ । ನಿನ್ನ
ಒಡಲ ಪಾಪಗಳೆಲ್ಲ । ತೊಡೆದು ಈಡ್ಯಾಡೋ ॥ ಪ ॥

ಬುರುಡೆಯಂಡದಿ ಈ ಶರೀರ । ನಿನ್ನ ।
ದೃಢಭಕ್ತಿಯೆಂಬಂಥ ಕೊಳವಿಯಾಕಾರ
ಶಿರಿ ನಾರಾಯಣನೆಂಬೋನೀರ । ಇದ ।
ನರಿತುತಕ್ಕೊಳ್ಳೊ ಎಲೆ ಮೋಜುಗಾರ ॥ ೧ ॥

ಮನವೆಂಬ ಸಂಚಿಯ ಬಿಚ್ಚೀ । ದಿನ
ದಿನದ ಪಾಪಗಳೆಂಬ ಭಂಗಿಯ ಕೊಚ್ಚಿ
ನೆನೆವೆಂಬ ಚಿಲುಮೆಯೊಳಿರಿಸಿ । ಅ ।
ಚ್ಯುತನ ಧ್ಯಾನವೆಂಬ ಕಿಚ್ಚನೆ ಹಚ್ಚಿ ॥ ೨ ॥

ಮೆಧ್ವಮೇಲಮಲೇರುವದೋ । ದಾ ।
ರಿದ್ರ್ಯ ಪಾತಕ ಸುಟ್ಟು ಹೊಗೆಯು ಹಾರುವದೋ
ಬುದ್ಧಿಗೆ ಜ್ಞಾನ ತೋರುವದೋ । ಮುದ್ದು ।
ಪುರಂದರ ವಿಠಲನ ಪಾದಕಾಣುವುದೋ ॥ ೩ ॥

ಕ ಣಿ

ಕನಕದಾಸರನ್ನು ಕುಲಸ್ಥರಾದ ಹಾಲಮತಸ್ಥರು ದೇವರ ಕಾರ್ಯಕ್ಕೆ ನೀನೂ ಬರಬೇಕೆಂದು ಕರೆದಾಗ, ದೇವರ ಹೆಸರಿನಿಂದ ಪ್ರಾಣಿಗಳ ವಧೆಮಾಡ ಬೇಡಿ, ನಾನು ಹೇಳುವ ಕಣಿಯನ್ನು ಕೇಳಿ, ಎಂದು ಕೆಳಕಂಡ ಪದವನ್ನು ಹಾಡುತ್ತಾರೆ.

ಜೋಗಿ ಸಾವೇರಿ — ಆದಿತಾಳ

ಕಣಿಯ ಹೇಳಬಂದೆ ನಾರಾಯಣನಲ್ಲದ್ದಿಲ್ಲವೆಂದು
ಬಿನುಗುದೈವದಗೊಡವೆ ಜೇಡಿ ನರಕ ತಪ್ಪದೋ ॥ ಪ ॥

ಹಳ್ಳಿಯವರು ಪಳ್ಳಿಯವರು ಸೂಳೇರೆಲ್ಲಾ ಕೂಡಿಕೊಂಡು
ಬೆಳ್ಳನ್ನ ಬೆಳಹತನಕ ನೀರ ತಡಿಯಲ್ಲೀ
ಗುಳ್ಳುಗುಸುಕ ಕೂಡಿಸಿಕೊಂಡು । ಕಳ್ಳುಕೊಡನ ಬರಿಸು ಮಾಡಿದ
ಕಳ್ಳದೈವದಗೊಡವೆ ಬ್ಯಾಡಿ ನರಕ ತಪ್ಪದೋ ॥ ೧ ॥

ಊಳಿಗದವರ ಮಾತ ಕೇಳಿ ಖೂಳರೆಲ್ಲ ಕೂಡಿಕೊಂಡು
ಹಾಳುಮಾಡಿ ಕೈಯ್ಯೋಳಿರ್ದ ಹೊನ್ನು ಹಣಗಳ
ಬಾಳುತಿಪ್ಪ ಕುರಿಕೋಣಂಗಳ ಬೀಳಬೀಳನೆ ಕೊಂದು ಕೆಡಹಿ
ಬೀಳಬೇಡಿ ನರಕಕ್ಕೆಂದು ಹೇಳಬಂದೆನೋ ॥ ೨ ॥

ಗುತ್ತಿಯವರ ಮಾತಕೇಳಿ ಗುತ್ತಿಯಲ್ಲಮ್ಮನಿಗೊಲಿದು
ಬತ್ತಲೆ ಬಾಗಿಲೊಳು ನಿಂತ ಪರಿಯ ನೋಡಿರೋ
ಮತ್ತೆ ಬೇವನುಡಿಗೆಗಳನು ಅರ್ಥಿಯಿಂದ ಉಟ್ಟುಕೊಂಡು
ಮುಕ್ತಿ ಪಡೆವೆನೆಂಬುದೊಂದು ಶಕ್ತಿ ಕಾಣಿರೋ ॥ ೩ ॥

ಯಕ್ಷನಾತಿಯರಕಾಟೆ ಜೋಕೆಯರು ಕನ್ನೆಯರು
ಬತ್ತಲೆ ಬಾಗಿಲೊಳು ನಿಂತ ಭೈರೇದೇವರು
ಮತ್ತೆ ಮಾರಿ ಮಸಣಿದುರ್ಗಿ ಮೈಲಾರಿ ಮೊದಲಾದ ಈ
ಕಕ್ಕು ದೈವದಗೊಡವೆ ಬೇಡಿ ನರಕ ತಪ್ಪದೋ ॥ ೪ ॥

ಪೊಡವಿಗಧಿಕ ಭಾಗಾನಗರ ದೊಡೆಯ ಘಟ್ಟವೇಂಕಟಭೀಮನ
ಕಡು ಜಿಲ್ವನಾಳುವ ಸಮ್ಮ ಕನಕನೊಡೆಯನ
ಒಡೆಯ ಆದಿಕೇಶವನ ದೃಢಭಕ್ತಿಯಿಂದಲಿ ಭಜಿಸಿ
ಸೊಡರು ದೈವದಗೊಡವೆ ಬೇಡೀ, ನರಕ ತಪ್ಪದೋ ॥ ೫ ॥

## ಒಗಟುಗಳು

ಅರ್ಥ ಬಿಡಿಸಲಸದಳವಾದ ಒಗಟನಂತೆ ಹಾಡುವುದರಲ್ಲಿ ಪುರಂದರ ಕನಕ ದಾಸರುಗಳು ಒಬ್ಬರಿಗಿಂತ ಮತ್ತೊಬ್ಬರು ಪ್ರವೀಣರು- ಒಗಟಿನ ವಾಙ್ಮಯವು ಬಲು ವಿಸ್ತಾರವಿದ್ದು, ಹಳ್ಳಿಪಳ್ಳಿಗಳಲ್ಲಿ ಸಹ ವ್ಯಾಪಿಸಿ ಬುದ್ದಿ ವಂತರಿಗೆ ಕೊಡುವ ಸಮಸ್ಯೆಗಳಂತಿದ್ದುವು. ಈಗ ಈ ವಾಙ್ಮಯವೇ ಮರೆತು ಹೋಗಿಬಿಟ್ಟಿದೆ ಇದಕ್ಕೆಲ್ಲಾ ಆಧುನಿಕ ವಿದ್ಯಾಭ್ಯಾಸ ಕಾರಣ. ನಾಟಕ ಸಿನೀಮಾಗಳು ಕಾರಣ.

### ಪುರಂದರದಾಸರ ಒಗಟು.

ಮುಳ್ಳು ಕೊನೆಯ ಮೇಲೆ ಮೂರು ಕೆರೆಯ ಕಟ್ಟಿ
ಎರಡು ತುಂಬದು ಒಂದು ತುಂಬಲೇ ಇಲ್ಲ
ತುಂಬದಿದ್ದ ಕೆರೆಗೆ ಬಂದರು ಮೂವರು ವಡ್ಡರು
ಇಬ್ಬರು ಕುಂಟರು ಒಬ್ಬಗೆ ಕಾಲೇ ಇಲ್ಲ ॥ ಪ ॥

ಕಾಲಿಲ್ಲದ ವಡ್ಡಗೆ ಕೊಟ್ಟರು ಮೂರೆಮ್ಮೆಗಳ
ಎರಡು ಬರಡು ಒಂದಕೆ ಕರುವೇ ಇಲ್ಲ
ಕರುವಿಲ್ಲದ ಎಮ್ಮೆಗೆ ಕೊಟ್ಟರು ಮೂರು ಹೊನ್ನುಗಳ
ಎರಡು ಸವೆಕಲು ಒಂದು ಸಲ್ಲಲೆ ಇಲ್ಲ

ಸಲ್ಲದಿದ್ದ ಹೊನ್ನಿಗೆ ಬಂದರು ಮೂವರು ನೋಟಗಾರ್‍ರು
ಇಬ್ಬರು ಕುರುಡರು ಒಬ್ಬಗೆ ಕಣ್ಣೇ ಇಲ್ಲ
ಕಣ್ಣಿಲ್ಲದ ನೋಟಗಾರಗೆ ಕೊಟ್ಟರು ಮೂರು ಊರುಗಳ
ಎರಡು ಹಾಳು ಒಂದಕೆ ಒಕ್ಕಲೆ ಇಲ್ಲ
ಒಕ್ಕಲಿಲ್ಲದ ಊರಿಗೆ ಬಂದರು ಮೂವರು ಕುಂಬಾರರು
ಇಬ್ಬರು ಕೊಂಚರು ಒಬ್ಬಗೆ ಕೈಯೇ ಇಲ್ಲ
ಕೈಯ್ಯಿಲ್ಲದ ಕುಂಬಾರನು ಮಾಡಿದ ಮೂರು ಮಡಕೆಗಳ
ಎರಡು ವಡಕು ಒಂದಕೆ ಬುಡವೇ ಇಲ್ಲ
ಬುಡವಿಲ್ಲದ ಮಡಕೆಗೆ ಹಾಕಿದರ್‍ಮೂರಕ್ಕಿಕಾಳು
ಎರಡು ಬೇಯದು ಒಂದು ಬೇಯಲೇ ಇಲ್ಲ
ಬೇಯಲಿಲ್ಲದ ಅಕ್ಕಿಗೆ ಬಂದರು ಮೂವರು ನೆಂಟರು
ಇಬ್ಬರು ಉಣ್ಣರು ಒಬ್ಬಗೆ ಹಸಿವೇ ಇಲ್ಲ
ಹಸಿವಿಲ್ಲದ ನಂಟನಿಗೆ ಕೊಟ್ಟರು ಮೂರು ಟೊಣಪೆಗಳ
ಇದರರ್ಥ ಪುರಂದರ ವಿಠಲನೆ ಬಲ್ಲ

## ಕನಕದಾಸರ ಒಗಟು.

ಒಂಭತ್ತು ಹೂವಿಗೆ ಒಂದೇ ನಾಳವು ಚಂದಮಾಮ । ನಾಳ
ತುಂಬ ಕಳಾತುದಿ ಬಿಂಬಭಾನು ಪ್ರಭೆ ಚಂದಮಾಮ ॥ ಪ ॥

ಕದರುಗಾತರ ಕಂಭ ಟಕ್ಕೆ ಗಾತರ ಹೂವು ಚಂದಮಾಮ
ಆನೆಗಾತರ ಕಾಯಿ ಒಂಟೆಗಾತರ ಹಣ್ಣು ಚಂದಮಾಮ ॥ ೧ ॥

ಕಾಲಿಲ್ಲದಾತನು ಆ ಮರವೇರಿದ ಚಂದಮಾಮ
ಕೈಯಿಲ್ಲದಾತನು ಕೊಯ್ದನು ಆ ಹಣ್ಣು ಚಂದಮಾಮ ॥ ೨ ॥

ತಳವಿಲ್ಲದ ಗೂಡೇಲಿಟ್ಟರು ಆ ಹಣ್ಣು ಚಂದಮಾಮ
ನೆತ್ತಿಲ್ಲದಾತನು ಹೊತ್ತನು ಆ ಹಣ್ಣು ಚಂದಮಾಮ ॥ ೩ ॥

ಮಾರ್ಗತಪ್ಪಿ ಮಾರ್ಗ ಹಿಡಿದರು ನಡೆದರು ಚಂದಮಾಮ
ಸದ್ದಿಲ್ಲ ಸಂಕೇಲಿ ಇಳಿಸಿದರಾಹಣ್ಣ ಚಂದಮಾಮ || ೪ ||

ರೊಕ್ಕವಿಲ್ಲದಾತ ಕೊಂಡನು ಆ ಹಣ್ಣ ಚಂದಮಾಮ
ಮೂಗಿಲ್ಲದಾತನು ಮೂಸಿದ ಆ ಹಣ್ಣು ಚಂದಮಾಮ || ೫ ||

ಅಂಗಳಿಲ್ಲದಾತ ನುಂಗಿದ ನಾಹಣ್ಣ ಚಂದಮಾಮ
ಗುರುವಿನ ಮಹಿಮೆಯ ಗುರುವೇ ಬಲ್ಲನು ಚಂದಮಾಮ || ೬ ||

ಮೂಢ ನರರೇನ ಬಲ್ಲರು ರಂಗಜ್ಯೋತಿಯ ಚಂದಮಾಮ
ಕನಕನಾಡಿದ ಗುಟ್ಟು ಆದಿಕೇಶವ ಬಲ್ಲ ಚಂದಮಾಮ. || ೭ ||

ಈ ಬಗೆಯ ಒಗಟುಗಳು ವೀರಶೈವ ವಾಙ್ಮಯದಲ್ಲಿ ಹೇರಳವಾಗಿವೆ. ಏಕತಾರಿಯನ್ನು ಮಿಡಿಯುತ್ತಾ ತತ್ವಗಳನ್ನು ಹಾಡುವ ಜನರಲ್ಲಿ ಒಗಟು ಹಾಕುವುದು ಬಿಡಿಸುವುದು, ಒಂದು ಕಲೆಯಾಗಿದೆ. ಈ ಜನರು ಶಾಲೆಯಲ್ಲಿ ಕಲಿತ ಅಕ್ಷರಸ್ಥರಲ್ಲ. ಈ ಕಾಲದ ತರುಣರಿಗೆ ತತ್ವಗಳನ್ನೂ ಒಗಟುಗಳನ್ನೂ ಕೇಳುವ ರೂಢಿಯಿಲ್ಲ. ರಾಜ್ಯಾಂಗದ ಪತ್ರಪುಸ್ತಕಗಳಲ್ಲಿ ಬಾರದಿರುವ ಸಂಗತಿಗಳು ಅವರಿಗೆ ತಿಳಿಯದ ಕಾರಣ ರುಚಿಸುವುದಿಲ್ಲ. ಈ ಬಗೆಯ ವಾಙ್ಮಯವನ್ನೇ ಸಂಗ್ರಹಿಸಲು ಯಾರಾದರೂ ಪ್ರಯತ್ನಪಟ್ಟರೆ ಸಾಕಾದಷ್ಟು ದೊರೆಯುವುದರಲ್ಲಿ ಸಂಶಯವಿಲ್ಲ. ಹೊಸಕಾಲ ಹೊಸ ಭಾವನೆಯ ಹಸಗೆಟ್ಟ ಸಾಹಿತ್ಯ ಬೆಳೆಯುತ್ತಿರುವಾಗ, ಹಳೆಯದನ್ನು ಕೇಳುವವರ್ಯಾರು ? ಹಳೆಯದನ್ನು ಅಳಿಸಿ ಹೊಸದರಿಂದಲೇ ಸಂಸ್ಕೃತಿಯನ್ನು ನಿರ್ಮಿಸುವೆವೆಂದರೆ, ಅದು ಸಿನೀಮಾ ತಾರೆಗಳ ಸಂಗೀತದಂತೆ ಜೊಳ್ಳುಪೊಳ್ಳಾಗಿ ಹೋಗಿಬಿಡುತ್ತದೆ.

## ಜಾನಪದ ಸಾಹಿತ್ಯದಲ್ಲಿ ಅಧ್ಯಾತ್ಮ

ಊರ ದೇವರ ಮಾಡಬೇಕಣ್ಣ । ತನ್ನೊಳಗೆ ತಾನೇ || ಪ ||
ಊರ ದೇವರ ಮಾಡಿರೆಂದು । ಸಾರುತಿದೆ ಶ್ರುತಿ ಇರಳು ಹಗಲು
ದ್ವಾರಗಳೊಂಭತ್ತು ಮುಚ್ಚಿ । ನಿಲ್ಲಿಸಿ ಭ್ರೂಮಧ್ಯದಲ್ಲಿ || ಅ ||

ಎಷ್ಟು ಯುಗಗಳು ತೀರಿ ಹೋಯ್ತಣ್ಣ । ದೇವರ ಮಾಡದೆ
ಕಷ್ಟದಿಂದ ನೊಂದೆಕಾಣಣ್ಣಾ
ಅಷ್ಟದಳದ ಕಂಭನಿಲ್ಲಿಸಿ । ಕಟ್ಟಿಚಪ್ಪಂಗಳನೆ ಹಾಕಿ
ಸೃಷ್ಟಿದೇವರ ತಂದುನಿಲ್ಲಿಸಿ । ದುಷ್ಟಕೋಣನ ಶಿರವ ತರಿದು ॥ ೧ ॥

ಕಷ್ಟಕ್ಲೇಶವೆಂಬ ಕುರಿಯಣ್ಣಾ । ಅದನ್ನೆ ತಂದು
ಕಟ್ಟಿ ತಲೆಯನು ಹೊಡೆಯ ಬೇಕಣ್ಣ ॥
ಅಷ್ಟಮದದ ಕುರಿಗಳನ್ನು । ಕಟ್ಟಿತಲೆಯನು ಚಂಡನಾಡಿ
ಅಟ್ಟಿತಿರುಗುವ ಕೋಳಿಯನ್ನು । ಕುಟ್ಟಿ ಸೂರೆ ಹಾಕುತಲಿ ॥ ೨ ॥

ನಾನು ಎಂಬೋ ಮೇಕೆ ಕಾಣಣ್ಣ । ಅದಕ್ಕೆ ತನ್ನ
ಜ್ಞಾನವೆಂಬೋ ಪೋತರಾಜಣ್ಣ ॥
ತಾನೆಎಂಬೋ ಚಾಟಿಹೊಡೆದು । ಹೀನಪೋತನ ಸೀಳಿಬಿಸುಟು
ಧ್ಯಾನಗುಡಿಸಲಸೂರೆಗೊಂಡು । ತಾನೆಬೆಳಗುವ ಜ್ಯೋತಿನಿಲ್ಲಿಸಿ ॥ ೩ ॥

ನಾಳೆನೋಡೋಣೆನ್ನ ಬೇಡಣ್ಣ । ಕೇಳಣ್ಣ ನೀನೀ
ವೇಳೆಯೊಳಗೇ ಮಾಡಬೇಕಣ್ಣ ॥
ನಾಳೆನೋಡೋಣೆಂದರೇ ನೀ । ಬಾಳುವೋ ಕಾಲಾದಿಯಮನು
ಕೋಳಿಪಿಳ್ಳೆ ಆಡುವಾಗ । ಹಾಳುಹದ್ದಿನಂತೆ ಒಯ್ವ ॥ ೪ ॥

ಹೆಂಡರುಮಕ್ಕಳು ಕಾಣಣ್ಣಾ । ಕೇಳಣ್ಣ ನಿನ್ನ
ಹಿಂಡೆ ತುಂಬಾ ಬಳಗ ಸುಳ್ಳಣ್ಣ ॥
ದಂಡಧಾರಿ ಯಮನು ಬಂದು । ಮಂಡೆಮೇಲೆ ಹೊಯ್ಯುವಾಗ
ಹೆಂಡರುಮಕ್ಕಳು ನಿನ್ನ । ಕಂಡು ಬಿಡಿಸುವದಿಲ್ಲ ಕೇಳೋ ॥ ೫ ॥

ಮತ್ತೆ ಹೆಣ್ಣಿನ ನೋಡುವಿಯಲ್ಲೋ । ನೀಗಳಿಸಿದಂಥಾ
ಬುತ್ತಿ ನೋಡಿ ಉಂಬುವಿಯಲ್ಲೋ ॥
ಮೃತ್ಯುವಿನ ಬಾಯಿಗೆ ನೀನು । ತುತ್ತು ಆಗಿ ಹೋಗಬೇಡ
ತೊತ್ತು ಆಗಿ ಗುರುವಿಗೇ ನೀ । ಉತ್ತಮಸೇವೆಯನು ಮಾಡಿ ॥ ೬ ॥

ಮುಂದೆ ಇಂಥಾ ಜನ್ಮಬರದಣ್ಣ । ನೋಡಣ್ಣ ನಿನಗೆ
ಮಂದಮತಿಯು ಆಗಬೇಡಣ್ಣ ॥
ಹಿಂದಿನ ಕಷ್ಟವ ಮರೆದು । ಮುಂದಿನ ಹಮ್ಮನೆ ತೊರೆದು
ತಂದೆ ಪುರಂದರ ವಿಠಲನ । ಹೊಂದಲು ನೀ ಮುಕ್ತನಣ್ಣ ॥ ೬ ॥

---

## ಯೋಗ ಶಾಸ್ತ್ರದ ಮೇಲೆ

ಆನಂದಭೈರವಿ — ಛಾಪು

ಕಣ್ಣಿನೊಳಗೆ ನೋಡು ಹರಿಯ । ಒಳ
ಗಣ್ಣಿನಿಂದಲಿ ನೋಡು ಮೂಜಗ ಧೊರೆಯ ॥ ಪ ॥

ಆಧಾರ ಮೊದಲಾದ ಆರು । ಚಕ್ರ ।
ಶೋಧಿಸಿ ಬಿಡಬೇಕು ಈಕ್ಷಣ ಮೂರು
ಸಾಧಿಸಿ ಸುಷುಮ್ನವೇರು । ಅಲ್ಲಿ ।
ಭೇದಿಸಿ ನೀ ಪರಬ್ರಹ್ಮನ ಸೇರು ॥ ೧ ॥

ಎವೆಯಿಕ್ಕದೆ ಮೇಲೆ ನೋಡಿ । ಬೇಗ ।
ಪವನನಿಂದಲಿ ವಾಯುಬಂಧನ ಮಾಡಿ
ಕವಿದುನಾದವ ಪಾಕಮಾಡಿ । ಅಲ್ಲಿ ।
ನವವಿಧ ಭಕುತೀಲಿ ನಲಿ ನಲಿದಾಡಿ ॥ ೨ ॥

ಅಂಡದೊಳಗೆ ಆಡುತಾನೆ । ಭಾನು ।
ಮಂಡಲ ನಾರಾಯಣನೆಂಬುವನೇ
ಕುಂಡಲಿ ತುದಿಯೊಳಿದ್ದಾನೆ । ನಮ್ಮ ।
ಪುರಂದರ ವಿಠಲ ಪಾಲಿಸುತಾನೆ ॥ ೩ ॥

## ಹರಿದಾಸರ ರೀತಿ ನೀತಿಗಳು

ಹರಿದಾಸರ ನೀತಿ ರೀತಿಗಳನ್ನು ತಿಳಿಸುವ ಪದಗಳ ಮಾದರಿ ಕೆಳಕಂಡಂತಿವೆ. ಅಸತ್ಯವನ್ನು ಖಂಡಿಸುವುದರಲ್ಲಿ ದಯೆ ದಾಕ್ಷಿಣ್ಯಗಳು ದಾಸರಿಗಿಲ್ಲ.

### ಪಂತುವರಾಳಿ — ಆದಿತಾಳ

ಆದದ್ದಾಯಿತ್ತಿನ್ನಾದರು ಒಳ್ಳೇ । ಹಾದಿ ಹಿಡಿಯೊ ಪ್ರಾಣಿ
ಈದುರ್ನಡತೆಯಿಂದ್ಯೋದರಿಹಪರದಿ । ಮೋದೆಂದಿಗು ಕಾಣಿ ॥ ಪ ॥

ನೆಲಾಸತೀಧನದೊಳಾನವರತ । ಹುಳಾಗಿರುವಿಯಲ್ಲೋ
ಸ್ಥಳಾಸ್ಥಳರಿಯದೆ ಕಲಾಪಮಾಡ್ಯಘ । ಕೊಳಾಗುವದು ಸಲ್ಲೋ
ಹಲಾಪಿಡಿದು ವಿಧಿ ಕುಲಾಚರಣೆ ಬಿಡೆ । ಪಲಾತೆಗುವರಲ್ಲೋ
ಎಲಾ ಕೇಳು ಒಂದು ತಿಲಾಮಾತ್ರನೀ । ಗೆಲಾಹ ಬಗೆಯಿಲ್ಲೋ ॥ ೧ ॥

ಶಿಲಾದಿ ವಿಗ್ರಹ ಥಳಾಸೆ ಹರಿಯಿಂ । ಬ್ಯಲಾ ಕೇವಲ ಸುಳ್ಳೋ
ಜಲಾಪ್ರತಿಮೆ ಪದಗಳಾರ್ಜಿಸಿದಲೇ । ಮಲಾಥಳಿಸಿದ್ಯಲ್ಲೋ
ಕಳಾಜಡದಿರೆ ಅನಿಲಾನ ಹರಿಮನೆ । ಥೊಳಾಗಿರುವುದಲ್ಲೋ
ನಳಾ ಭರತಮುಖ ಇಳಾಣ್ಮರಂದದಿ । ಭಲಾ ಎನಿಸಿಕೊಳ್ಳೋ ॥ ೨ ॥

ಬಿಲಾ ಸೇರಿ ತಲೆಕೆಳಾಗಿ ತಪಿಸಲು । ಫಲಾ ಲೇಶತ್ತಿಲ್ಲೋ
ಖಳಾರಿ ದಿನಬಿಂದು ಜಲಾ ಕೊಳ್ಳನೆಂದು । ಛಲಾ ಮಾಡಲಿಲ್ಲೋ
ಬಲಾದರದಲಿಂ ತುಲಾದಿ ಸ್ನಾನ ಮೊ । ದ ಲಾದ ವ್ರತವೆಲ್ಲೋ
ಬಲಾರಿನುತ ಪ್ರಾಣೇಶ ವಿಠ್ಠಲನ । ಬಲಾಥಳಿಸಿಕೊಳ್ಳೋ ॥ ೩ ॥

### ಕಾಂಬೋದಿ — ಜಂಪೆ

ಇದು ಭಾಗ್ಯ ಇದು ಭಾಗ್ಯ ಇದು ಭಾಗ್ಯವಯ್ಯಾ
ಪದುಮನಾಭನ ಪಾದಭಜನೆ ಸುಖವಯ್ಯಾ ॥ ಪ ॥

ಕಲ್ಲಾಗಿ ಇರಬೇಕು ಕಠಿಣ ಭವತೊರೆಯೊಳಗೆ
ಬಿಲ್ಲಾಗಿ ಇರಬೇಕು ತನ್ನವರೊಳಗೆ
ಮೆಲ್ಲನೇ ಮಾಧವಗೆ ಮನವ ಮೆಚ್ಚಿಸಬೇಕು
ಬೆಲ್ಲವಾಗಿರಬೇಕು ಬಲ್ಲವರೊಳಗೆ ॥ ೧ ॥

ಬುದ್ಧಿಯಲಿ ತನುಮನವ ತಿದ್ದಿಕೊಳ್ಳಲಿ ಬೇಕು
ಮುದ್ದಾಗಿ ಇರಬೇಕು ಮುನಿ ಯೋಗಿಗಳಿಗೆ
ಮಧ್ವಮತಾಬ್ಧಿಯಲಿ ಮೀನಾಗಿ ಇರಬೇಕು
ಶುದ್ಧಮನದಲಿ ತತ್ವ ಶೋಧಿಸಲಿಬೇಕು ॥ ೨ ॥

ವಿಷಯ ಭೋಗದ ತೃಣಕೆ ಉರಿಯಾಗಿ ಇರಬೇಕು
ನಿಶಿದಿನವು ಶ್ರೀಹರಿಯ ಭಜಿಸಬೇಕು
ವಸುಧೆಯೊಳು ಪುರಂದರ ವಿಠಲನ ನಾಮವನು
ಹಸನಾಗಿ ನೆನೆನೆನೆದು ಸುಖಿಯಾಗಬೇಕು ॥ ೩ ॥

## ಸೌರಾಷ್ಟ್ರ — ಛಾಪು

ಎಚ್ಚರಿಕೆ ಭಾಗ್ಯಯಾರಿಗೂ ಸ್ಥಿರವಲ್ಲ ನಿಶ್ಚಯ ವೆಚ್ಚರಿಕೆ
ಹೆಚ್ಚದೆ ಹಿಗ್ಗದೆ ಇದ್ದರೆ ಲೋಕಕ್ಕೆ ಮೆಚ್ಚು ಕೇಳೆಚ್ಚರಿಕೆ ॥ ಪ ॥

ಬಲ್ಲಿದ ನೀನೆಂದು ಬಡವರಬಾಯನು ಬಡಿಯಬೇಡೆಚ್ಚರಿಕೆ
ಎಳ್ಳಷ್ಟು ತಪ್ಪಲು ಯಮನವರು ನರಕಕ್ಕೆ ಎಳೆದೊಯ್ವರೆಚ್ಚರಿಕೆ ॥ ೧ ॥

ಮಾಡು ದಾನಧರ್ಮ ಪರಉಪಕಾರವ ಮರೆಯದಿರೆಚ್ಚರಿಕೆ
ನೋಡಿ ನಡೆಯುವಂಥ ಪುಣ್ಯವಂತರನೋಡು ನಟನೆ ಬೇಡೆಚ್ಚರಿಕೆ ॥ ೨ ॥

ಮೂಢರೊಡನಾಡಿ ಮುಂದುಗಾಣದೆ ನೀನು ಮುನಿಯದಿರೆಚ್ಚರಿಕೆ
ಕೇಡನೆಣಿಸದಿರು ನಂಬಿದವರಿಗೆ ಕೆಡುವೆನೀ ಎಚ್ಚರಿಕೆ ॥ ೩ ॥

ಬಾಳುವಾಗ ಶಿರಿಸ್ಥಿರವಾಗಿ ಇಹುದೆಂದು ಬಿಡಗುಬೇಡೆಚ್ಚರಿಕೆ
ಹಾಳುಬದುಕಿಗಾಗಿ ಹಲವರಕೂಡಣ ಹಗೆಯು ಬೇಡೆಚ್ಚರಿಕೆ ॥ ೪ ॥

ಕಾಲನವರು ಬಂದು ಯಾವಾಗ ಎಳೆವರೊ ಕಾಣದು ಎಚ್ಚರಿಕೆ
ಶ್ರೀಲೋಲ ಪುರಂದರ ವಿಠಲನ ಸ್ಮರಣೆಯು ಮರೆಯದಿರೆಚ್ಚರಿಕೆ ‖ ೫ ‖

ಶಂಕರಾಭರಣ — ರೂಪಕತಾಳ

ಸತ್ಯವಂತರ ಸಂಗವಿರಲು ತೀರ್ಥವ್ಯಾತಕೆ
ನಿತ್ಯ ಅನ್ನದಾನವಿರಲು ಭಯವು ಯಾತಕೆ ‖ ಪ ‖

ತಾನು ಉಣ್ಣದ ಪರರಿಗೀಯದ ಧನವಿದ್ಯಾತಕೆ
ಮಾನಹೀನನಾಗಿ ಬಾಳ್ವ ಮನುಜನೇತಕೆ
ಜ್ಞಾನವಿಲ್ಲದೆ ನೂರುಕಾಲ ಬದುಕಲೇತಕೆ । ತನ್ನ
ಮಾನಿನೀಯ ತೊರೆದಮೇಲೆ ಭೋಗವ್ಯಾತಕೆ ‖ ೧ ‖

ಮಾತು ಕೇಳದೆ ಮಲೆತು ನಡೆವ ಮಕ್ಕಳೇತಕೆ
ಪ್ರೀತಿಯಿಲ್ಲದೆ ಎಡೆಯೊಳಿಟ್ಟ ಅನ್ನವೇತಕೆ
ನೀತಿಯಿಂದ ನಡೆಯದಿರುವ ಭಂಟನೇತಕೆ
ಸೋತು ಹೆಣ್ಣಿನ ಪಾಶದೊಳಿರುವ ಪುರುಷನೇತಕೆ ‖ ೨ ‖

ಸನ್ನೆಯರಿತು ನಡೆಯದಿರುವ ಸತಿಯು ಏತಕೆ
ಮನ್ನಣೆಯಿತ್ತು ರಾಜ್ಯವಾಳದ ದೊರೆಯು ಏತಕೆ
ಮುನ್ನ ಕೊಟ್ಟು ಹುಟ್ಟಿದಲ್ಲದೆ ಬಯಸಲ್ಯಾತಕೆ । ಪ್ರ
ಸನ್ನ ಆದಿಕೇಶವನಲ್ಲದ ದೈವವೇತಕೆ ‖ ೩ ‖

ಕಾಂಬೋದಿ — ಜಂಪೆತಾಳ

ಭೂಷಣಕೆ ಭೂಷಣ ಇದೆ ಭೂಷಣ
ಶೇಷಗಿರಿವಾಸ ಶ್ರೀ ವರವೆಂಕಟೇಶ ‖ ಪ ‖

ನಾಲಿಗೆಗೆ ಭೂಷಣ ನಾರಯಣನನಾಮ
ಕಾಲಿಗೆ ಭೂಷಣ ಹರಿಯಯಾತ್ರೆ

ಆಲಯಕೆ ಭೂಷಣ ತುಲಸಿವೃಂದಾವನ । ವಿ
ಶಾಲಕರ್ಣಕೆ ವಿಷ್ಣುಕಥೆ ಭೂಷಣ ॥ ೧ ॥

ದಾನವೇ ಭೂಷಣ ಎರಡು ಹಸ್ತಂಗಳಿಗೆ
ಮಾನವೇ ಭೂಷಣ ಮಾನವರಿಗೆ
ಜ್ಞಾನವೇ ಭೂಷಣ ಮುನಿಯೋಗಿಗಳಿಗೆಲ್ಲ
ಮಾನಿನಿಗೆ ಭೂಷಣ ಪತಿಯ ಭಕುತಿ ॥ ೨ ॥

ರಂಗನ್ನ ನೋಡುವುದೆ ಕಂಗಳಿಗೆ ಭೂಷಣ
ಮಂಗಳಾಂಗಗೆ ಮಣಿವ ಶಿರಭೂಷಣ
ಶೃಂಗಾರ ತುಲಸಿಮಣಿ ಕೊರಳಿಗೆ ಭೂಷಣ
ರಂಗವಿಠಲನನಾಮ ಸರ್ವಭೂಷಣವಯ್ಯ ॥ ೩ ॥

### ಕಾಂಬೋದಿ — ಜಂಪೆತಾಳ

ಭೂಷಣಕೆ ಭೂಷಣ ಹರಿಯನಾಮ । ಮಿಕ್ಕ
ವೇಷ ಭಾಷಾಭರಣವೆಲ್ಲ ನಿರ್ನಾಮ ॥ ಪ ॥

ಹರಿಯ ಸಂದರ್ಶನವೆ ನೇತ್ರಕ್ಕೆ ಭೂಷಣವು
ಹರಿಪಾದ ಪ್ರಣತಿಯೆ ಶಿರಕೆ ಭೂಷಣವು
ಹರಿಯರ್ಚನಾದಿಗಳು ಕರಗಳಿಗೆ ಭೂಷಣವು
ಹರಿಯಾತ್ರೆ ಮಾಡುವದೆ ಚರಣಕ್ಕೆ ಭೂಷಣವು ॥ ೧ ॥

ಹರಿಯನಾಮಾಮೃತವು ರಸನೆಗೆ ಭೂಷಣವು
ಹರಿಸ್ತೋತ್ರ ಪೂರ್ಣವಿದ್ಯೆಗೆ ಭೂಷಣ
ಹರಿಯಂಗ ಸಂಗವೀ ತನುವಿಗೆ ಭೂಷಣವು
ಹರಿಯ ಅನುರಾಗವೇ ಮನಸಿಗೆ ಭೂಷಣವು ॥ ೨ ॥

ಹರಿಯ ಸ್ಮರಿಸುತಲಿಹುದೆ ಸ್ಥಿರಮತಿಗೆ ಭೂಷಣವು
ಹರಿಗಳುಕಿಬಾಳುವುದೆ ಜನ್ಮಕ್ಕೆ ಭೂಷಣ

ಹರಿಗೆ ಹಿಗ್ಗುತಲಿಹುದೆ ಕರಣಕ್ಕೆ ಭೂಷಣವು
ಗುರುಜಯವಿಠಲನ ಸ್ಮೃತಿ ಸಕಲ ಭೂಷಣವು || ೩ ||

### ಚಕ್ರವಾಕ — ಆದಿತಾಳ

ಧನನಿಲ್ಲದಯ್ಯ ಸಾ । ಧನ ನಿಲ್ಲುವದಯ್ಯ
ತನುನಿಲ್ಲದಯ್ಯ ದಾ । ತನು ಎನಿಸಯ್ಯಾ || ಪ ||

ಜನಬರುವರೋ ಸ । ಜ್ಜನ ಬಾರರಯ್ಯ
ಅನುಸರಿಸೀ ಜೀ । ವನ ಪೊರೆಯಯ್ಯಾ || ೧ ||

ಹಣಪುಟ್ಟುವದೊ ಸೂ । ಗುಣ ಪುಟ್ಟದಯ್ಯ
ಗುಣನಿಧಿ ಹರಿಗುಣ । ಗುಣಿಸಿ ಬಾಳಯ್ಯ || ೨ ||

ಭಾಗ್ಯನಿಧಿ ವಿಠಲನ । ಆಜ್ಞೆಯಿದಯ್ಯಾ
ಸುಜ್ಞರಸೇವಿಸಿ । ಪ್ರಾಜ್ಞನಾಗಯ್ಯ || ೩ ||

### ಸೌರಾಷ್ಟ್ರ — ಛಾಪು

ಮುಂದೆ ಭಲಾ ಎಂದು ಹಿಂದಾಡಿಕೊಂಬನ ಸಂಗಬೇಡ
ಕುಂದು ನಿಂದೆ ಅಪವಾದವಿಡುವನ ಸಂಗಬೇಡ || ಪ ||

ಮಾತು ಮಾತಿಗೆ ಮಾನವರನ್ನು ಜರಿವನ ಸಂಗಬೇಡ
ನೀತಿವಂತರನು ಭೀತಿಪಡಿಸುವವನ ಸಂಗಬೇಡ || ೧ ||

ವಿನಯ ವಿವೇಕವಿಲ್ಲದ ವಿದ್ಯಾವಂತನ ಸಂಗಬೇಡ
ಧನ ಕೋಟಿ ಕೊಟ್ಟರು ಕಪಟಮಾನವನ ಸಂಗಬೇಡ || ೨ ||

ತನ್ನ ಕಾರ್ಯಕ್ಕಾಗಿ ಪರರನ್ನು ಕೆಡಿಸುವನ ಸಂಗಬೇಡ
ಘನ್ನಮಹಿಮ ಶ್ರೀ ಪುರಂದರ ವಿಠಲನ ಮರೆಯಬೇಡ || ೩ ||

### ಪೂರ್ವಿ — ಜಂಪೆತಾಳ

ಅಜ್ಞಾನಿಗಳ ಕೂಡ ಅಧಿಕ ಸ್ನೇಹಕ್ಕಿಂತ
ಸುಜ್ಞಾನಿಗಳ ಕೂಡ ಕಲಹವೇ ಲೇಸು || ಪ ||

ಉಂಬುಡುವದಕ್ಕಿರದ ಅರಸನೋಲಗಕಿಂತ
ತುಂಬಿದೂರೊಳಗೆ ತಿರಿದುಂಬುದೇ ಲೇಸು
ಹಂಬಲಿಸಿ ಹಾಳು ಹರಟೆಗಳ ಹರಟೇಗಿಂತ
ನಂಬಿ ಹರಿದಾಸರನು ಪೊಂದುವುದೆ ಲೇಸು ॥ ೧ ॥

ಒಡನೆ ಹಂಗಿಸುವವನ ಪಾಲೋಗರಕ್ಕಿಂತ
ಕುಡಿನೀರ ಕುಡಿದುಕೊಂಡಿರುವುದೇ ಲೇಸು
ಕಡುಕುಹಕನೊಡನೆ ಸಂಗವ ಮಾಡುವದಕಿಂತ
ಅಡವಿಯೊಳಗಜ್ಞಾತವಾಸ ಲೇಸು ॥ ೨ ॥

ಮುಸಿದು ಮತ್ಸರಿಪ ಸತಿಯೊಡನೆ ಬಾಳ್ವುದಕಿಂತ
ಹಸನಿಲ್ಲದ ಹಾಳು ಗುಡಿಯು ಲೇಸು
ಅಸಮಬಲ ನಮ್ಮ ಶ್ರೀ ಪುರಂದರ ವಿಠಲನ
ನಿಶಿದಿನದಿ ನೆನೆಯುತ್ತ ಬಾಳುವುದೆ ಲೇಸು ॥ ೩ ॥

**ಕಾಂಬೋದಿ — ಜಂಪೆತಾಳೆ**

ಪಾಪಿ ಬಲ್ಲನೆ ಪರರ ಸುಖದುಃಖವ
ಕೋಪಿ ಬಲ್ಲನೆ ಶಾಂತಿ ಶೀಲ ಸದ್ಗುಣವ ॥ ಪ ॥

ಕತ್ತೆ ಬಲ್ಲದೆ ಹೊತ್ತ ಕತ್ತುರಿಯ ಪರಿಮಳವ
ಮೃತ್ಯು ಬಲ್ಲಳೆ ಹೊತ್ತು ವೇಳೆಯೆಂಬುದನು
ತೊತ್ತುಬಲ್ಲಳೆ ಮಾನ ಅಭಿಮಾನವೆಂಬುದನು
ಭೃತ್ಯಬಲ್ಲನೆ ಒಡೆಯಗಿರುವ ಕಷ್ಟಗಳನ್ನು ॥ ೧ ॥

ಹೇನು ಬಲ್ಲುದೆ ಮುಡಿದ ಹೂವಿನ ಸುಗಂಧವನು
ಸ್ವಾನಬಲ್ಲುದೆ ರಾಗ ಭೇದಂಗಳ
ಮೀನುಬಲ್ಲದೆ ನೀರು ಸ್ವಾದು ಸೌಳೆಂಬುದನು
ಹೀನಬಲ್ಲನೆ ಸುಗುಣ ದುರ್ಗುಣಗಳನ್ನು ॥ ೨ ॥

ಬಾಳೆಬಲ್ಲುದೆ ಮರಳಿ ಫಲವಾಹ ಬಗೆಯನ್ನು
ಸೂಳೆಬಲ್ಲಳೆ ಗೆಳೆಯಗಿರುವ ಬಡತನವ
ಕೇಳಬಲ್ಲನೆ ಕಿವುಡ ಏಕಾಂತ ಮಾತುಗಳ
ಹೇಳಬಲ್ಲನೆ ಮೂಕ ಕನಸಿನ ಪರಿಯನ್ನು ॥ ೩ ॥

ಕಾಗೆ ಬಲ್ಲುದೆ ಒಳ್ಳೆ ಕೋಗಿಲೆಯ ಸ್ವರವನ್ನು
ಗೂಗೆಬಲ್ಲುದೆ ಹಗಲ ಹರಿದಾಟವ
ಜೋಗಿಬಲ್ಲನೆ ಮನೆಯೊಳಿಲ್ಲ ಉಂಟೆಂಬುದನು
ರೋಗಿಬಲ್ಲನೆ ಪಕ್ವ ಭೋಜನದ ಸವಿಯ ॥ ೪ ॥

ಹೇಡಿ ಬಲ್ಲನೆ ರಣದ ಸಾಹಸದ ಶೌರ್ಯವನು
ಕೋಡಗವು ಬಲ್ಲುದೇ ರತ್ನದ ಬೆಲೆಯ
ಬೇಡಿದುದ ನಮ್ಮ ಶ್ರೀ ಪುರಂದರ ವಿಠಲನೊಲ್
ನಾಡದೈವಂಗಳು ಕೊಡಬಲ್ಲವೇ ಮರುಳೆ ॥ ೫ ॥

---

## ಸ್ತ್ರೀಯರಿಗಾಗಿ

### ಶಂಕರಾಭರಣ — ಆದಿತಾಳ

ಬುದ್ಧಿಮಾತು ಹೇಳಿದರೆ ಕೇಳಬೇಕಮ್ಮ । ಮಗಳೆ
ಶುದ್ಧಳಾಗಿ ಗಂಡನೊಡನೆ ಬಾಳಬೇಕಮ್ಮ ॥ ಪ ॥

ಅತ್ತೆಮಾವಗೆ ಅಂಜಿಕೊಂಡು ನಡೆಯಬೇಕಮ್ಮ । ಮಗಳೆ
ಚಿತ್ತದೊಲ್ಲಭನಕ್ಕರೆಯನ್ನು ಪಡೆಯಬೇಕಮ್ಮ
ಹೊತ್ತು ಹೊತ್ತಿಗೆ ಮನೆಯ ಕೆಲಸ ಮಾಡಬೇಕಮ್ಮ । ಮಗಳೆ
ಹತ್ತು ಮಂದಿ ಒಪ್ಪುವ ಹಾಗೆ ನುಡಿಯಬೇಕಮ್ಮ ॥ ೧ ॥

ಕೊಟ್ಟುಕೊಂಬುವ ನೆಂಟರೊಡನೆ ದ್ವೇಷಬೇಡಮ್ಮ । ಮಗಳೆ
ಆಟ್ಟು ಉಂಬುವ ಕಾಲದಲ್ಲಿ ಆಟ ಬೇಡಮ್ಮ

ಹಟ್ಟಿ ಬಾಗಿಲಲ್ಲಿ ಬಂದು ನಿಲ್ಲಬೇಡಮ್ಮ । ಮಗಳೆ
ಕಟ್ಟಿ ಆಳುವ ಗಂಡನೊಡನೆ ಸಿಟ್ಟು ಬೇಡಮ್ಮ ॥ ೨ ॥

ನೆರೆಹೊರೆಯವರಿಗೆ ನ್ಯಾಯ ಹೇಳಬೇಡಮ್ಮ । ಮಗಳೆ
ಗರುವ ಕೋಪಮತ್ಸರವ ಮಾಡಬೇಡಮ್ಮ
ಪರರ ನಿಂದಿಪ ಹೆಂಗಸರೊಡನೆ ಸೇರಬೇಡಮ್ಮ । ಮಗಳೆ
ಪುರಂದರ ವಿಠಲನ ಸ್ಮರಣೆಯನ್ನು ಮರೆಯಬೇಡಮ್ಮ ॥ ೩ ॥

ಧನಾಸರಿ — ಆದಿತಾಳ

ಭಂಗಾರ ವಿಡಬಾರೇ । ನಿನಗೊಪ್ಪುವ । ಭಂಗಾರವಿಡಬಾರೇ
ರಂಗನಾಥನ ದಿವ್ಯ । ಮಂಗಳನಾಮವೆಂಬ । ಭಂಗಾರವಿಡಬಾರೆ ॥ ಪ ॥

ಮುತ್ತೈದೆತನವೆಂಬ ಮುದದಲಿ ಕುಂಕುಮದ ಕಸ್ತುರಿಯ ಬಟ್ಟನಿಡೇ ।
ನಿನ್ನ ಫಣೆಗೆ । ಕಸ್ತೂರಿಯ ಬಟ್ಟನಿಡೇ
ಹೆತ್ತವರ ಕುಲಕೆ ಕುಂದು ಬಾರದ ಹಾಗೆ ಮಸ್ತಕ ಮಕುಟವಿಡೇ
ಕರ್ತೃಪತಿಯು ಮಾತ ಮೀರಬಾರದು ಎಂಬ ಮುತ್ತಿನ್ವಾಲೆ ಕೊಪ್ಪನಿಡೇ ।
ನಿನ್ನ ಕಿವಿಗೇ ಮುತ್ತಿನ್ವಾಲೆ ಕೊಪ್ಪನಿಡೇ
ಹತ್ತುಮಂದಿಯ ಕೈಲಿ ಹೌಧಾದೆನಿಸಿಕೊಂಬ ಹಸ್ತಕಡಗ ಕಂಕಣವಿಡೇ ॥೧॥

ಅರಗಳಿಗೇ ಪತಿಯ ಅಗಲಬಾರದು ಎಂಬ ಅಚ್ಚ ಮಂಗಳಸೂತ್ರ ಕಟ್ಟೆ ।
ನಿನ್ನ ಕೊರಳಿಗೆ ಅಚ್ಚ ಮಂಗಳಸೂತ್ರ ಕಟ್ಟೇ
ಪರಪುರುಷನ ನಿನ್ನ ಪಡೆದ ತಂದೆಯೆಂಬ ಬಿರಿದಿನೊಡ್ಯಾಣವಿಡೇ
ಕರೆದೊಬ್ಬರಿಗೆ ಅನ್ನ ವಿಕ್ಕುವೆನೆಂತೆಂಬ ಹರಡಿದೋರೆಯನಿಡೇ ।
ನಿನ್ನ ಕೈಗೆ ಹರಡಿದೋರೆಯನಿಡೇ
ನೆರೆಹೊರೆಯವರೆಲ್ಲ ಸರಿಸರಿಯೆಂಬಂಥ ಸರಿಗೆ ಸರವ ಹಾಕೇ ॥ ೧ ॥

ಮಾನ ಹೊರಗೆ ಬಿಚ್ಚೆನೆಂಬ ಕಂಭಾವತಿಯ ನೇಮದ ಮಡಿಯನುಡೇ ।
ನಿನ್ನ ಮೈಗೇ ನೇಮದ ಮಡಿಯನುಡೇ

ಹೀನಗುಣವ ಬಿಟ್ಟು ಹಿತದಲ್ಲದ್ದೇನೆಂಬ ಹೆಚ್ಚಿನ ಕುಪ್ಪುಸ ತೊಡೇ
ಜ್ಞಾನನಿಧಿಗಳಾದ ಗುರುಗಳ ಪಾದಕ್ಕಾನತಳಾಗಿ ಬಾಳೇ ।
ಗುರುಗಳಪಾದಕ್ಕಾನತಳಾಗಿ ಬಾಳೇ
ಮೌನಿಗಳೊಡೆಯ ಶ್ರೀ ಪುರಂದರ ವಿಠಲನ ಪ್ರೇಮಶರಗೀಲಿ ಕಟ್ಟೇ ॥ ೩ ॥

---

ಹರಿದಾಸರು ಪ್ರಪಂಚದ ರೀತಿ ನೀತಿಗಳನ್ನು ತಿಳಿಸುವಾಗ, ಎಲ್ಲಾದರೊಮ್ಮೆ ತಾವನುಸರಿಸಿರುವ ಮತದ ಮಾತಾಡುವರಲ್ಲದೆ, ವಿಶ್ವಧರ್ಮವನ್ನವರು ಮರೆಯುವದಿಲ್ಲ. ಯಾವ ದೇಶಕಾಲಗಳಿಗಾಗಲಿ, ಮತಗಳಿಗಾಗಲಿ, ನೀತಿಯೆಂಬುವುದು ಸಮಾನವಾದ ನೆಲೆಗಟ್ಟಿನಂತಿರುತ್ತದೆ. ನೀತಿಯೆಂಬ ನೆಲಗಟ್ಟಿನ ಮೇಲೆ ಸಾಂಪ್ರದಾಯಿಕ ಕೆಲವು ಉಪದೇಶಗಳಿಂದ ಸಹಿತವಾಗಿ ಮತ ಮಂದಿರದ ನಿರ್ಮಾಣವಾಗಿರುತ್ತದೆ. ನೀತಿಗೊಳಗಾಗದವರನ್ನು ಮತವು ಪುರಸ್ಕರಿಸುವುದಿಲ್ಲ. ನೀತಿ ಮತ ಬಾಹಿರರನ್ನು ಕುರಿತು ತತ್ತತ್ಕಾಲದಲ್ಲಿ ಸಮಾಜವು ಕೆಲವು ಕಟ್ಟಲೆಗಳನ್ನುಪದೇಶಿಸುತ್ತದೆ. ಆ ಕಟ್ಟಲೆ ಮೀರಿದವರನ್ನು ಸಮಾಜವು ಬಹಿಷ್ಕರಿಸುತ್ತದೆ. ಬಹಿಷ್ಕೃತರ ಸಂಖ್ಯೆ ಬೆಳೆಯಿತೆಂದರೆ ಮತ್ತವರದೇ ಒಂದು ಗುಂಪಾಗಿ ನಿಲ್ಲುತ್ತದೆ. ಅವರಿಗಾದರೂ ಕೆಲಕೆಲವು ಸುಲಭ ನೀತಿ ನಿಯಮಗಳಿಲ್ಲದಿದ್ದರೆ ಸಮಾಜಧಾರಣೆ ಮಾಡಲು ಸಾಧ್ಯವಾಗುವುದಿಲ್ಲ. ಅಂತಹವರ ಉದ್ಧಾರಕ್ಕಾಗಿ ಬುದ್ಧಿವಂತರಾದ ಯಾರಾದರೊಬ್ಬರು ಮುಂದೆ ನಿಂತು ತಮ್ಮದೇ ಆದ ಒಂದು ಮತವನ್ನು ನಿರ್ಮಾಣ ಮಾಡುತ್ತಾರೆ. ಹೊಸ ಮತ ಬಂದ ಕೂಡಲೇ ಹಳೆಯದರ ನಿಂದೆಗಾರಂಭವಾಗುತ್ತದೆ. ಒಟ್ಟು ಸಮಾಜದಲ್ಲಿ ಘರ್ಷಣೆಯಾಗುತ್ತದೆ. ಇದರಿಂದ ಮತದ ಹಾನಿಯ ಮಾತಿರಲಿ, ಸಾಮಾನ್ಯ ಮಾನವ ನೀತಿಗೇ ಭಂಗ ಬರುತ್ತದೆ. ಸಂಪ್ರದಾಯದಲ್ಲಿ ನಿಂತಿದ್ದ ಮತವು ಮತ್ತೆ ವಿಚಾರದ ಕಡೆತದಲ್ಲಿ ಸಿಕ್ಕಿದರೆ, ಆಚಾರ ಶುದ್ಧವಾಗಿ, ವಿಚಾರ ಬೆಳೆದು, ಮತ್ತದೇ ವಿಶ್ವಧರ್ಮವೆನಿಸಿ ಲೋಕೋದ್ಧಾರಕ್ಕೆ ಕಾರಣವೆನಿಸುತ್ತದೆ. "ಪರೋಪಕಾರಃ ಪುಣ್ಯಾಯ

ಪಾಪಾಯ ಪರ ಪೀಡನಂ" ಎಂಬ ಶ್ಲೋಕಾರ್ಥದಲ್ಲಿ ಉಕ್ತವಾದ ಧರ್ಮವು ಸಕಲ ಮತಗಳಿಗೂ ಆಧಾರವಾಗಿ ನಿಂತು ಸಮಾಜ ಕಲ್ಯಾಣವಾಗುತ್ತದೆ.

ಕರ್ಣಾಟಕದ ಹರಿದಾಸರಾದರೋ—ಸಮಾಜವನ್ನು ಕಟ್ಟುವುದಕ್ಕೆ ಬಂದವರಲ್ಲದೆ ಒಡೆಯಲು ಬಂದವರಲ್ಲ. "ಮುನ್ನ ಮಾಡಿದ ಕರ್ಮ ಬೆನ್ನ ಬಿಡದಿರ್ದಡೆ ನಿನ್ನ ಮೊರೆಯ ಹೊಗಲ್ಯಾಕೋ ಗೋವಿಂದ" ಎಂದವರು ಹರಿದಾಸರು. "ನಮ್ಮನ್ನೊಲ್ಲದ ಹಯವದನ ಎಲ್ಲಿದ್ದರೇನು" ಎಂದವರು ಹರಿದಾಸರು. ತಪ್ಪುಗಳನ್ನು ತಪ್ಪದೆ ಖಂಡಿಸಿ ಪಾಪಾತ್ಮರನ್ನು ಪುನೀತಗೊಳಿಸಲು ಬಂದವರು ಹರಿದಾಸರು. ನಿಂದೆಗೊಳಗಾದ ಹೀನ ದೀನ ಹೆಂಗಳೆಯರನ್ನು ಸಹ ಪುರಸ್ಕರಿಸಿ, ಮಠಾಧಿಪತಿಗಳ ಬಹಿಷ್ಕಾರವನ್ನು ಪರಮಾನುಗ್ರಹವೆಂದು ಅಂಗೀಕರಿಸಿ, ಸಮಾಜವನ್ನುದ್ಧರಿಸಿದವರು ಹರಿದಾಸರು. ದಾಸರ ದಯಾಪಾತ್ರವಾಗದ ಮಾನವ ಪ್ರಾಣಿ ಒಂದಾದರಿಲ್ಲ. ಅಂತ್ಯಜರೆನಿಸಿದ ಹೊಲೆಯರನ್ನು ಸಹ ಹರಿಜನರೆಂದು ಕರೆದವರು ಹರಿದಾಸರು. ಹೊಲೆಯರ ಮೇಲಿದ್ದ ಜನರ ತಿರಸ್ಕಾರವನ್ನು ಹೋಗಲಾಡಿಸಿದವರು ಹರಿದಾಸರು. "ಹೊಲೆಯ ಹೊರಗಿಹನೆ, ಊರೊಳಗಿಲ್ಲವೇ" ಎಂದವರು ಹರಿದಾಸರು. "ಹೊರಗಿದ್ದ ಹೊಲೆಯನ್ನ ಒಳಗೆ ಬಚ್ಚಿಟ್ಟರೆ ಇದಕ್ಕೇನು ಮದ್ದೋ ಪುರಂದರ ವಿಠಲ" ಎಂದು ಕೇಳಿದವರು ಹರಿದಾಸರು. ಆ ವಿವರವನ್ನು ಮುಂದೆ ನೋಡೋಣ!

## ಹರಿಜನರು

ದಯಾಘನರಾದ ಮಹಾತ್ಮಾ ಗಾಂಧಿಯವರು ಕೆಲವು ವರ್ಷಗಳಿಂದೀಚೆಗೆ ನಮ್ಮ ದೇಶದ ನಿಮ್ನ ವರ್ಗದ ಜನರನ್ನು ಹರಿಜನರೆಂದು ಕರೆಯುತ್ತಿರುವುದು ಎಲ್ಲರಿಗೆ ತಿಳಿದಿರುವ ಸಂಗತಿ. ಹರಿಜನ ಶಬ್ದವು ಮೋಹನದಾಸರಿಂದ ನಿರ್ಮಿತವಾದುದಲ್ಲ. ೧೭ನೇ ಶತಮಾನದಲ್ಲಿ ಮಹಾರಾಷ್ಟ್ರದಲ್ಲಿ ರಾಷ್ಟ್ರೀಯ ಜಾಗ್ರತೆ ಹುಟ್ಟಿ ಶಿವಾಜಿ ಮಹಾರಾಜರಿಂದ ಹಿಂದೂಸಾಮ್ರಾಜ್ಯ ಪ್ರತಿಷ್ಠಿತವಾದಾಗ, ನಮ್ಮ ದೇಶದ ಢೇಡ, ಚಮ್ಮಾರ, ಹೊಲೆಯ, ಮಾದಿಗ ಇತ್ಯಾದಿ ಹೆಸರುಗಳಿಂದ ಕರೆಸಿಕೊಳ್ಳುತ್ತಿದ್ದ ಅಸ್ಪೃಶ್ಯರನ್ನು ಸಮರ್ಥ ರಾಮದಾಸರಾದಿ

ಯಾದ ಹರಿದಾಸರುಗಳು ಹರಿಜನರೆಂದು ಕರೆದರು. ಹಿಂದೂ ಸಾಮ್ರಾಜ್ಯ ಕ್ಕಾಗಿ ಆ ಹರಿಜನರು ಎಲ್ಲರ ಜೊತೆಯಲ್ಲಿ ಸರಿಸರಿ ನಿಂತು ಸಮರಾಂಗಣದಲ್ಲಿ ಹೋರಾಡಿದರು. ಮಧ್ಯಕಾಲದಲ್ಲಿ ಮರೆತು ಹೋಗಿದ್ದ ಹೆಸರನ್ನು ಇತಿಹಾಸ ದಿಂದ ತೀಳಿದು ಮಹಾತ್ಮಾ ಗಾಂಧಿಯವರಾದರೂ ನಮ್ಮ ಸಮಾಜ ಕಲ್ಯಾಣ ದೃಷ್ಟಿಯಿಂದ ಮತ್ತೆ ಜ್ಞಾಪಕಕ್ಕೆ ತಂದುಕೊಟ್ಟರು.

"ತಂತುಂತನ್ವನ್" ಎಂಬ ಋಗ್ವೇದ ಮಂತ್ರ ಹೇಗೆ ನೂಲುವುದನ್ನು ಕಲಿಸಿತ್ತೋ ಹಾಗೆ ಮಹಾರಾಷ್ಟ್ರದ ಹರಿದಾಸರು, ಅಸ್ಪೃಶ್ಯರನ್ನು ಹರಿಜನ ರೆಂದು ಕರೆಯಲು ಕಲಿಸಿದ್ದರು. ಈ ಎರಡರ ಜ್ಞಾಪಕವನ್ನುಂಟುಮಾಡಿ ಕೊಟ್ಟವರು ಮಹಾತ್ಮಾ ಗಾಂಧಿಯವರು.

ನಮ್ಮ ಶಾಸ್ತ್ರದಲ್ಲಿ ವರ್ಣ ಚತುಷ್ಟಯದ ಜೊತೆಗೆ ಚಂಡಾಲರೆಂಬ ಮತ್ತೊಂದು ವರ್ಗದ ಜನರು ಸ್ಮೃತಿಗಳ ಕಾಲದಲ್ಲಿದ್ದರೆಂದು ಗೊತ್ತಾಗು ತ್ತದೆ ಚಂಡಾಲರ ಲಕ್ಷಣವನ್ನು ಸ್ಮೃತಿಕಾರರು ವರ್ಣಿಸುತ್ತಾರೆ. ಆದರೆ ಆ ಚಂಡಾಲರ ಸಂತತಿ ಎಂದೋ ನಾಶವಾಗಿ ಆ ಲಕ್ಷಣದ ಜನರು ಈಗ ಭರತಖಂಡದಲ್ಲಿ ಕಂಡು ಬರುತ್ತಿಲ್ಲ. ದುರ್ದೈವದಿಂದ ಏಕೋ, ಹೇಗೋ ಎಂದೋ ಚಂಡಾಲರಿಗಿದ್ದ ತಿರಸ್ಕಾರ ನಮ್ಮ ದೇಶದ ಹೊಲೆಯರಿಗೆ ಮಾದಿಗ ರಿಗೆ ಪ್ರಾಪ್ತವಾಗಿ ಬಿಟ್ಟಿದೆ. ಅವರ ಕಶ್ಮಲ ಜೀವನ, ಜನರ ತಿರಸ್ಕಾರಕ್ಕೆ ಕಾರಣವಾಗಿರಬಹುದು. ಮಹಾರಾಷ್ಟ್ರದಲ್ಲಿ ರಾಷ್ಟ್ರೀಯ ಜಾಗ್ರತೆ ಹುಟ್ಟುವು ದಕ್ಕೆ ೧೫೦ ವರ್ಷ ಮುಂಚೆ ವಿಜಯನಗರ ಸಾಮ್ರಾಜ್ಯದಲ್ಲಿ ಕರ್ಣಾಟಕದ ಹರಿದಾಸರು ಆ ಹೊಲೆಮಾದಿಗರಲ್ಲಿ ಕನಿಕರ ತಾಳಿರುವುದು ಕಂಡು ಬರುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಾದಿರಾಜರಂಥಾ ಮಠಾಧಿಪತಿಗಳು ಅಸ್ಪೃಶ್ಯರಲ್ಲಿ ದಯೆ ತೋರಿಸಿ, ಅವರಿಗೂ ಹರಿಭಕ್ತಿ ಮಾರ್ಗವನ್ನು ಕಲಿಸಿ, ತುಳು ಭಾಷೆ ಯಲ್ಲಿ "ಪಾಡ್ದನ" ಎಂಬ ಹೆಸರಿನ ಭಕ್ತಿ ಸಾಹಿತ್ಯವನ್ನು ಮಾಡಿಕೊಟ್ಟು ಉಪಕಾರಮಾಡಿರುವುದು ಕಂಡು ಬರುತ್ತದೆ. ಪುರಂದರ ದಾಸರಾದರೋ, ಬಲು ಖಂಡಿತೋಕ್ತಿಯಿಂದ

ಹೊಲೆಯ ಬಂದನೆಂದು ಒಳಗೆ ದೇವರಮಾಡಿ
ಗಣಗಣ ಗಂಟೆಯ ಬಾರಿಸುವರಯ್ಯಾ

ತನುವಿನ ಕೋಪವು ಹೊಲೆಯಲ್ಲವೇ
ಪರಧನ ಪರಸತಿ ಹೊಲೆಯಲ್ಲವೇ
ಹೊರಗಿದ್ದ ಹೊಲೆಯನ ಒಳಗೆ ಬಚ್ಚಿಟ್ಟರೆ
ಇದಕೇನು ಮದ್ದೋ ಪುರಂದರ ವಿಠಲ

ಎಂಬ ಉಗಾಭೋಗವನ್ನಾಡಿ, ತಿರಸ್ಕರಿಸುತ್ತಿದ್ದ ಜನರ ಮನಃ ಪರಿವರ್ತನ ಮಾಡಿ, ಮತ್ತೆ—

**ಮುಖಾರಿ — ಜಂಪೆತಾಳೆ**

ಹೊಲೆಯ ಹೊರಗಿಹನೆ ಊರೊಳಗಿಲ್ಲವೇ
ಹೊಲೆಗೇರಿಯಲಿ ಮಾತ್ರ ಹೊಲೆಯ ನಿರುತಿಹನೇ || ಪ ||

ಶೀಲವನು ಕೈಕೊಂಡು ನಡೆಸದಾತನೆ ಹೊಲೆಯ
ಹೇಳಿದ ಶಾಸ್ತ್ರಗಳ ತಿಳಿಯದವ ಹೊಲೆಯ
ಆಳಾಗಿ ಅರಸನಿಗೆ ಮುನಿಯುವಾತನೆ ಹೊಲೆಯ
ಸೂಳೆಯನು ಹೋಗುವವ ಶುದ್ಧ ಹೊಲೆಯ
ಇದ್ದು ದಾನಂಗಳನು ಮಾಡದಿದ್ದವ ಹೊಲೆಯ
ಕದ್ದು ತಿಂದೂ ಒಡಲ ಹೊರೆಯುವವ ಹೊಲೆಯ
ಪದ್ಧತಿಯ ಬಿಟ್ಟು ತಾನುಡಿಯುವಾತನೆ ಹೊಲೆಯ
ಮದ್ದಿಕ್ಕಿ ಕೊಲ್ಲುವವ ಮರಳು ಹೊಲೆಯ || ೨ ||

ಕೊಂಡ ಋಣವನು ತಿರುಗಿ ಕೊಡದಿದ್ದವನು ಹೊಲೆಯ
ಭಂಡು ಮಾತುಗಳನು ಬಯಲಿಕ್ಕುವನೆ ಹೊಲೆಯ
ಗಂಡಹೆಂಡಿರ ನಡುವೆ ಭೇದವಿಕ್ಕುವ ಹೊಲೆಯ
ಹೆಂಡತಿಯ ಇಚ್ಛೆಯಲಿ ನಡೆಯುವಾತನೆ ಹೊಲೆಯ || ೩ ||

ಆಶೆಯನು ಹುಟ್ಟಿಸಿ ಭಾಷೆ ತಪ್ಪುವ ಹೊಲೆಯ
ಲೇಸು ಉಪಕಾರವನು ಸ್ಮರಿಸದವ ಹೊಲೆಯ

ಕಾಸು ಕೊಟ್ಟು ಬಹಳ ಕೊಟ್ಟೆನೆಂಬುವ ಹೊಲೆಯ
ಹೇಸದಲೆ ಹುಸಿ ನುಡಿಯುವಾತನೆ ಹೊಲೆಯ || ೮ ||

ಅರಿತು ಆಚಾರವನು ನಡೆಸದಿದ್ದವ ಹೊಲೆಯ
ಪರನಿಂದೆ ಮಾಡುವವ ಪರಮ ಹೊಲೆಯ
ಗುರುಹಿರಿಯರ ಕಂಡು ಎರಗದಾತನು ಹೊಲೆಯ
ಪುರಂದರ ವಿಠಲನ ನೆನೆಯದಾತನೆ ಹೊಲೆಯ || ೯ ||

ಪುರಂದರ ದಾಸರು ದೇವರನಾಮ ಉಗಾಭೋಗಗಳಲ್ಲಿ ಹೀಗೆ ಹೇಳಿದ್ದರೆ, ವಿಜಯದಾಸರು ಇನ್ನೂ ಒಂದಡಿ ಮುಂದಿಟ್ಟು **ಹೊಲೆಯ, ಹೊಲತಿ** ಸುಳಾದಿಗಳನ್ನೇ ಮಾಡಿ ಹಾಡಿ ಸಮಾಜವನ್ನು ಎಚ್ಚರಿಸಿರುತ್ತಾರೆ.

## ಹೊಲೆಯ ಸುಳಾದಿ

### ಧ್ರುವತಾಳ

ಹೊಲೆಯನಾವನು ಈ ಕಲಿಯುಗದೊಳಗೆ ನಿ
ಶ್ಚಲವಾಗಿ ತಿಳಿಯುವುದು ಸುಲಭ ಮಾನವರು
ನಲಿದು ಕೇಳುವುದು ಚಂಚಲಮಾಡದೆ
ಫಲಿತಾರ್ಥವಿದು ಹಂಬಲಿಪುದು ಸತತದಲಿ
ಹಲವು ಮಾತೇನು ನಿರ್ಮಲವಾಗಿ ಕೋಪವ
ಕಳೆಯಲರಿಯದವ ಹೊಲೆಯ ಶುದ್ಧ ಹೊಲೆಯ
ಕಳವು ಮತ್ತೊಂದು ವಾರ್ತೆ ಘಳಿಕೆಯಾಗದ ಪುಸಿ
ಕಲಕಲವಾಗಿ ಬಿಡದಲಾಡುವನೆ ಹೊಲೆಯ
ಘಳಿಗೆ ತೊಲಗದವರ ಬಳಿಯಲ್ಲಿ ನಿರಂತರ
ಸುಳಿದಾಡುವನು ಅನಾಚಾರಿ ಹೊಲೆಯ
ಬಳಗ ಬರಲು ಬಿಟ್ಟು ಒಳಗೆ ಉಂಬುವ ಹೊಲೆಯ
ಕುಲಗೇಡಿಯಾಗಿ ವಂಶಾವಳಿಯ ಕೆಡಿಸುವ ಹೊಲೆಯ

ಮಲಗಿದ್ದವರ ಮೋಸಗೊಳಿಸಿ ಮನೆಯ ಬದುಕ
ಕಳೆದು ಕೊಂಡೊಯ್ವ ಖಳ ಎಂದಿಗೂ ಹೊಲೆಯ
ಇಳೆಯವಲ್ಲಭ ನಮ್ಮ ವಿಜಯ ವಿಠಲನ
ತಿಳಿದು ಪೂಜಿಸದ ಮಲಿನ ಹೊಲೆಯ ||೧||

## ಮಟ್ಟತಾಳ

ಅನ್ನದಾನವನ್ನು ಮಾಡದಿದ್ದವ ಹೊಲೆಯ
ಹೊನ್ನುಗಳಿಸಿ ಸುಮ್ಮನೆ ಕೂಡಿಸುವ ಹೊಲೆಯ
ಕನ್ನಿಕೆಯನು ಮಾರಿಕೊಂಬವ ಹೊಲೆಯ
ಹೆಣ್ಣಿನ ಬಣ್ಣಕೆ ಸೋಲುವನೆ ಹೊಲೆಯ
ತನ್ನ ಪರಾಕ್ರಮ ಪೇಳಿಕೊಂಬುವ ಹೊಲೆಯ
ಮನ್ನಣೆಮಾಡಲು ಹಿಗ್ಗುವನೇ ಹೊಲೆಯ
ಅನ್ನದಗೋಸುಗ ಹೊತ್ತುಕಳೆಯುವ ಹೊಲೆಯ
ಅನ್ಯಜನರನೋಡಿ ಬಳಲುವನೇ ಹೊಲೆಯ
ಉಣ್ಣಲಿಕ್ಕೆಹಿಂದೆ ಹಂಗಿಸುವನು ಹೊಲೆಯ
ಚಿನ್ನಬಿದ್ದನ್ನ ಒಪ್ಪಿಸಿಕೊಡುವನು ಹೊಲೆಯ
ಮಣ್ಣಕೂಡಿಸಿ ಧಾನ್ಯ ಮಾರುವನೇ ಹೊಲೆಯ
ಎನ್ನದು ಎಂತೆಂಬ ಸೊಲ್ಲಿನವನು ಹೊಲೆಯ
ಪನ್ನಂಗಶಯನ ಶ್ರೀ ವಿಜಯವಿಠಲನ
ಸನ್ನುತಿಸಿ ಜ್ಞಾನಪಡೆಯದಿದ್ದವ ಹೊಲೆಯ ||೨||

## ತ್ರಿಪುಟತಾಳ

ಶ್ರವಣಕೇಳುತಲಿದ್ದು ಪೋಗುವನೇ ಹೊಲೆಯ
ಅವಸರದಲಿ ಕಯ್ಯ ಬಿಡುವವನೇ ಹೊಲೆಯ
ನವನೀತ ವಿಕ್ರಯಕೆ ಕೊಡುವ ಭೂಸುರ ಹೊಲೆಯ
ಯವನರಲ್ಲಿ ಸೇವೆಮಾಡುವನೇ ಹೊಲೆಯ
ಕವಿಗಳ ಆವಾಗ ನಿಂದಿಸುವನು ಹೊಲೆಯ

ಸವಿಯೆಂದು ನೀರುಳ್ಳಿ ತಿಂಬುವನೇ ಹೊಲೆಯ
ರವಿಯು ಮೂಡಲು ಮಲಗಿ ಹೊರಳುವನೇ ಹೊಲೆಯ
ಶವಕೇರಿಯೊಳಗಿರಲು ಉಂಬುವನೇ ಹೊಲೆಯ
ಕಿವಿಗೊಟ್ಟು ಕೊಂಡೆಯ ಕೇಳುವನೇ ಹೊಲೆಯ
ಅವನಿಯೊಳಗೆ ಕ್ಷಮೆಯಿಲ್ಲದವನೆ ಹೊಲೆಯ
ಜವನಭೀತಿಗೆ ಎಚ್ಚರಿಯದವನು ಹೊಲೆಯ
ಸವತಿಯಮೇಲೆ ಮಗಳ ಕೊಡುವನು ಹೊಲೆಯ
ಬವರದಲಿ ನೃಪನ ಒಪ್ಪಿಸುವನು ಹೊಲೆಯ
ಗವಹೊಡಿ ಬದುಕು ಮಾಡಿಸುವನು ಹೊಲೆಯ
ಪವಮಾನನುತ ನಮ್ಮ ವಿಜಯವಿಠಲನಂಘ್ರಿ
ನವಭಕುತಿಯಲರ್ಚಿಸದವನು ಹೊಲೆಯ

ಅಟ್ಟತಾಳ

ಕ್ರತುಮಾಡುವಲ್ಲಿಗೆ ಹೋಗದಿದ್ದವ ಹೊಲೆಯ
ಸತಿಪತಿಗೇ ಭೇದ ಇಕ್ಕುವನೇ ಹೊಲೆಯ
ಋತುಕಾಲದಲ್ಲಿ ಬೇರೆಯಿಪ್ಪನು ಹೊಲೆಯ
ಪಿತಮಾತಾ ಗುರುಗಳ ಬೈಯುವನೇ ಹೊಲೆಯ
ಯತಿಗಳ ನಿಂದಿಸುವನು ಹೇಡಿ ಹೊಲೆಯ
ಹಿತಮಾಡಿದವರಿಗೆ ಪ್ರತಿಕೂಲನು ಹೊಲೆಯ
ಮತಿಯಿಂದ ಸಾಲತಂದು ತಿಂದುಹಾಕುವ ಹೊಲೆಯ
ಕ್ಷಿತಿಯೊಳು ಅಪಕೀರ್ತಿ ಹೊತ್ತವನೇ ಹೊಲೆಯ
ರತಿಪತಿಪಿತ ವಿಜಯ ವಿಠಲನ ಬಿಟ್ಟು
ಸತತ ಸಂಸಾರದಿ ಆಸಕ್ತನೇ ಹೊಲೆಯ ॥ ೪ ॥

ಆದಿತಾಳ

ಬಿಸಜನಾಭನ ದಿವಸ ಮಾಡದಿದ್ದವ ಹೊಲೆಯ
ನೊಸಲಲ್ಲಿ ಪುಂಡ್ರವ ಹಚ್ಚದವನು ಹೊಲೆಯ
ಅಶನ ಘಾತಕನಾಗಿ ತಿರುಗುವನೇ ಹೊಲೆಯ

ಪಶುಶಿಶುಗಳ ಒದ್ದು ನೂಕುವನೇ ಹೊಲೆಯ
ಹಸಿದು ಬಂದವರನ್ನು ಕಳುಹುವನೇ ಹೊಲೆಯ
ಸೊಸೆಯ ಮಕ್ಕಳಂತೆ ಅರಿಯದವನು ಹೊಲೆಯ
ಹಸನಾದ ಹರಿಪಾದತೀರ್ಥ ಕೊಳದವ ಹೊಲೆಯ
ಹಸರಿಸಿ ಅನರ್ಪಿತ ಅನ್ನ ಉಂಬುವ ಹೊಲೆಯ
ಅಸುರಾರಿ ವಿಜಯ ವಿಠಲನ ದೈವವೆಂದು
ಕುಶಲದಿ ಹಾಡಿ ಪಾಡದವನೆ ಹೊಲೆಯ ॥ ೫ ॥

ಜತೆ

ಇದರೊಳು ಕ್ರಮವುಂಟು ವಿಜಯ ವಿಠಲನ
ಪದಗಳರ್ಚಿಸದವ ಎಂದೆಂದಿಗೂ ಹೊಲೆಯ ॥ ೧ ॥

## ಹೊಲತಿ ಸುಳಾದಿ

### ಧೃವತಾಳ

ಹೊಲತಿ ಮತ್ತಾವಳು ಹೊಲೆಗೇರಿಯೊಳಗಿಲ್ಲ
ಹೊಲಗೇರಿಯೊಳಗಿದ್ದ ಹೊಲತಿ ಹೊಲತಿಯಲ್ಲ
ಕುಲವೆ ಆವಳಾದರು ಹೇಳಲಳುಕುವಳು
ಒಳಗೆ ಬಂದು ನಮ್ಮೊಳು ತಿರುಗಲಾರಳು
ಕಲಕಲ ನುಡಿಯುತ್ತ ಬಳಿಯಲ್ಲಿ ಒಂದರ
ಘಳಿಗೆ ಬಿಡದಲ್ಲಿದ್ದು ಹೊಲೆಗಲಸುವಳೇ ?
ಕುಲಕೋಟಿಗಳ ಕೇವಲವಾಗಿ ನಿತ್ಯ ಸತ್ಯ
ಸುಲಭವಾಗಿಪ್ಪ ಕರತಳದ ಮುಕ್ತಿ
ಗಳ ದೂರಮಾಡಿ ನರಕಕ್ಕೆಳೆಯುವಳೇ ?
ಇಳೆಯೊಳಗಾಲಾದರೂ ಈ ನಡತೆಯ
ನೆಲೆಯ ತಿಳಿದು ಹೊಲತಿಯೆಂದು ಕರೆಯಿರೊ
ಬಲದೇವ ವಿಜಯ ವಿಠಲನ ಚರಣಕ್ಕೆ
ಒಲಿಯದವಳ ಶುದ್ಧ ಹೊಲತಿಯೆಂದರಿಯಿರೊ ॥ ೧ ॥

## ಮಟ್ಟತಾಳ

ಮಕ್ಕಳ ಬಲುಮೆಯಲಿ ಗಂಡನ ಪಾದದಲಿ
ಭಕ್ತಿಯ ಮಾಡದಲೇ ಇಪ್ಪವಳೇ ಹೊಲತಿ
ರೊಕ್ಕ ಕದ್ದು ಕೊಟ್ಟು ವ್ಯಾಪಾರವ ಮಾಡಿ
ನಿಕ್ಕರುಣಿಯಾಗಿ ತಿರುಗುವಳೇ ಹೊಲತಿ
ನಕ್ಕು ನಾಚಿಕೆಗೆಟ್ಟು ಕಂಡಲ್ಲಿ ಸಂಚರಿಸಿ
ಕಕ್ಕಸಮನದಲ್ಲಿ ಇಪ್ಪವಳೇ ಹೊಲತಿ
ರಕ್ಕಸಾಂತಕ ವಿಜಯ ವಿಠಲ ಶ್ರೀ ಹರಿಯ
ಭಕ್ತರಲಿ ದ್ವೇಷ ಮಾಡುವಳೇ ಹೊಲತಿ ॥ ೧ ॥

## ತ್ರಿಪುಟತಾಳ

ಪಙ್ಕ್ತಿಯೊಳಗೆ ಪ್ರಪಂಚದವಳೆ ಹೊಲತಿ
ಪಂಥವಾಡಿಗಳ ನಿಕ್ಕುವಳೇ ಹೊಲತಿ
ನಿಂತಲ್ಲಿ ಮನೆವಾರ್ತೆ ಹೇಳುವಳೇ ಹೊಲತಿ
ಸಂತತ ಶುಚಿಯಿಲ್ಲದವಳೆ ಹೊಲತಿ
ಶಾಂತಗುಣದಿ ನಿತ್ಯ ನಡೆಯದವಳೆ ಹೊಲತಿ
ಕಂತುಗೇಡಿ ಪತಿಗಂತೆನಿಪಳೆ ಹೊಲತಿ
ಶಾಂತ ಮೂರುತಿ ನಮ್ಮ ವಿಜಯವಿಠಲನಂಘ್ರಿ
ಸಂತತ ಪತಿಯಲ್ಲಿ ನೆನೆಯದವಳೆ ಹೊಲತಿ ॥ ೨ ॥

## ಅಟ್ಟತಾಳ

ಮುದ್ದಿಕ್ಕಿ ಜನರನ್ನು ಕೊಲಿಸುವಳೇ ಹೊಲತಿ
ಇದ್ದದ್ದು ಇಲ್ಲವೆಂದಾಡುವಳೇ ಹೊಲತಿ
ಶುದ್ಧಿಗೈಯದೆ ಪಾಕಕೆಡಿಸುವಳೇ ಹೊಲತಿ
ಸುದ್ದಿಗೆ ಕಿವಿಜೋತು ಪೋಗುವಳೇ ಹೊಲತಿ

ನಿದ್ರೆಯಲ್ಲೇ ಆಸಕ್ತಳು ಮಹಾ ಹೊಲತಿ
ಶುದ್ಧರಂಕೆಯ ಮೀರಿ ನಡೆಯುವಳೇ ಹೊಲತಿ
ಕದ್ದು ಬಾಯ ಸವಿಸವಿಯುವಳೇ ಹೊಲತಿ
ಬುದ್ಧಿ ಸ್ತಿಮಿತವಿಲ್ಲದವಳೆ ಹೊಲತಿ
ಸಿದ್ಧಮಹಿಮಸ್ವಾಮಿ ವಿಜಯವಿಠಲನಲ್ಲಿ
ಸದ್ಭಕ್ತಿಯರಿಯದವಳು ಹೀನ ಹೊಲತಿ || ೪ ||

ಆದಿತಾಳ

ವೈಷ್ಣವಜ್ಞಾನವ ನಂಬದವಳು ಹೊಲತಿ
ಶಿಷ್ಟಾಚಾರವ ಬಿಟ್ಟು ನಡೆಯುವಳೇ ಹೊಲತಿ
ಕೆಟ್ಟಿರುವರ ಸಂಗಡಾಡುವಳೇ ಹೊಲತಿ
ಗುಟ್ಟಾಗಿ ಸಂಸಾರ ಮಾಡದವಳೆ ಹೊಲತಿ
ಹೊಟ್ಟೆಗೋಸುಗ ಕೃತ್ಯಬಿಟ್ಟುಂಬುವಳೇ ಹೊಲತಿ
ಅಟ್ಟುಹಾಕುವೆನೆಂಬ ಸೊಲ್ಲಿನವಳು ಹೊಲತಿ
ನಿಷ್ಠುರವಚನಗಳಾಡುವಳೇ ಹೊಲತಿ
ಪುಟ್ಟಿದ ಮನೆಗಪಕೀರ್ತಿ ತರುವಳೆ ಹೊಲತಿ
ಧಿಟ್ಟಮೂರುತಿ ನಮ್ಮ ವಿಜಯ ವಿಠಲನ
ಪಟ್ಟಣ ಸೇರದ ನಾರಿಯೆ ಹೊಲತಿ || ೫ ||

ಜತೆ

ಸಂತತೆಸಗಿದಕರ್ಮ ತನ್ನನಾಳುವ ಪತಿಯ
ಕಾಂತವಿಜಯ ವಿಠಲಗೆನ್ನದವಳೆ ಹೊಲತಿ || ೧ ||

---

## ಹರಿದಾಸರ ಮಡಿ

ಹಿಂದೂಜನ ಸಾಮಾನ್ಯರಲ್ಲಿ ಯಾವದೊಂದು ಕರ್ಮವನ್ನೂ ಅತ್ಯಂತ ಶುಚಿರ್ಭೂತರಾಗಿ ಮಾಡಬೇಕೆಂದು ಸ್ಮೃತಿ ಪುರಾಣಗಳು ಬಲು ಮಹತ್ವ

ಕೊಟ್ಟು ಸಾರುತ್ತಿವೆಯೆಂಬುದನ್ನು, ನಮ್ಮ ಜನರೆಲ್ಲರೂ ತಿಳಿದಿರುತ್ತಾರೆ. ಪುಣ್ಯಾಶ್ರಮಗಳನ್ನು ಪ್ರವೇಶಿಸಬೇಕಾದರೆ ರಾಜಾಧಿರಾಜರು ಶುಚಿರ್ಭೂತ ರಾಗಿ ಭಯಭಕ್ತಿಗಳಿಂದ ಪಾದಚಾರಿಗಳಾಗಿ ಮಹರ್ಷಿಗಳನ್ನು ಕಾಣುತ್ತಿದ್ದ ರೆಂದು ಚರಿತ್ರೆಗಳು ಹೇಳುತ್ತಿವೆ. ದೇಹ ಗೇಹ ಸಹವಾಸಗಳು ಪವಿತ್ರವಾ ಗಿದ್ದ ವಿನಾ ಪರಮಾತ್ಮನ ನಾಮೋಚ್ಚಾರಣೆ ಮಾಡಲು ಅಧಿಕಾರವಿಲ್ಲವೆಂ ಬಷ್ಟು ಭಯ, ಶಿಷ್ಟ ಜನರಲ್ಲಿ ಅದ್ಯಾಪಿ ಕಂಡು ಬರುತ್ತಿದೆ. ಮಹಾಚಾರ್ಯರು ಗಳು ಶಾಸ್ತ್ರಗ್ರಂಥಗಳನ್ನು ಬರೆದಂತೆ, ಸದಾಚಾರವನ್ನು ಬರೆದಿಟ್ಟಿದ್ದಾರೆ. ಈ ಬಗೆಯ ಶುಚಿಯನ್ನು ಕನ್ನಡದಲ್ಲಿ ಮಡಿಯೆಂದು ಕರೆಯುತ್ತಾರೆ. ಈ ಮಡಿ ಶಬ್ದಾರ್ಥವು ದೀರ್ಘವಾದ ಕಾಲದ ತೆಳೆತಕ್ಕೆ ಸಿಕ್ಕಿ, ಒಬ್ಬೊಬ್ಬರ ಮಡಿ ಒಂದೊಂದು ರೀತಿಯಾಗಿ, ಮಡಿಯೆಲ್ಲಾ ಮೈಲಿಗೆಯಾಗಿ ಬಿಡುತ್ತಿದೆ. ಬಾಹ್ಯ ಮಡಿಯೆಷ್ಟಿದ್ದರೂ ಪರಮಾತ್ಮನ ನಾಮಸ್ಮರಣೆಯಿಂದ ಚಿತ್ತ ಶುದ್ಧಿಯಾದ ಲ್ಲದೆ, ಮಡಿಯಾಗುವುದಿಲ್ಲವೆಂದು ಸಂಧ್ಯಾದಿ ಕರ್ಮಗಳಲ್ಲಿ—

ಅಪವಿತ್ರಃ ಪವಿತ್ರೋವಾ ಸರ್ವಾವಸ್ಥಾಂಗತೋಪಿವಾ
ಯಃಸ್ಮರೇತ್ ಪುಂಡರೀಕಾಕ್ಷಂ ಸಬಾಹ್ಯಾಭ್ಯಂತರಶ್ಶುಚಿಃ ॥ ೧ ॥

ಎಂಬ ಶ್ಲೋಕದಿಂದ ಉದಕ ಪ್ರೋಕ್ಷಣೆಮಾಡಿಕೊಳ್ಳುತ್ತಾರೆ. ಶಾಸ್ತ್ರ ಹೀಗಿ ದ್ದರೆ—ತಾವು ಮಡಿವಂತರು, ತಾವು ಶಿಷ್ಟರು, ಎಂದೆನಿಸಿಕೊಳ್ಳಲು ಜ್ಞಾನ ಲವದುರ್ವಿದಗ್ಧರಾದ ಕೆಲವರು, ಇಲ್ಲದ ಡಾಂಭಿಕಗಳನ್ನು ಮಾಡಿ ಅಜ್ಞ ಜನ ರನ್ನು ವಂಚಿಸುತ್ತಾರೆ. ಶ್ರದ್ಧಾಳು ಸ್ತ್ರೀಯರಿಗೆ ಈ ಭ್ರಾಂತಿ ಮುಸುಕಿತೆಂ ದರೆ, ಅವರ ಮಡಿಯ ಗಡಿಬಿಡಿಯು, ಹಡೆದ ಹುಡುಗ ಹುಡುಗಿಯರಿಗೆಲ್ಲ ಆಪತ್ತಾಗಿ ಪರಿಣಮಿಸಿ ಬಿಡುತ್ತದೆ. ಉಟ್ಟ ಬಟ್ಟೆಗೂ ಸ್ವಯಂ ನಿರ್ಮಲವಾದ ನೀರಿಗೂ ಕಷ್ಟಕಾಲ ಬಂದು ಬಿಡುತ್ತದೆ. ಅಂಥವರ ಚಿತ್ತದಲ್ಲಿ ಪರಮಾತ್ಮನ ಸ್ಥಾನದಲ್ಲಿ ಮೈಲಿಗೆಯೆಂಬ ಮಾಯೆಯು ತಾನೇ ತಾನಾಗಿ ನಿಂತು ಬಿಡುತ್ತದೆ. ಅದರಿಂದ ಕಾಮಕ್ರೋಧಗಳುಂಟಾಗುತ್ತವೆ. ಕೆಲವರಿಗಂತು, ಮಾರ್ಜನ ಮಂತ್ರದಿಂದ ಉದಕ ಪ್ರೋಕ್ಷಣೆಮಾಡಿಕೊಳ್ಳುತ್ತಿರುವಾಗಲೇ, ಗಾಯಿತ್ರೀ ಜಪ ಮಾಡುತ್ತಿರುವಾಗಲೇ, ಇದ್ದಕ್ಕಿದ್ದ ಹಾಗೆ ಮೈಲಿಗೆಯಾಗಿ ಬಿಡುತ್ತದೆ.

ಇಂಥಹ ಸ್ತ್ರೀ ಪುರುಷರ ಅಜ್ಞಾನವನ್ನು ನೋಡಿ, ಪುರಂದರ ದಾಸರಂಥ ಭಾಗವತ ಶಿಖಾಮಣಿಗಳು ಬಹು ವಿನೋದ ಮಾಡಿದ್ದಾರೆ. ಆ ಹಾಡುಗಳು ಕೆಳ ಕಂಡಂತಿವೆ

## ನಾದನಾಮಕ್ರಿಯೆ—ಆದಿತಾಳ

ಹೊಲೆಹಾಡಿ ಮಡಿಯೆಂದು ಮೂರ್ಖರು ಹಾರುತಿ
ಪುರಿಯಲ್ಲಿ ಬಂತೇ ಬಿಕನಾಸಿ ॥ ಪ ॥

ಹುಟ್ಟಿಯೂ ನೀನೇ ವ್ಯಾಲಿಗೆ ನೀನೇ
ಸುಕ್ಕಲಿ ಹಿಡಿದ ಹುಡಿ ಬಿಕನಾಸಿ ॥ ಅ ॥

ಎಲವು ಚರ್ಮ ಮಲಮೂತ್ರ ಗುಂಡಿಯಲ್ಲಿ
ನಲಿಯುತನಿಂತಿಹೆ ಬಿಕನಾಸೀ
ನೆಲೆಗೊಂಡಹನವ ದ್ವಾರದ ಹೊಲೆಯೊಳು
ಮಲೆತು ಕೊಳೆತು ನಿಂತೆ ಬಿಕನಾಸೀ ॥ ೧ ॥

ಹುಟ್ಟಿತ ಸೂತಕ ಸಾಯುತ ಸೂತಕ
ನಟ್ಟನಡುವೆ ನಿಂತೆ ಬಿಕನಾಸಿ
ಬಿಟ್ಟುಬಿಡದೆ ಕಾವೇರಿಲಿ ಮುಳುಗಲು
ಮುಟ್ಟು ಹೋದೀತೇ ಬಿಕನಾಸಿ ॥ ೨ ॥

ಚರ್ಮವ ತೊಳೆದರೆ ಕರ್ಮ ಹೋಗುವದೆ
ಮರ್ಮವ ತಿಳಿಯದ ಬಿಕನಾಸಿ
ಧರ್ಮನಯ್ಯ ಶ್ರೀ ಪುರಂದರ ವಿಠಲನ
ನಿರ್ಮಲ ಮನದಲ್ಲಿ ನೆನೆ ಬಿಕನಾಸಿ ॥ ೩ ॥

---

ನೀರು ಕಂಡ ಬಳಿಯಲ್ಲೆಲ್ಲಾ ಮುಳುಗುವ ಭ್ರಾಂತರನ್ನು ನೋಡಿದ್ದು:—

ಕಲ್ಯಾಣಿ ಝಂಪೆ

ತನುವ ನೀರೊಳಗದ್ದಿ ಫಲವೇನು
ಮನದಲ್ಲಿ ದೃಢಭಕ್ತಿಯಿಲ್ಲದ ಮನುಜನು ॥ ಪ ॥

ಧಾನಧರ್ಮಂಗಳ ಮಾಡುವದೇ ಸ್ನಾನ
ಜ್ಞಾನ ತತ್ವಂಗಳ ತಿಳಿವದೆ ಸ್ನಾನ
ಹೀನ ಪಾಪಂಗಳ ಬಿಡುವದೆ ಸ್ನಾನ
ಧ್ಯಾನದಿ ಮಾಧವನನೋಳ್ಪದೆ ಸ್ನಾನ ॥ ೧ ॥

ಗುರುಗಳ ಪಾದದರ್ಶನವೇ ಸ್ನಾನ
ಹಿರಿಯರ ಸೇವೆಮಾಡುವದೇ ಸ್ನಾನ
ಕರೆದು ಅನ್ನವನಿಕ್ಕುವದೊಂದು ಸ್ನಾನ
ನರಹರಿ ಚರಣ ನೆರೆನಂಬುವದೇ ಸ್ನಾನ ॥ ೨ ॥

ದುಷ್ಟರ ಸಂಗವ ಬಿಡುವುದು ಸ್ನಾನ
ಶಿಷ್ಟರ ಸಂಗದಲಿರುವುದು ಸ್ನಾನ
ಸೃಷ್ಟಿಯೊಳಗೆ ಶ್ರೀ ಪುರಂದರ ವಿಠಲನ
ಮುಟ್ಟಿ ಭಜಿಸಿದರೆ ವಿಠಲ ಸ್ನಾನ ॥ ೩ ॥

ಇದೇ ಅರ್ಥವನ್ನು ಮನಸ್ಸಿನಲ್ಲಿಟ್ಟುಕೊಂಡು ತತ್ವಸುವಾಲಿಯಲ್ಲಿ ಜಗನ್ನಾಥ ದಾಸರು :—

ಜಲದೊಳಗೆ ಮಿಂದು ನಿರ್ಮಲರಾದೆವೆನುತ । ತ
ಮ್ಮೊಳು ತಾವೇ ಹಿಗ್ಗಿ ಸುತಿಸುವರು । ಸುಖಿಸುವರು
ಪರಮ ಮಂಗಳಮೂರ್ತಿ ನಿನ್ನ ನೆನೆಯದೆ ॥ ೩೨ ॥

ಜಡಭೂತ ಜಲ ಜನರ ಮಡಿಮಾಡಬಲ್ಲದೇ
ಜಲಧಿಮಂದಿರನಾ ಶುಭನಾಮ ॥ ಶುಭನಾಮ
ಮೈಲಿಗೆಯ ಕೆಡಿಸಿ ಮಂಗಳವ ಕೊಡದೇನೋ ॥ ೩೮ ॥

ಓಡಿಹೋಗುವ ಮಡಿಯಮಾಡಿ ದಣಿಯಲಿ ಬೇಡ
ನೋಡು ಸರ್ವತ್ರ ಹರಿರೂಪ ॥ ಹರಿರೂಪ ನೋಡಿಕೊಂ
ಡಾಡು ಮನವುಬ್ಬಿ ಸುಖಿಸುತ್ತ ॥ ೩೯ ॥

ಮಡಿಯ ಸಾರಂಶವಿಷ್ಟು :— ಯಾವದು ಮಡಿಯೋ ಅದೆಂದಿಗೂ ಮೈಲಿಗೆಯಾಗುವುದಿಲ್ಲ. ಯಾವದು ಮೈಲಿಗೆಯೋ ಅದೆಂದಿಗೂ ಮಡಿಯಾಗುವುದಿಲ್ಲ.

---

## ಹರಿದಾಸರ ವೃತ್ತನಾಮದ ಒಂದು ಮಾದರಿ

### ಪದ — ಅಟ್ಟತಾಳ

ರಕ್ಷಿಸು ವೆಂಕಟಗಿರಿರಾಜ । ರವಿಶತತೇಜ । ಆಶ್ರಿತಕಲ್ಪಭೂಜ ॥ ಪ ॥

ವೃತ್ತ :—

ಶ್ರೀಮನ್ ಶೇಷಧರಾ ಧರಾಧಿಪ ಸದಾ ಶ್ರೀಮತ್ಸುಸೌಖ್ಯಪ್ರದಾ
ಶ್ರೀ ಮಾಯಾಜಯ ಶಾಂತಿ ಕಾಂತಸ್ವರತಾ ಶ್ರೀ ವಿಷ್ಣು ಸಿದ್ಧೇಶ್ವರ
ಶ್ರೀಮತ್ಪದ್ಮಜ ಪಾರ್ವತೀಶವಿನುತ ಶ್ರೀ ಪಾದಪದ್ಮದ್ವಯ
ಸ್ವಾಮಿನ್ದೇಹಿ ಸದಾ ತ್ವದೀಯ ಭಜನಂ ಶ್ರೀಮಂತತ್ವಂ ಪಾಹಿಮಾಂ ॥ ೧ ॥

ನಾಮ :—

ಹಾಟಕ ಮುಖರಿ ಸರಿತ್ತೀರ । ಕೃತಮಂದಿರ । ವೈಕುಂಠಾಗಾರ
ಕೋಟಿ ಮನ್ಮಥ ಚಂದ್ರಭಾಸ್ಕರ ದ್ಯುತಿರಸ್ಕರ । ಶ್ರಿತಮೋಹನಾಕಾರ
ಕೂಟಸ್ಥ ಅಖಿಳಲೋಕಾಧಾರ । ಸಂತಸಪರಾ । ತ್ಪರಮನೋಹಾರ
ಕೈಟಭ ಮುಖಖಳ ಜಲಧರ । ಚಂಡಸಮೀರ । ದೀನಜನಮಂದಾರ ॥ ೨ ॥

ವೃತ್ತ :—

ದೇಶಕಾಲಗುಣಾದ್ಯತೀತ ಅನಘಾ ದೇವೇಂದ್ರ ಸಂಸೇವಿತ
ದಾಶಾರ್ಹಾದಶರೂಪ ರೂಪ ಅಜಿತಾ ದಾಮೋದರಾ ಮಾಧವಾ
ಕಾಶೀಜಾಧವ ಚಿಚ್ಚಕೋರ ಉಡುಪಾ ಕಾಳೀ ಫಣಾಮರ್ದನ
ಶ್ರೀಶಾಗೀಶ ಅಹೀಶ ಈಶವಿನುತಾ ಶ್ರೀವಿಷ್ಣು ನೀಪಾಲಿಸೋ ॥ ೨ ॥

ನಾಮ :—

ವಟುವೇಷಧರಿಸಿ ರಕ್ಕಸವೃಂದ । ವಂಚಿಸಿನಿಂದ। ಸನ್ನುತ ಮುನಿವೃಂದ
ನಟನೆಮಾಡುತ ಕುಂಡದೊಳಗಿಂದ । ನಲಿಯುತ ಬಂದ। ಹವಿರ್ಭೋಕ್ತೃ ಆನಂದ
ವಟದೆಲೆಯೊಳು ಮಲಗಿದಾನಂದ । ನಂದನಕಂದ । ಕಾರಣಗೋವಿಂದ
ಕುಟಿಲಮತಿ ಖಳಕುಲಕೊಂದ। ಧೀರ ಮುಚುಕುಂದ । ವರದನೆ ಮುಕುಂದ ॥ ೨ ॥

ವೃತ್ತ :—

ನಿತ್ಯಾನಂದ ಮಹೋದಧೇ ನಿರೂಪಮಾ ನಿರ್ದೋಷ ಜ್ಞಾನಾತ್ಮಕ
ಸತ್ಯಾವಲ್ಲಭ ಸಾತ್ವತಾಂ ಕುಲಪತೇ ಸಾಯುಜ್ಯ ಸಾರೂಪ್ಯದ
ಸೂತ್ರಾಧಾರಕ ಹೃದ್ಗುಹಾಲಯ ಸದಾ ಸೂಷುಪ್ತಿ ಜಾಗ್ರತ್ಪ್ರದ
ಸತ್ಯೈಶ್ವರ್ಯ ಬಲಾದಿ ಸರ್ವಭರಿತಾ ಸರ್ವಾಪರೋಕ್ಷೀಸದಾ ॥ ೩ ॥

ನಾಮ :—

ವರದ ಅಭಯಚಕ್ರ ದರಧರ । ಚತುಷ್ಟಯಕರ । ಉರಪೀನ ವಿಸ್ತಾರ
ಸರಿಗೆಪದಕವೊಪ್ಪೆ ಕಂಧರ । ಕರಸಿಂಧೂರ । ಕರವೋಲ್ವಕೇಯೂರ
ಬೆರಳಲ್ಲಿ ಮಾಣಿಕ್ಯದುಂಗುರ । ತೋಳಬಂಧುರ । ಸಾಲಿಗ್ರಾಮದ ಹಾರ
ಶಿರಿವತ್ಸಾಂಕಿತನಾಭಿ ಗಂಭೀರ । ಜಗದುದ್ಧಾರ ।ಸರ್ವಭುವನದುದ್ಧಾರ ॥ ೩ ॥

ವೃತ್ತ :—

ಲಕ್ಷ್ಮೀವಕ್ಷ ಸುಕುಂಕುಮಾಂಕಿತ ಪದ । ಲಕ್ಷ್ಮೀವಿಲಾಸಾಸ್ಪದ
ಲಕ್ಷ್ಮೀಬಾಹುಲತಾಶ್ರಯ । ಭುಜಯುಗ ಲಕ್ಷ್ಮ್ಯಾಸದಾಲಿಂಗಿತ

ಲಕ್ಷ್ಮೀಅಕ್ಷಸುಪದ್ಮ ಪದ್ಮಿನಿಪ್ರಿಯ । ಲಕ್ಷ್ಮೀಮನೋನಾಯಕ
ಲಕ್ಷ್ಮೀಚಿತ್ತ ಚಕೋರ ಪೂರ್ಣ ಉಡುಪ। ಲಕ್ಷ್ಮೀಶ ತ್ವಂಪಾಹಿಮಾಂ ॥ ೪ ॥

ನಾಮ :—

ಸುಖಮಯ ಮಾನಮಂದರಧರ । ಧರಾಮನೋಹರ । ನರಮೃಗ ಆಕಾರ
ನಖದಿಂದ ಬೊಮ್ಮಾಂಡ ಶಿಖರ । ಭೇದಿಸಿದ ಧೀರ । ರಾಜಕುಲಧ್ವಂಸಕರ
ಮುಖವ ಕಾಯ್ದ ಮಹನ್ನೃಪವರ । ಗೋಪೀಜನ ಜಾರ । ನಾನಾ ಲೀಲಾ
ಸಾಕಾರ
ಮುಖ ... ॥ ೪ ॥

ವೃತ್ತ :—

ರಂಗಾನಂಗಪಿತಾ ರಜಸ್ತಮ ಹರಾ ರಾಜೀವ ಫುಲ್ಲೇಕ್ಷಣಾ
ಶೃಂಗಾರಾಂಬರಧಾರ ನೂಪುರಲಸತ್ಕಾಂಚೀಲತಾ ಶೋಭಿತಾ
ಸಂಗೀತಪ್ರಿಯಸಾರ ಸನ್ಮುನಿ ಜನ ಸಂಗಾ ಅಸಂಗಾ ಅಜಾ
ಗಂಗಾತಾತ ವಿಹಂಗನಾಥಗ ಕೃಪಾ । ತುಂಗಾ ಶುಭಾಂಗಾನಾಮೋ ॥ ೫ ॥

ನಾಮ :—

ಚಟಿಯಿಲ್ಲದಲೆ ನಿನ್ನ ಪಾದವ । ನಂಬಿದರಭವ । ಸಿಂಧುವಿನ ಪ್ರಮಾಣವ
ಕಟಿಯಲ್ಲಿ ಕರವಿಟ್ಟು ತೋರುವ । ಭಕ್ತಕೈರವ । ಸ್ತೋಮ ಸೋಮನೆನಿಸುವ
ಕಟಿತ ಕೋಟಿ ಕೋಟಿ ಪ್ರಭಾವ। ಧಿಕ್ಕರಿಸುವ। ಮುದ್ದು ಮುಕುಟ ಕುಂಡಲವ
ಸ್ಫುಟಿತಹಾಟಕ ಮಣಿ ಕಟಕವ । ಹಾರಪದಕವ । ನಿಟ್ಟು ಮೆರೆವ ಶ್ರೀದೇವ
॥ ೫ ॥

ವೃತ್ತ :—

ನಾನಾ ಜನ್ಮದಿ ಕಾಯವಾಚಮನಸಾ ಎನ್ನಿಂದಲೀ ಮಾಳ್ಪದು
ಜ್ಞಾನಾಜ್ಞಾನಾ ಕೃತಾಖಿಳ ಕ್ರಿಯಗಳು ನಿನ್ನಿಂದ ಪ್ರೀತ್ಯಾಗಲಿ
ನಾನಾದ್ರವ್ಯದಿ ಕಾಧ್ಯರೂಪ ಗುಣದಿ ಸರ್ವತ್ರ ಚಿಂಚಕ್ರಿಯಾ
ಜ್ಞಾನಾನಂದ ... ನೀನು ಪೊರೆಯೋ ಪ್ರಾಣೇಶ ನಾರಾಯಣ ॥ ೬ ॥

ನಾಮ :—

ವಿಶ್ವತೈಜಸ ಪ್ರಾಜ್ಞತುರ್ಯಾತ್ಮ । ಅಂತರಾತುಮ । ಪರಮಾತ್ಮಜ್ಞಾನಾತ್ಮಾ
ವಿಶ್ವನಾಟಕ ಗುಣಗಣಧಾಮ । ಸಂತತಸಾಮ । ವಂದ್ಯನೆ ಸಾರ್ವಭೌಮ
ವಿಶ್ವತೋಮುಖ ರುಗ್ಯಜುಸ್ಸಾಮ । ಆಗಮಸ್ತೋಮ । ಪ್ರತಿಪಾದ್ಯತ್ರಿಧಾಮ
ವಿಶ್ವಾಸದಿಂದಲಿ ತವನಾಮ । ಭಜನೆಯ ಕಾಮ । ಎನಗೀಯೋ
ಶ್ರೀರಾಮ ॥ ೬ ॥

ವೃತ್ತ :—

ಮಂದಾಹಾಸ ಮುಖೇಂದು ಸಂದರುಶನಾದಿಂದಾಘ ಬೆಂದಿಪ್ಪುದೋ
ಒಂದೇ ವಂದನಮಾಡಲಾಕ್ಷಣ ಸುಖಾಸಂದೋಹ ಸಂದಪ್ಪುದೋ
ನಿಂದೂ ಅರ್ಚಿಸಿ ಸ್ತೋತ್ರ ಮಾಳ್ಪನು ಮಹಾ ನಂದಾವನೂ ಬಲ್ಲನೋ
ತಂದೇ ನಿನ್ನಯ ಸುಂದರಾಂಘ್ರಿ ಸತತಾ ಪೊಂದಿಪ್ಪುದೇ ಪಾಲಿಸೋ ॥ ೭ ॥

ನಾಮ :—

ಮಾಡಲರಿಯೆ ಸುಸಾಧನವನು । ದುಷ್ಟಚಿತ್ತನು । ಪಾಪಕರ್ಮಾದಿರತನು ।
ಬೇಡುವೆ ಬಹುವಿಧ ಸುಖವನು । ಆಶಾಬದ್ಧನು । ಇದಕೆ ಗತಿಯೇನು
ಬೇಡಿದುದೆಲ್ಲ ಕೊಡುವೆ ನೀನು । ಎಂದು ಬಂದೆನು । ಆಶ್ರಿತ ಸುರಧೇನು
ಬೇಡದಂದದಿ ಮಾಳ್ಪ ಧೊರೆ ನೀನು । ಇದೇ ವರವನು । ನೀಡಬಹುದಯ್ಯ
ನೀನು ॥ ೭ ॥

ವೃತ್ತ :—

ಅನ್ಯಾವಾರ್ತೆಗೆ ಪೋಗಲೀಸದೆ ಮನಾ ನಿನ್ನಂಘ್ರಿಯೊಳ್ ನಿಲ್ಲಿಸೋ
ನಿನ್ನಾವಾರ್ತೆಯ ಕೇಳಿಸಯ್ಯ ಕಿವಿಗೇ ನಿನ್ನನ್ನೆ ಕೊಂಡಾಡಿಸೋ
ನಿನ್ನಾ ಮೂರ್ತಿಯ ತೋರಿಸಯ್ಯ ಮನಕೇ ನಿನ್ನರ್ಚನೇ ಮಾಡಿಸೋ
ನಿನ್ನಂತಾಗಲಿ ಸರ್ವ ಇಂದ್ರಿಯಗಳು ನಿನ್ನಾಳ್ಗಳೊಳ್ ಕೂಡಿಸೋ ॥ ೮ ॥

ನಾಮ :—

ಭಜಿಪ ಜನರಿಗೆ ಭಾಗ್ಯೋದಯಾ । ಭಾಗವತಧ್ಯೇಯ । ಶುಭಗುಣಗಣನಿಲಯ

ವಿಜಯಸಾರಥಿವೀತಾಖಿಳ ಹೇಯಾ | ನಿರ್ಜಿತಮಾಯಾ | ವಿಪ್ರಗೋಸುರ
ಪ್ರಿಯಾ
ತ್ರಿಗಜದೀಕ್ಷನೆ ಅಪ್ರಾಕೃತಕಾಯಾ ! ಕವಿಜನಗೇಯಾ | ವೆಂಕಟಗಿರಿರಾಯಾ
ನಿಜಪುರ ಗೋಪಾಲ ವಿಠಲಕೈಯ್ಯಾ | ನಮೋನಮೋ ಜೀಯಾ | ಬೇಗಪಿಡಿ
ಎನ್ನಕೈಯ್ಯಾ || ೮ ||

---

## ಪುಷ್ಪಗಳ ಸಂವಾದ.

ಪರಮಾತ್ಮನ ಪ್ರೇಮರಸದಲ್ಲಿ ಸಮರಸವಾದ ಮನಸ್ಸನ್ನು ಸಮಸ್ಥಿತಿಗೆ ನಿಲ್ಲಿಸಿಕೊಂಡು, ಪುಷ್ಪಗಳ ಸರಸ ರಸದೊಡನೆ ದಣುವಾರಿಸಿಕೊಳ್ಳಬೇಕೆಂದರೆ ಹಿಂದೆ ಗಯ ಚರಿತ್ರೆಯಿಂದ ತಿಳಿಸಿಕೊಟ್ಟ ಪದ್ಯಸರಣಿಯಲ್ಲಿ ಪುಷ್ಪಗಳ ಸಲ್ಲಾಪ ಹೀಗಿದೆ. ಅದು ಶೃಂಗಾರಮಯವಾಗಿದೆ. ಶೃಂಗಾರ ರಸವನ್ನು ಎಲ್ಲಾದರೂ ಒಮ್ಮೆಗಾದರೂ ತರದಿದ್ದರೆ ಕವಿಗಳು ಕಾವ್ಯವನ್ನೊಪ್ಪುವುದಿಲ್ಲ. ಶಂಕರ ಮಧ್ವರಂಥಾ ಸನ್ಯಾಸಿಗಳ ವಿಜಯ ಚರಿತ್ರೆ ಬರೆದ ವಿದ್ಯಾರಣ್ಯರೂ ಪಂಡಿತಾಚಾರ್ಯರೂ ಸಹ, ಇದ್ದದ್ದರಲ್ಲಿ ಜಾಣಿಮಾಡಿಕೊಂಡು ಶೃಂಗಾರ ರಸವನ್ನು ಸೇರಿಸಿ ಬಿಟ್ಟಿದ್ದಾರೆ. ಶೃಂಗಾರವಿರದಿದ್ದರೆ ಮಹಾಕಾವ್ಯವೆನಿಸುವುದಿಲ್ಲವೆಂಬ ಭಯ ಅವರನ್ನೂ ಬಿಟ್ಟಿಲ್ಲ ಕನ್ನಡ ಗಯ ಚರಿತ್ರಕಾರರಾದರೂ ಸಂಪ್ರದಾಯ ಶರಣರಾಗಿ ಪುಷ್ಪಗಳ ಸಂವಾದದಲ್ಲಿ ಶೃಂಗಾರ ರಸವನ್ನೂ ತೂರಿಸಿ ಬಿಟ್ಟಿದ್ದಾರೆ. ಆ ಪದ್ಯಗಳು ಕೆಳಕಂಡಂತಿವೆ.

ವಾರಿಯಿಹ ಘನ ಮಡುವ ಬಿದ್ದು ವಿ
ಕಾರವಿಲ್ಲದೆ ಇನನುದಯವನು
ಹಾರಯಿಸಿಕೊಂಡಿದ್ದು ಹಗಲಲಿ ಅಳಿಯನೊಡಗೂಡಿ
ನೀರನಂದದಿ ಮಧುವ ಸವಿದು
ಬ್ಬೇರಿ ಚೀರಿದರಳಿಯ ಕೃತ್ಯಕೆ
ಊರೆರಿಯೆ ನಾಚದಲೆ ರಾಜನ ಶಾಸನಕೆ ಶಿರವ || ೧ ||
ಭೂರಿ ಭಯದಲಿ ಬಾಗಿರಜನೀ
ನಾರಿಯಲಿ ಚಿಂತಿಸುತ ಪ್ರತಿದಿನ
ಮಾರನುಪಟಳ ಕಳುಕುತಿಹ ಜಾರೆಯರ ತೆರನಂತೆ

ನೀರನಾಶ್ರಯಗೊಂಡು ಜೀವಿಸಿ
ತೋರೆ ಮಧ್ಯವ ಸಕಲ ಜನರಿಗೆ
ಮಾರಭಂಗನ ಗಣಿಸದಿರೆ ತಾವರೆಯೆನಿಪೆ ಲೋಕ ॥ ೫೦ ॥

ತಾ॥ ಈ ಪದ್ಯಗಳಿಗೆ ಅಳಿ ಅಂದರೆ ಭ್ರಮರ ಪರವಾಗಿ ಒಂದರ್ಥ. ಅಳಿಯನ ಪರವಾಗಿ ಒಂದರ್ಥ. ಅಳಿಯನ ಪರವಾದ ತಾತ್ಪರ್ಯ ಬರೆದರೆ "ಅಳಿ"ಯ ಪರವಾದ ಅರ್ಥ ತಾನೇ ಆಗುತ್ತದೆ. ತಾವರೆಗಳು ಆಳವಾದ ಮಡುವಿನಲ್ಲಿ ಬಿದ್ದರೂ, ವಿಕಾರ (ನಾಚಿಕೆ) ವಿಲ್ಲದೆ ಸೂರ್ಯೋದಯವನ್ನೇ ಕಾಯುತ್ತಾ, ಉದಯವಾದೊಡನೆ ಹಾಡೇ ಹಗಲಿನಲ್ಲಿ ನೀರಲಂದದಿ (ಗಂಡನಂತೆ) ಅಂದರೆ ಗಂಡನೊಡನೆ ಬೆರೆಯುವಂತೆ ಅಳಿಯನೊಡಗೂಡಿ (ಅಳಿಯನ ಸಹವಾಸಮಾಡಿ) ಅವನು ಊರೆಲ್ಲಾ ಕೇಳುವಂತೆ ಮಧುಪಾನ (ಅಧರಮಧು) ಮಾಡಿ ಚೀರಿದರೂ ನಾಚಿಕೆಯಿಲ್ಲದೆ, ರಾಜಾಜ್ಞೆಗೆ (ರಾಜನೆಂದರೆ ದೊರೆ ಮತ್ತು ಚಂದ್ರ) ತಲೆಬಾಗಿ (ತಲೆತಗ್ಗಿಸಿ ಮೊಗ್ಗಾಗಿ) ನೀರಿನಾಶ್ರಯ (ನೀರಿನ ಆಶ್ರಯ ಮತ್ತು ಗಂಡನ ಆಶ್ರಯ) ಗೊಂಡಿದ್ದರೂ ಜಾರ ಸ್ತ್ರೀಯರಂತೆ ಮಾರನುಪಟಳಕ್ಕೊಳಗಾಗಿ ತನು ಮಧ್ಯವನ್ನೆಲ್ಲರಿಗೂ ತೋರಿಸುತ್ತಿರುವ ತಾವರೆಗಳಾದ ನೀವು ತಾವ್+ಅರೆಗಳಲ್ಲವೇ ಎಂದು ಕೇತಕಿಗಳು ಮೂದಲಿಸುತ್ತವೆ.

ದೂರು ಹೊತ್ತಿದಿರಿನಲಿ ಜೀವಿಸಿ
ಹೋರುವೀ ಕುಸುಮಾಳಿ ವರ್ಗಕೆ
ಸಾರಲತಿ ಕಂಟಕಿಗಳಾವೆಂದೆನುತ ನಿಶ್ಚೈಸಿ
ಸೇರದಲೆ ಮಧ್ಯದೊಳು ಮಿಗೆತಳ
ವಾರರಂದದಿ ಸುತ್ತುಮುತ್ತಿದು
ಚೋರಳನು ಕಾದಿಪ್ಪ ತೆರನಂದದಲಿ ವನವನವ ॥ ೫೧ ॥

ಕೋರಿ ಸಂರಕ್ಷಿಸುವ ಕಾರಣ
ಧೀರರೆಲ್ಲರು ಕೇತಕಿಗಳೆಂ
ದಾರಿಪುವ್ರಜ ವಿಜಯಲಕ್ಷ್ಮೀರಮಣನಂಘ್ರಿಯಲಿ

ಪಾರಮಾರ್ಥಿಕದಿಂದಲೆಮ್ಮನು
ಸಾರಿಸಾರಿಗೆ ಅರ್ಪಿಸುವರೆಂ
ದೇರಿಸೊಂಪಿಲಿ ಸರಸಿಜವ ಮೂದಲಿಪತೆರದಂತೆ ॥ ೫೨ ॥

ತೋರುತಿಹ ಕೇತಕಿಗಳನು ಕಂ
ಡಾರಮಾಗಾರಾಬ್ಜ ಮುಖಕೆಂ
ಪೇರಿ ಮಂದಸ್ಮಿತದಲೆಲೆ ನಿಸ್ಸಾರ ಹೃದಯರಿರ
ಜೇರಿಸೈರಂತರದಿ ಪರರನು
ಬಾರಿಬಾರಿಗೆ ದೂಷಿಸುವ ಕಡು
ಘೋರಪಾತಕಿ ಕಂಟಕಿಗಳಿವರಳಿ ನಿಕರಕೆಂದೇ ॥ ೫೩ ॥

ಕ್ರೂರರುಗಳನುವರಿದು ಗ್ರಾಮಾ
ದ್ದೂರಗೈಸುವ ತೆರದಿ ನಿಮ್ಮನು
ಜಾರಿಸಿಹರುದ್ಯಾನ ಬಾಹಿಷ್ಕೃತರೆನಿಸಿ ನಿರುತ
ತಾರದಲೆ ಮನಕದನು ನಿಂದಿಸಿ
ದೂರಿಗೆಳಹುವ ಪಾಪಕೋಸುಗ
ತೋರುತಿಹ ಗರಿಗಳನು ಮುರಿಮುರಿದೈಸೆ ನಿಮ್ಮವನು ॥ ೫೪ ॥

ನಾರಿಯರು ತದನಂತರದಿ ಕರ
ಪಾರಿಜಗಳಿಂ ಸಿಗಿದು ಕೇಶದ
ಲೋರಣದಿ ಬಿಗಿಬಿಗಿದು ಚೋರರ ತೆರದಿ ಬಂಧಿಪರು
ಊರುವಿಯೊಳಿಹ ಕುಸುಮಜಾತಿಯ
ಲಾರಿಗೀಪರಿ ಭವಣೆಯಿಲ್ಲ ನಿ
ವಾರಿಸುವರಾರಕಟ ಹಿತವರ ಕಾಣೆವವನಿಯಲಿ ॥ ೫೫ ॥

ಇನನುದಯವತಿ ಪ್ರಿಯವೆಮಗೆ ಕೇಳ್
ಘನವು ನಿರ್ಮಲ ಹೃದದಲಾಶ್ರಯ
ಜನುಮ ತಾವರೆಯಾಗಲುದಕದಿ ಮುಳುಗದಿದ್ದ ಪೆವೇ

ಅನುದಿನಳಿಯನು ಪುತ್ರನಂತಿರೆ
ಮನವೊಲಿದು ಪೋಷಿಸೆವು ಸಹಿಸದೆ
ಕೊನರಿಗಳಿಹಿದರಿಂದ ಫಲ ನಿಮಗೇನು ಬಹುದಿನ್ನು ॥ ೫೬ ॥

ಶ್ರೀಯೆಮಗೆ ಪ್ರಿಯಳೀ ಚತುರ್ಮುಖ
ರಾಯನಿಜಸುತ ನೆಮ್ಮ ಸಾಮ್ಯವು
ಪ್ರೀಯ ಮೂಲೋಕದೊಳು ಮುಖಲೋಚನಂಗಳಿಗೆ
ಶ್ರೀಯ ಮಿಗಿಲೊಪ್ಪುವದಿದೆಲೆ ಬಿಲ
ಶೇಯವಾಸಾಸ್ಪದರೆ ಕೇಳೆಂ
ದಾಯತದ ಉತ್ತರಕೊಡುವವೋಲ್ ಕಮಲವೊಪ್ಪಿದವು ॥ ೫೭ ॥

ಈ ಏಳು ಪದ್ಯಗಳ ಅರ್ಥ ಸುಲಭವಾಗಿಯೇ ಇದೆ. ೫೬ನೇ ಪದ್ಯದಲ್ಲಿ "ಜನುಮ ತಾವರೆಯಾಗಲು" ಎಂಬಲ್ಲಿ ತಾವ್ ಅರೆಯಾಗಲು ಎಂದು ಅರ್ಥ ಮಾಡಿಕೊಳ್ಳಬೇಕು. ಬಿಲ ಶೇಯವಾಸಾಸ್ಪದರು ಅಂದರೆ ಸರ್ಪಗಳ ವಾಸಕ್ಕೆ ಆಸ್ಪದ ಕೊಟ್ಟಿರುವರು ಎಂದರ್ಥ. ಕೇತಿಕೆಯಲ್ಲಿ ಯಾವಾಗಲೂ ಸರ್ಪಗಳು ವಾಸನೆಗಾಗಿ ಸೇರುವವೆಂಬುದು ಪ್ರಸಿದ್ಧ ವಿಷಯ.

## ಹರಿದಾಸ ಸಾಹಿತ್ಯದಲ್ಲಿ ನಗರ ವರ್ಣನೆ

ಹೈದರಲ್ಲಿ ಟಿಪ್ಪೂ ಸುಲ್ತಾನರು ಮೈಸೂರು ರಾಜ್ಯವನ್ನಾಕ್ರಮಿಸಿ, ಅರಮನೆ ಕೋಟೆಕೊತ್ತಲಗಳನ್ನು ನಾಶಮಾಡಿ, ಶ್ರೀರಂಗ ಪಟ್ಟಣದಲ್ಲಿ ರಾಜ್ಯವಾಳುತ್ತಿದ್ದರು. ಬ್ರಿಟಿಷರು ಟಿಪ್ಪುವನ್ನು ಕೊಂದು ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ರಾಜ್ಯಾಭಿಷೇಕ ಮಾಡಿದನಂತರ, ಪುನಃ ಮೈಸೂರು ರಾಜಧಾನಿಯಾಯಿತು. ದಿವಾನ ಪೂರ್ಣಯ್ಯನವರು ಪ್ರಸಿದ್ಧ ಶಿಲ್ಪಿಗಳಿಂದ ಭವ್ಯವಾದ ಅರಮನೆಯನ್ನು ಕಟ್ಟಿಸಿ, ರಾಜ್ಯವನ್ನು ರೂಢಿಸಿ, ಬೊಕ್ಕಸದಲ್ಲಿ ಎರಡುಕೋಟಿ ದ್ರವ್ಯವನ್ನು ಶೇಖರಿಸಿ, ರಾಜಸೇವೆಯಿಂದ ೧೮೧೧ರಲ್ಲಿ ನಿವೃತ್ತರಾದರು. ೧೮೩೧ರ ವರೆವಿಗೆ ಕೃಷ್ಣ ಪ್ರಭುಗಳು ಸ್ವಯಂ ರಾಜ್ಯಭಾರಮಾಡಿ, ಕಾರಣಾಂತರದಿಂದ ಆಡಳಿತವನ್ನು ಬ್ರಿಟಿಷರಿಗೊಪ್ಪಿಸಿದರು. ಆ ಕಾಲದಲ್ಲಿ ಮಹಾ

ರಾಜರು ವಾನಪ್ರಸ್ಥಾಶ್ರಮಿಗಳಂತಿದ್ದು, ಶಾಸ್ತ್ರವಿಚಾರ ಕಾವ್ಯಾಲಾಪನೆಗಳಲ್ಲಿ ಆಸಕ್ತರಾಗಿದ್ದರು. ಮುಮ್ಮಡಿಯವರು ಸಂಸ್ಕೃತ ಕವಿಗಳಿಗೆ ಆಶ್ರಯ ಕೊಟ್ಟಂತೆ ಕನ್ನಡ ಕವಿಗಳಿಗೂ ಆಶ್ರಯ ಕೊಟ್ಟು, ಸ್ವಯಂ ಮಹಾಭಾರತವನ್ನು ಕನ್ನಡ ವಚನರೂಪವಾಗಿ ಭಾಷಾಂತರ ಮಾಡಿದರು. ದಿನವೂ ಹೊಸ ಹೊಸ ಕವಿತೆಗಳು ಪ್ರಭುಗಳ ವಿಮರ್ಶೆಗೆ ಬರುತ್ತಿದ್ದವು. ಆ ಸಮಯದಲ್ಲಿ ಪ್ರಭುಗಳು ನಮ್ಮ ಅರಮನೆಯನ್ನು ವರ್ಣಿಸಬಲ್ಲಿರಾ, ಎಂದು ಕವಿಗಳನ್ನು ಕೇಳಿದರು. ಕವಿಗಳು ಕ್ಲಿಷ್ಟವಾದ ಶೈಲಿಯಲ್ಲಿ ವೃತ್ತ, ಕಂದ, ವಚನಗಳಾಗಿ ಬರೆದು ತಂದು ಪ್ರಭುಗಳಿಗೊಪ್ಪಿಸಿದರು. ಪ್ರಭುಗಳು, ತುಂಬಾ ಶ್ರಮ ಪಟ್ಟಿದ್ದೀರಿ, ಆದರೆ ಇದನ್ನು ಬಾಯಿಪಾಠಮಾಡಿ ಹೇಳುವರ್ಯಾರು ? ಅರ್ಥವಾಗುತ್ತದು ಹೇಗೆ ? ಹರಿದಾಸ ಶೈಲಿಯಲ್ಲಿ ಲಾವಣಿಯಾಗಿ ಬರೆದಿದ್ದರೆ ಚೆನ್ನಾಗಿರುತ್ತಿಲ್ಲವೇ ? ಎಂದು ಕೇಳಿದರು. ಕವಿಗಳು—ದಾಸರ ಶೈಲಿಯಲ್ಲಿ ಬರೆಯಬೇಕಾದರೆ ದಾಸರೇ ಆಗಬೇಕೆಂದು ವ್ಯಂಗ್ಯೋಕ್ತಿಯಿಂದ ನುಡಿದರು. ಮಹಾರಾಜರು ಆಹಾ ! ಹಾಗೋ ! ನಮ್ಮ ಮೈಸೂರಲ್ಲಿ ಅಂಥಾ ದಾಸರ್ಯಾರೂ ಇಲ್ಲವೋ ! ಎಂದರು. ಮುಸಾಹೇಬರೊಬ್ಬರು ಮುಜುರೆಮಾಡಿ, ಪ್ರಭೋ ಶ್ರೀನಿವಾಸ ದಾಸರಿದ್ದಾರೆಂದು ಅರಿಕೆಮಾಡಿದರು. ಆಗಲೇ ರಾಜಾಜ್ಞೆಯಿಂದ ಮೇನೆಯಲ್ಲಿ ಕರೆತರಲು ರಾಜಭಟರು ದಾಸರ ಮನೆಗೆ ಬಂದರು. ದಾಸರು ಸಮಾಚಾರವೇನೆಂದು ವಿಚಾರಿಸಿ, ಬರಗಿನ ಕಡ್ಡಿ ಮಸಿ ಬುಡ್ಡಿಗಳನ್ನು ಮಾತ್ರ ಮೇನೆಯಲ್ಲಿಟ್ಟು, ತಾವು ಪಾದಚಾರಿಗಳಾಗಿ ರಾಜಗೃಹವನ್ನು ಪ್ರವೇಶಿಸಿದರು. ಪ್ರಭುಗಳು—ದಾಸರೇ, ನಮ್ಮ ಅರಮನೆಯನ್ನು ಹೊಸ ಕನ್ನಡದಲ್ಲಿ ವರ್ಣಿಸಬಲ್ಲಿರಾ, ಎಂದು ಪ್ರಶ್ನೆಮಾಡಿದರು. ದಾಸರು—ಪ್ರಭೋ, ನಾನು ನಿಯಮಬದ್ಧದಾಸ, ಶ್ರೀ ಕೃಷ್ಣಪರಮಾತ್ಮನ ದ್ವಾರಕಿಯನ್ನು ಮಾತ್ರ ವರ್ಣಿಸಬಲ್ಲೆನು, ಎಂದರು. ಹಾಗೆಯೇ ಆಗಲೆಂದು ರಾಜಾಜ್ಞೆಯಾಯಿತು. ದಾಸರು, ಕಡ್ಡಿ ಮಸಿ ಬುಡ್ಡಿಗಳನ್ನು ತರಿಸಿಕೊಂಡು, ಸಮುಖದಲ್ಲಿ ಕುಳಿತುಕೊಂಡು, ರಾಜರು ತರಿಸಿಕೊಟ್ಟ ಕಾಗದದಲ್ಲಿ ಲಾವಣಿಯನ್ನು ಬರೆದು ಮುಗಿಸಿದರು. ಒಂದು ಶಬ್ದವನ್ನು ಬರೆದು ಹೊಂದಿಕೆಗಾಗಿ ಹೊಡೆದಿರುವುದಾಗಲಿ, ಲೇಖನಿಯನ್ನು ಕಿವಿಗೆ ಸಿಕ್ಕಿಸಿ ಯೋಚಿಸಿದ್ದಾಗಲಿ, ಯಾರಿಗೂ ಕಂಡು ಬರಲಿಲ್ಲ.

ಪ್ರಭುಗಳು ಉದ್ದಕ್ಕೆ ಓದಿಕೊಂಡು ನಕ್ಕು, ದಾಸರೆ, ಇದನ್ನು ನೀವೇ ಓದಿರೆಂದರು, ಶ್ರೀನಿವಾಸ ದಾಸರು ಕೈಯಲ್ಲಿ ತಾಳಹಾಕುತ್ತಾ :—

ಮಹರಾಜ ಯದುಕುಲಧಾಮ
ಸುರರಾಜ ಸುಂದರಶ್ಯಾಮ
ದ್ವಿಜರಾಜವಂಶ ಲಲಾಮ
ದನುಜಾಂತಕ ವರನಿಸ್ಸೀಮ
ಮಹರಾಜ—ಮಹರಾಜ ॥ ಪ ॥

ಸುಂದರತರ ದ್ವಾರಾವತಿನಗರ
ಸುತ್ತಯೋಜನ ದ್ವಾದಶ ವಿಸ್ತಾರ
ಸಿಂಧೂರದಿ ತಿದ್ದಿದ ಗೋಪುರ
ಶಶಿಕೋಟಿ ಪ್ರಭೆಗಳ ಧಿಕ್ಕಾರ
ಒಂದಾರಿಂದಲಿಹುದು ಪ್ರಾಕಾರ
ವಜ್ರಾನ್ವಿತ ಕವಾಟದ್ವಾರ ॥

ಬಂಧಿಸಿಹರು ಬಹು ರತ್ನಗಳಿಂದ
ಬುರುಜುಗಳವೆ ಬಹು ಲಕ್ಷಗಳಿಂದ
ಅಂದವಾದ ಅಳ್ವೇರಿಗಳು
ಕರಿವೃಂದಗಳಿಂದಲಂಕಾರಗಳು । ಮೇ
ಲಿಂದ್ರ ನೀಲಪುತ್ಥಳಿಗಳ ತಿದ್ದಿ
ಇಟ್ಟಿಹರೈ ಪ್ರಾಕಾರದಿ ಹೊದ್ದಿ
ಮುಂದೆ ಮೃಗೇಂದ್ರನ ಮುಖಗಳ ರಚಿಸಿ
ಮಾಣಿಕ್ಯಗಳದರಲಿ ಮೇಳವಿಸಿ
ಒಂದೇ ರೀತಿಯೊಳಿರುವ ತೆನೆಗಳು
ವರುಣಾಲಯದಂತಿರುತಿಹ ಅಗಳು
ಮಂದರ ಗಿರಿಯಂದದಿ ಉನ್ನತ
ಮೂರು ಲೋಕದೊಳು ಬಲು ಪ್ರಖ್ಯಾತ

ಸಿಂಧು ಮಧ್ಯದೊಳೆಸೆವದು ನಗರ
ಸೀಮೆಯೊಳಾವನು ಬಲ್ಲನು ಚದುರ ||
ಚಂದ್ರನ ಸುಕರ | ಮುತ್ತಿನ,ಮಕರ
ತೋರಣನಿಕರ ಸಾವಿರಾ
ಬಂಧನ ಮುರಿಗೆಗಳಿಂದ ವಿಮಾನಗ
ಳಿಂದ ಪತಾಕೆಗಳಿಂದ ಸುಕೌಶಲ
ದಿಂದ ದಿವೌಕಸವೃಂದ ವಿಚಿತ್ರಸು
ಗಂಧ ವಿಶೇಷಗಳಿಂದತಿ ನೋಡಲು
ಚೆಂದಳಿ ವೃಂದಾರವಿಂದಗಳೊಂದಿಸು
ಮಂದರ ಸ್ವರಪಿಕ ವೃಂದಧ್ವನಿಗಾ
ನಂದವಿಸೆ | ಹರುಷಂಕುರಿಸೆ | ಸಖಮೋಹರಿಸೆ
ಮಂದಿರಗಳ ಮೇಲ್ ಚಂದ್ರಶಾಲೆಗ
ಳಿಂದಲೆಸೆಯೆ ಪೂರ್ಣೇಂದು ವದನೆಯರು
ಮಂದಹಾಸೆಯರು | ಪಂಕಜಾಕ್ಷಿಯರು
ಅಂದಣಗಳಅವಿ | ಹರಿಸುತಲಿರೆ ವಠ
ಸಾಂದ್ರವಾದ ಜಾಳಾಂದ್ರಗವಾಕ್ಷಗ
ಳಿಂದಲೆಸೆವ ಮೇಲುಪ್ಪರಿಗೆಗಳಿರೆ
ಗಂಧಪನ್ನೀರಿನ ತಳಿಯ ಹಾಕಿಹರು
ಸ್ಯಂದನಗಳು ಶತಸಾವಿರ ಸಂಖ್ಯೆಯೊಳ್
ನಿಂದಿವೆ ಪುರದ್ವಾರದಲಿ—ವೃ
ಷ್ಣ್ಯಂಧಕರಾಯುಧಗಳ ಪಿಡಿದಿಹರು
ನಿಂದಿಹರೂ ಮುದದಲ್ಲಿ | ಕರಿ
ವೃಂದತುರುಗ ಕಾಲಾಳುಗಳು | ಪುರ
ಸುಂದರ ವೀಧಿಗಳಲ್ಲಿ | ಸೂ
ನಂದನಂದ ಸನಕಾದ್ಯರು ಬಂದು
ನಿಂದಿಹರು ಸಮುಖದಲಿ || ವರ
ಕುಂದಣದಂತೆ ವಿರಾಜಿಸುವಾಮಲ

ಭಿತ್ತಿಗಳು ನವರತ್ನಗಳು । ಸಾ
ಲಿಂದಲೆಸೆವ ನವದ್ವಾರಗಳು । ಆಗಾರಗಳು । ತರ
ದಿಂದತೋರ್ಪ ಮೇಲ್ಕಟ್ಟುಗಳು । ನೆಲಗಟ್ಟುಗಳು । ಜಲ
ಬಿಂದುಗಳಿಂದಾನಂದ ಕೊಡುವ ಕಾರಂಜಿಗಳು । ಸುಮಪುಂಜಗಳೂ ಮಾ
ಹೇಂದ್ರನಿರುವ ಅಮರಾವತಿಯೋ ಇದಕಟ್ಟಿದವನ ಪ್ರಾವೀಣತೆಯೋ ಬಲು
ಸಂದಣಿ ಸುರರೈತಂದು ದ್ವಾರದಲಿ
ನಿಂದು ಸ್ವಾಮಿ ಪರಾಕು (ನಮ್ಮ ಸುಮಂಕು, ಲಾಲಿಸಬೇಕು ;) ಎಂತೆಂ
ದಿಂದ್ರಾದ್ಯರು ನಿಂದೊದರೆ । ಆ ಗರ್ಜನೆಗೇ ನೆಲಬೆದರೇ ॥ ೧ ॥

ಝುಗಿಝುಗಿಸುವ ಶಿರಿಕರದ ಕನ್ನಡಿಯೋ
ಜಗದೊಳಗಿಲ್ಲದ ಸ್ಮರನ ಗರುಡಿಯೋ
ನಗವೈರಿಗೆ ಇದು ನಾಟ್ಯ ಚಾವಡಿಯೋ
ನಾಗನಗರಿಯು ಪ್ರಭೆಗಿಮ್ಮಡಿಯೋ
ನಗಜಾರಮಣನ ರಜತದ ಗಿರಿಯೋ
ನಗರದಮಲ ಸುಕಾಂತಿಚ್ಛವಿಯೋ
ನಾಗರತ್ನದಿಂ ರಚಿಸಿದ ಗುಡಿಯೋ
ವಿಗಡ ಮದನ ಕರಸುರುಗಿಯ ಕಿಡಿಯೋ
ಮೃಗಶಾಬಾಕ್ಷಿಯರಿಗೆ ಎದೆಪುಡಿಯೋ,
ಮೃಗಧರ ಮಾರ್ತಾಂಡರುಗಳ ಸಭೆಯೋ
ಜಗವನು ಬೆಳಗಿಪ ದೀಪದ ಕುಡಿಯೋ
ಜಗತೀಪತಿ ಶ್ರೀಹರಿಯ ದೇವುಡಿಯೋ ॥
ನಗುತಿವೆ ದೀಪಾವಳಿಗಳು ಸ್ತಂಭಾ
ದಿಗಳಲಿ ಸ್ವರ್ಗವ ನೋಡಿ । ಮೇಲ್
ಗಗನವ ಚುಂಬಿಪ ಗಾಢತರದಿ
ಆ ಗಂಭೀರದಲೊಪ್ಪುವ ಮಹಡಿ। ಹೊಗ
ಹೊರ್ಗುತಿಹ ಚಿತ್ತಾರಗಳಲಿ ಶೋಭಿಪ
ಸ್ವರ್ಣಮಯದ ವರ ಗ್ವಾಡಿ

ಗ್ವಾಡಿಗಳಲಿ ನೋಳ್ಪರಚಿತ್ರ ಭ್ರಾಮಕ
ಚೌಕಡೆಯಲಿ ನಿಲುಗನಡಿ
ಸಾಲುಗಳಲಿ ಮಣಿಮಯ ಸ್ತಂಭಗಳು
ಕುಗ್ಮ್ರಗಳಲಿ ತಿದ್ದಿದ ಲೋವೆಗಳು
ರಜತದಲಿ ಮಾಡಿದ ಹಂಸಗಳು । ಕುಸು
ಮಗಳಿಂದೊಪ್ಪುವ ಬೇಲಗಳು
ಜಾಗಳದಲಿ ರಂಜಿಪ ನವಿಲುಗಳು
ಅರಗಿಳಗಳ ದಿವ್ಯಸಾಲುಗಳು
ಅಗಣಿತ ರತ್ನಾನ್ವಿತ ಪೀಠಗಳು
ಅದ್ಭುತವಾದ ವಿಚಿತ್ರದ್ವಾರಗಳು
ಸೊಗಸಿನ ಚಿತ್ರದ ಮೇಲ್ಕಟ್ಟುಗಳು
ತೆಗೆದ ಲಕ್ಷಗವಾಕ್ಷಗಳು
ತಾರೆಗಳಲಿ ತಿದ್ದಿದ ಕುಸುರಿಗಳು
ಕುಸುರಿಗಳಿಗೆ ಮುತ್ತಿನ ಚೆಂಡುಗಳು
ಚೆಂಡುಗಳಿಗೆ ರತ್ನದ ಗೊಣಸುಗಳು
ಗೊಣಸುಗಳಲಿ ಒಪ್ಪುವ ಕಮಲಗಳು
ಕಮಲಗಳಲಿ ಮೆರೆವಾ ಭ್ರಮರಗಳು
ಸುಗಂಧಭರಿತ ಸುಮದರಳುಗಳು
ಮಘಮಘಿಸುವ ಗಂಧಾದಿಗಳಿಂದೊಪ್ಪುವ
ಮಂಚಗಳು ಸ್ಮರಸಂಚುಗಳು
ತೆಗೆಮಿಗಿಲುಂಟೇ ಜಗದೊಳು ಶಿರಿಕರ
ಯುಗದೊಳು ಸೌಭಾಗ್ಯವ ತಾಧರಿಸಿ
ನಗರದಿ ನೆಲೆಸಿಹಳ್ಳೆ ಹರಿಯರಸಿ
ತಾಮನವೆರೆಸಿ ದುಃಖವ ಮರೆಸಿ
ಪೊಗಳಲಳವೆ ಮಹರಾಜ ಸುರೋತ್ತಮ
ಶಜ್ಜೆಯ ಮೇಲಕೇಸ್ವಾರಿ
ಮೂರು ಹೆಜ್ಜೆಯಿಡಲು ಜಂಭಾರೀ

ತಾಲಜ್ಜಿಸಿ ಬಿಟ್ಟನು ದಾರೀ
ಬಲು ಜರ್ಝರಿಸಿ ಸುರನಗರೀ ‖ ೨ ‖
ಶಿರಿಯರಸನ ಶ್ರೀಮುಖದ ಶೃಂಗಾರ
ಶಶಿಕೋಟಿ ಪ್ರಭೆಗಳ ಧಿಕ್ಕಾರ
ಅರಳಿದ ಕುಸುಮ ಮಂಜರಿಗಳ ಹಾರ
ಆಡುವ ಮತ್ಸ್ಯಾವಳಿ ಝೇಂಕಾರ
ಮರಕತ ಸುಂದರ ಶ್ಯಾಮಶರೀರ
ಮಕರಧ್ವಜ ಸಾಶಿದ ನಾಕಾರ
ಶಿರಮುಡಿಯೊಳು ಶೃಂಗಾರ ಕಿರೀಟ
ಸುಮನೋಹರದಲಿ ತಿದ್ದಿದ ಮಾಟ
ಕರುಣಾ ರಸಪೂರಿತ ಅರೆನೋಟ
ಕಾಮಿತ ಕೊಡುವುದು ಈ ಭ್ರೂಮಾಟ
ವರಕಸ್ತೂರೀ ತಿಲಕಲಲಾಟ
ವಾಮಾಕ್ಷಿಯರಿಗೆ ಇದೆ ಎದೆಗೂಟ
ಸರಸಿಜದಳ ನೇತ್ರಗಳ ವಿಲಾಸ
ಸರಸೋಕ್ತಿಗೆ ಸೂಸುವುದು ಪೀಯೂಷ
ಪರಮ ದಯಾಳುಗಳಿಗೆ ಇವಆಲಸ
ಪರಿಪರಿಯಲಿ ಸುಖಕರೆಸುವ ವಡುಷ
ಕೊರಳಲಿ ಮೆರೆಯುವ ಮುತ್ತಿನ ಕಂಠೀ
ಕಿವಿಯೊಳು ಶೋಭಿಪ ಮಕರದವಂಟಿ
ಕರುಣಾದ್ವಿತನ ಪೋಲುವಪದಕ
ತೋರುತಿದೇ ಫಾಲದಿ ಅಳಕ
ಕರದೊಳು ಹಾಕಿದ ರತ್ನದ ಥೋಡೇ
ಕೌಂಸ್ತುಭಕತ್ತಕೆ ಸೋಡಿತ್ತಿದೇ
ಅರುಣಾಧರದಾಳಿಂಬ ಸುದಂತ
ಅಂಬುಜಕಂಬುಗದಾರಿಕರಾಂತ
ಸಗಸಿಜನಾಭಿತಿವಳಿಗಳಿಂಗ

ಸುಂದರ ಬಾಪುರಿಗಳು ಬಲು ಅಂದ
ಸುರು ಚಿರಾಂಬರ ಭೂಷಣ ವಿಲಾಸ
ಸಮನಸರೀಕ್ಷಿಸೆ ಪರಮೋಲ್ಲಾಸ
ಪುರಹರ ಸುರನರವಂದಿತ ಪಾದ
ಪುಣ್ಯ ಶ್ಲೋಕರಿಗಿದು ಸುಸ್ವಾದ
ಮಹಿಮೆ ಅಗಾಧ ಮನಕತಿವೋದ
ಬಿರುದಿನ ಖಡೆಯ ಭಳಿರೆನ್ನೊಡೆಯ
ಮುರಮಧು ನರಕಾಸುರ ಸಂಹಾರಿ
ಮುರಳೀಧರ ಗೋವರ್ಧನಧಾರಿ
ಗರುಡನ ಏರಿ ಕಂಸಕುಠಾರಿ
ಬರುತಿಹಸ್ವಾರಿ ಬಿಡಿ ಬಿಡಿ ದಾರಿ
ಕರಲಾಘವದಿಂಕರಿಯು ಗಮನದಿಂ
ಹರಿದಯುಮಾಡುವ ಛಂದ । ಸುಂ
ದರಿಯರು ಸಮುಖದಿ ನಾಟ್ಯಗಳಂ ವಿ
ಸ್ತರಿಸುವರತಿನಯದಿಂದ । ನವ
ತರುಣಿಯರು ಮೃದುಚರಣೆಯರು। ಸು
ವರಣೆಯಾರಾರತಿ ಛಂದ । ತರ
ತರದಿಂದೊಪ್ಪುವ ಕಲಶ ಕನ್ನಡಿಗಳ
ಧರಿಸಿರುವರು ಕರದಿಂದ । ವಿ
ಪ್ರರುಗಳುಆಶೀರ್ವಾದಗಳಿಂದಲಿ
ಹರಸುವರು ನೊಲವಿಂದ । ಸು
ಧರ್ಮ ಸಭಾಸ್ಥಾನದಿ ಗರುಡಧ್ವಜ
ವರಸಿಂಹಾಸನವೇರಿ
ಮೆರೆಯಲು ಮೊಳಗಿತು ಕಹಳೆ ತುತ್ತೂರಿ
ಬಿರುದಿನ ಭೇರಿ ತಮ್ಮಟೆ ನೌರಿ
ಮುರಜಢಕ್ಕೆ ಜರ್ಝರಿಪ ಭಟರ ಅ
ಬ್ಬರಕೆ ಜರಿಯೆ ಗಿರಿಕೂಟ । ಭೋ

ರ್ಗರಿವ ಶರಧಿ ಆರ್ಭಾಟೆ । ಘ
ರ್ಘರವು ಕರ್ಣಕಾಸ್ಫೋಟೆ । ನೀ
ರ್ಗರೆವ ಮೇಘದಬ್ಬರವೋ ತಿಡಿಲಿನಾ
ಬ್ಬರವೋ ಅರಿಯೆದರ್ಬಾರ । ವ
ತ್ತರದಿ ನೆರೆದ ಪರಿವಾರ । ಭೂ
ತರುಣಿಯರ ಮರಶೃಂಗಾರ ॥ ೩ ॥
ಜಲಜನಾಭ ಶ್ರೀ ಕೃಷ್ಣನ ಮುಂದೆ
ಜಯವಿಜಯಾದ್ಯರು ನಿಂದಹರಂದೇ
ಕಳವಳಕೊಡುತಿದೆ ವಾದ್ಯದ ಘೋಷ
ಕರಿಗಳ ಸಾಲದೆ ಗಿರಿಸಂಕಾಶ
ಹಳಿವಿಗಿಹಚ್ಚಿದ ಹೇಮರಥಗಳು
ಹರಿವೇಗದಿ ರಂಜಿಪ ವಶ್ವಗಳು
ಬಲಿದುನಿಂತ ಬಲು ಬಿರಿದುಗಳನ್ನು
ಬೆಳ್ಳಿ ಬೆತ್ತಗಳಗಣನಿನ್ನೇನು
ಘುಳಿಘುಳಿಸುತಲದೆ ಶಂಖದನಾದ
ಗರುಡಧ್ವಜನಿಗೆ ಅದು ಬಲು ಮೋದ
ಬಲಶಾಲಿಗಳದೆಲಕ್ಷ ಸಂಖ್ಯಾತ
ಬರಿ ಮಾತಲ್ಲಿದು ಕೇಳೆನ್ನ ಮಾತ
ಝಳುಪಿಸುವರು ಖಡ್ಗಗಳನು ಪಿಡಿದು
ಬಳಸಿನಿಂತ ಬಲುವೀರರ ಗಡಣ
ಬಾಯಲಿ ಕೊಂಡಾಡುವನೇ ನಿಪುಣ
ಘಲಿಘಲಿರೆಂಬುವ ಗಗ್ಗರಿಭಲ್ಲೇ
ಘರ್ಜಿಸುವುದು ಕೇಳ್ಬಿರು ದಿನಕಹಳೆ
ಕಳಕಳಿಸುತಲದೆ ಮಹ ಸೌರಂಭ
ಕುಂಭಿಣಿಗಾಶ್ಚರ್ಯದ ಸಿರಿತುಂಬ
ತುಳುಕುತದೇ ಸೌಭಾಗ್ಯದಿ ನಗರ
ತುದಿ ಮೊದಲಾವನು ಬಲ್ಲನು ಚದುರ

ಜಲಜಭವಾಂಡದೊಳಾರಿಸಿ ನೋಡಾ
ಜೋಡುಂಟೆ ನಪ್ಪ ಧೊರೆಗೆಲೊ ಮೂಢ
ಸೆಳೆನಡುವಿನ ಶೃಂಗಾರದ ಸತಿಯರು
ಸರಿಸದಲ್ಲಿ ನಿಂದಿಹರು । ಕೆಂ
ದಳಿರುಪೋಲ್ವ ಹಸ್ತಗಳಿಂದಲ್ಲೀ
ಚಾಮರಗಳ ಹಾರಿಸುತಿಹರು । ಪು
ತ್ತಳಿಗಳಂತೆ ನಿಲುಗನ್ನಡಿಗಳನು ಕರ
ದಲ್ಲೀ ಪಿಡಿದಿರುತಿಹರು । ಚಿಗು
ರೆಲೆಯಿಂದೊಪ್ಪುವ ತಾಂಬೂಲಗಳನು
ಚಿನ್ಮಯಗೇ ಕೊಡುತಿಹರು । ಮ
ದ್ದಲೆಯು ತಾಳತಂಬೂರಿ ಸುವೀಣಾ
ವಾದ್ಯವು ಲಯಸ್ವರ ಬದ್ಧದಿಂದ । ಸು
ಬುದ್ಧಿವಂತರೆಲ್ಲೆದ್ದು ನಿಂತು ತಮ್ಮ
ವಿದ್ಯೆಗಳನು ತೋರುವರು । ಸು
ಪದ್ಧತಿಗಳ ಬಲ್ಲವರು
ಭಳಿರೆ ಭಳಿರೆ ಸದ್ಗುಣಗಣ ನಿಲಯ
ಭಕ್ತಜನಾವಳಿಗೆಲ್ಲ ನೀ ಸದಯ
ಬಲಿಗೊಲಿದತಿ ಸುಂದರತರ ಮೂರ್ತಿ
ಭೂಮ್ಯಾಕಾಶಾದಿ ತುಂಬಿತು ಕೀರ್ತಿ
ಜಲಜನಾಭವರ ಜಾಹ್ನವಿ ಜನಕ
ಜಗತೀಪತಿಜಯ ಯದುಕುಲ ತಿಲಕ
ಖಳಕುಲ ಮೂಲೋತ್ಪಾಟನ ಕಾರಿ
ಕುಜನಕುಠಾರಿ ಕೌಸ್ತುಭಧಾರಿ
ಫಲುಗುಣ ಸಖಜಯ ವಿಠಲನೆಂದು
ಬಲು ಹೊಗಳುತಲಿರೆ ಬಂದಿಗಳು । ಮಂ
ಜುಳದ ದಿವ್ಯತರ ನಾದಗಳು ಎ
ಲ್ಲೆಲ್ಲು ತೋರ್ಪ ವಿನೋದಗಳು । ಭೂ

ವಲಯದಲ್ಲಿ ಮಹರಾಜ ಸಭಾ
ಶೋಭಿಸುವದು ಶತಸೂರ್ಯನಿಭ । ಪ್ರಭೆ
ತುಂಬಿ ಚುಂಬಿಸುತಿದೆ ನೋಡುನಭ । ಭೂ
ವಲಯಕೆ ಇದು ವೈಕುಂಠ ಸಭಾ ॥ ೪ ॥

ಇಂತಹ ಶಬ್ದ ಸಂಪತ್ತು, ಇಂತಹ ವರ್ಣನೆಗಳುಳ್ಳ ಸಂಗೀತಮಯ ಸಾಹಿತ್ಯವನ್ನು ಎಷ್ಟು ಬೇಕೆಂದರೂ ಪುಸ್ತಕ ರೂಪವಾಗಿ ಕೊಡುವ ಸಂಪತ್ತು ಹರಿದಾಸ ಸಾಹಿತ್ಯದಲ್ಲಿದೆ. ಹುಳು ಹಿಡಿದು ಹಾಳಾಗುತ್ತಿರುವ ಹಳೇ ಪುಸ್ತಕಗಳನ್ನು ಸೂರ್ಯನ ಬೆಳಕಿಗೆ ತರಬೇಕೆಂದರೆ ಉದ್ಧಾರಿಗಳಾದ ಜನರಾಗಲಿ, ಉದಾರ ಮನಸ್ಸಿನ ಆಡಳಿತವಾಗಲಿ, ಇಲ್ಲವೇ ಎಂದು ವ್ಯಸನವಾಗುತ್ತಿದೆ. ಈಗಿನ ಶಾಲಾ ಬಾಲಕರಿಗೆ ಕಂಠಸ್ಪರ್ಧೆಯನ್ನೇರ್ಪಡಿಸಿ ಅಂತಿಂಥ ಸಾಹಿತ್ಯಗಳನ್ನು ಹೇಳಿಸಿ ಯೋಗ್ಯತಾಪತ್ರಗಳನ್ನು ಕೊಡುವವರು ದಾಸರ ದಿವ್ಯಸಾಹಿತ್ಯಗಳನ್ನು ಹಾಡಿಸಿ ಕಂಠಾಭರಣ ಕೊಡಬಾರದೇ ಎಂದೆನಿಸುತ್ತದೆ. ಶೃಂಗಾರ ಹೇಳಬೇಕೆಂದು ಹರಿದಾಸರು ಸೂಳೆಗೇರಿಗಳನ್ನು ವರ್ಣಿಸಿದವರಲ್ಲ. ಯಾವದೊಂದು ರಸದಲ್ಲಿ ಹಾಡಲಿ, ದೇವರ ಹೆಸರಿನಲ್ಲಿ ಹಾಡಿದರು ವಿನಾ, ಅನವಶ್ಯ ಅಶ್ಲೀಲ ಅಯೋಗ್ಯ ವಿಷಯಗಳ ಮೇಲೆ ಹಾಡಲಿಲ್ಲ.

## ಮೋಹಿನೀ ರೂಪ

ಶ್ರೀನಾಥ ನೋಹಿನಿ ರೂಪ । ತಾತಾಳಿದನ್ನೆ ಸುಕಲಾಪ
ಏನೆಂಬೆನು ಹರಿಯ ಪ್ರತಾಪ । ತಾನೋಡಿಸುವುದು ಹೃತ್ತಾಪ ॥ ಪ ॥

ಭಂಗಾರದಲತೆಯಂತೆ ಬಳಕುವಳು
ಬಾಜುಬಂದಿಗೆ ಗೊಂಡೆಗಳ ಕಟ್ಟಿಹಳು
ಮುಂಗಾಲಿಲಿ ನೆರಿಗೆಗಳ ಚಿಮ್ಮುವಳು
ಮುತ್ತಿನ ಜೈತಲೆಯಿಂದ ಮೆರೆಯುವಳು
ಭೃಂಗನೀಲ ಕುಂತಳದಿ ರಂಜಿಪಳು
ಫಾಲದಿ ತಿಲುಕವ ತಿದ್ದಿ ಹಚ್ಚಿಹಳು
ತುಂಗ ಕುಚದ ಭಾರಕ್ಕೆ ತಡೆಯಳು

ತುದಿ ಬೆರಳಲಿ ಗಲ್ಲವನೊತ್ತಿಹಳು
ಘುಂಗೈ ಮೇಲರಗಿಳಿಯ ನಿಟ್ಟಿಹಳು
ಮೋಹನ ಮಾಲೆಯ ಗಳಕೆ ಕಟ್ಟಿಹಳು
ರಂಗುಕೇಸರೀಗಂಧ ಹಚ್ಚಿಹಳು
ರತ್ನ ಖಚಿತ ಹಾವಿಗೆಯ ಮೆಟ್ಟಿಹಳು
ರಂಗು ಮಾಣಿಕದುಂಗುರವ ನಿಟ್ಟಿಹಳು
ರಾಜೀವದ ಮಂಜರಿಯ ಪೋಲುವಳು
ಹೊಂಗ್ಯಾದಿಗೆ ಪೋಲುವ ಮೈ ಬಣ್ಣ
ಹುಮ್ಮಸದಲಿ ಪೋಲುವರಿಲ್ಲಣ್ಣ
ಹಿಂಗಡೆಯಲಿವರ ಹೆರಳು ಭಂಗಾರ
ಹಿಮ್ಮಡಿ ಬಡಿವದು ಸರ್ಪಾಕಾರ
ಭಂಗಿಸುವಳು ಬಹು ದೈತ್ಯರ ಹೃದಯ
ಭ್ರೂವಿಲಾಸದಲಿ ತೋರ್ಪಳು ಸುಧೆಯ
ಅಂಗದ ಸೌಗಂಧಕ್ಕೆ ಅಳಿವೃಂದ
ಆಡುತಲಿದೆ ಝೇಂಕಾರಗಳಿಂದ
ಸಂಗಡ ನೆರೆದ ಸುರಾಸುರ ವೃಂದ
ಸೊಕ್ಕಿ ಮೋಹಿಸುವರು ಸತಿ ಚೆಲುವಿಂದ ||
ಮಂಗಳ ಮುಖಿನಮ್ಮಂಗಳ ವೋಹಿಸ
ಲಿಂಗಡಲಿಂ ಬಂದಿಹಳೋ | ಬೆಳ
ದಿಂಗಳ ಸೋಲಿಸುವಂಗ ಛವಿಯಲಿ
ಕಂಗೊಳಿಸುತಲೈತಹಳೋ
ಮೃದ್ವಂಗಿ—ಮೃದ್ವಂಗಿ | ಮೃ
ದ್ವಂಗಿ ಮತ್ತಮಾತಂಗಯಾನೆ ಅ
ನಂಗನ ಧಿಕ್ಕರಿಸುವಳೋ | ನ
ಮ್ಮಂಗಳಿಗಮೃತವ ನೆರೆಯಲು ಕಲ
ಶಂಗಳ ಕರದಲಿ ಪಿಡಿದಿಹಳೋ ! ರಾ
ಜಾಂಗಳದಿ ನಿಂದಿಹಳೋ | ಜ

ಗಂಗಳ ಪಾಲಿಸುವವಳೋ । ಮನ
ಸಂಗಳ ಅಪಹರಿಸುವಳೋ । ಜಡ
ಜಂಗಮರಿಗೆ ಪ್ರಿಯತಮಳೋ ॥
ಸಾರಾಂಗಿ—ಸಾರಾಂಗಿ—ಸಾ
ರಾಂಗಿ ಸಾಂಬಮದಭಂಗಿ ಬಹಳ ಸುಖ
ಸಂಗಿ ಸುಂದರಲತಾಂಗಿ ಮೋಹನಾ
ಪಾಂಗಿ ಪೊಳೆವಕನಕಾಂಗಿ ಖಚಿತ ಬಿಡು
ಹೆಂಗಸಲ್ಲವೋ ಈಕೆ । ನೀವು
ಭಂಗಬಡುವಿರೆಲೊ ಜೋಕೆ ॥ ೧ ॥ ಶ್ರೀನಾಥ
ಕನ್ನಡಿಯಂದದಿ ಪೊಳೆವ ಕಪೋಲ
ಕಪ್ಪುರವಾಸಿತ ವರ ತಾಂಬೂಲ
ಕಣ್ಣಿಗೊಪ್ಪುವ ಕನಕದುಕೂಲ
ಕಾಮಿನಿಯಂದದಿ ತೋರ್ಪಳುಜಾಲ
ಚುನ್ನಡಿ ಹಾಕಿದ ಚಂದ್ರದ ಕುಪ್ಪುಸ
ಚಪಲಾಕ್ಷಿಯ ನೋಟದ ಬಲುರಭಸ
ಕರ್ಣಾಯತ ನೇತ್ರಗಳ ವಿಲಾಸ
ಕಾಮನ ಶರಪಂಜರಕಿದುಕೋಶ
ಉನ್ನತ ನಾಸಿಕದಲ್ಲಿ ಬುಲಾಕು
ವಜ್ರಮಯದವರ ಮುಖರದ ಬೆಳಕು
ಕರ್ಣದಿ ರತ್ನ ಖಚಿತ ತಾಟಂಕ
ಕುಸುರಿಹಚ್ಚಿದ ಬಾವುಲಿಗಳ ಬಿಂಕ
ಸಣ್ಣಮುತ್ತಿನ ಸರಪಳಿ ಚಳತಂಬು
ಸೊಗಸುವ ಮುಖದಲಿ ಕಿರಿಬೆವರಂಬು
ಸಣ್ಣನಡುವಿನೊಯ್ಯಾರದನಲ್ಲೇ
ಸರಸಿಜತನಯನ ಸೃಷ್ಟಿಯಿದಲ್ಲೇ
ಬಣ್ಣಿಸಲಳವಲ್ಲದ ಸೌಂದರ್ಯ

ಬಿಡಿಸುವಳೋ ಕೇಳ್ಮುನಿಗಳ ಧೈರ್ಯ
ಬೆಣ್ಣೆಯಂತೆ ಮೃದುವಾದ ಶರೀರ.
ಭಾಗ್ಯವಿಹೀನರಿಗಿದು ಬಹುದೂರ
ಕನ್ನೆ ಶಿರೋಮಣಿ ಕಾಮನ ಅರಗಿಣಿ
ಕೌಸ್ತುಭಮಣಿಗಣಹಾರೆ । ಮೋ
ಹನ್ನಮಯೀ ಮಧುರಾಧರಿ ಮಂಜುಳ
ವಾಕುಝುರಿಯಲಿಚದುರೆ । ಚ
ಪ್ಪನ್ನ ದೇಶದೋಳ್ ಚಾಲ್ವರಿದರು ಚಪ
ಲಾಕ್ಷಿಗೆ ಸಮರಿನ್ನ ಹರೆ । ಕೃತ
ಪುಣ್ಯದಿಂದ ಕೈಸೇರುವಳಲ್ಲದೆ
ಕಾಮಾಂಧರಿಗತಿದೂರೇ !
ಸಂಪನ್ನೇ — ಸಂಪನ್ನೇ । ಸಂ
ಪನ್ನೆ ಸುಗುಣಗಣ ಪೂರೇ
ಸುವರ್ಣವರ್ಣ ಸುಕುಮಾರೇ । ಸಂ
ಪೂರ್ಣಕಳಾ ಪರಿಪೂರೇ । ಮ
ಹಾರ್ಣವಸಮ ಗಂಭೀರೆ
ಈ ಹೆಣ್ಣು—ಈ ಹೆಣ್ಣು—ಈ
ಹೆಣ್ಣು ಸುರಾಸುರರನ್ನು ಮಹಾತ್ಮರು
ತನ್ನಮನಕೆ ತರಳಿನ್ನು ಬಿಡೋ ವಿಷ
ದ್ಧಣ್ಣು ಮೆಲುವನ ಪುಣ್ಣು ಕೂಡಿಸುವಳು
ಮಾನ್ಯಳು ಮತಿಸಂಪನ್ನಳು ಪರಮಾ
ಪನ್ನಜನರಿಗಮೃತಾನ್ನ ಕೊಡುವಳಘ
ಶೂನ್ಯಳು ನೋಡರಿ ಸೈನ್ಯಾರಣ್ಯ ವಿನಾಶೆ
ಬ್ರಹ್ಮಣ್ಯ ಭವಾದ್ಯರಿಗೀಶೆ ॥ ೨ ॥ ಶ್ರೀನಾಥ

ಹುಡುಗಿನೋಡು ಹೊಸಪರಿಯಾಗಿಹಳು
ಹದಮಿೂರದ ಯವ್ವನದಿ ಮೆರೆವಳು

ಮುಡಿಯೊಳು ಮಲ್ಲಿಗೆಯರಳ ತುಂಬಿಹಳು
ಮಂದಸ್ಮಿತದಲಿ ಮೋಹಿಸುತಿಹಳು
ಬೆಡಗಿನಿಂದ ಬಿಡುನುಡಿಯ ತೋರುವಳು
ಬಹುವಿಧದಾಭರಣಗಳ ನಿಟ್ಟಿಹಳು ||
ನಡೆಗೆಗಳಂದಕೆ ನಾಚಿತು ಹಂಸಿ
ನಖಮಣಿ ಚಂದ್ರಿಕೆ ಕೆಡಿಸಿತ ಮಾಂಸಿ
ಜಡಿತ ಮುತ್ತಿನ ತಾಯಿತ ಕಟ್ಟಾಣಿ
ಜಗವನು ಮೋಹಿಸುವಳು ಸುಶ್ರೋಣಿ
ಬಿಡುಬಿಂಕದ ಸವಿನುಡಿಗಳ ಛಂದ
ಬೆದರಿಸಿತು ಶುಕಪಿಕಗಳ ವೃಂದ
ಹಿಡಿಗಮರುವ ಮಧ್ಯಕೆ ಮನಮರುಗಿ
ಹಮ್ಮೈಸಿತುಕೇಸರಿ ಬಲುಸೊರಗಿ
ಉಡುಪತಿಕೋಟಿ ಪ್ರಭೆ ಧಿಕ್ಕಾರ
ಉಲ್ಲಾಸದ ವರ ಮುಖ ಚಂದೀರ
ಉಡುಗಣದಂತೆ ವಿರಾಜಿಸುವದು ನವ
ರತ್ನಮಯದ ಹಣೆಕಟ್ಟು | ಮೇಲ್
ಪಡಿಯಿಲ್ಲದೆ ಪಚ್ಚೆಯಲಿ ರಚಿಸಿದ
ಬೈತಲೆಗೊಪ್ಪುವ ಬಟ್ಟು | ಆಳ
ವಡಿಸಿದ ಅಲಂಕಾರಗಳಿಂದೊಪ್ಪುವ
ಅಂಗಜ ಶರಗಳ ತೊಟ್ಟು | ಎಡೆ
ಬಿಡದೆ ಎಚ್ಚರಿಕೆ ಪೇಳುತ ಬರುವನು
ಮುಂಗಡೆಯಲಿ ಕೈಗೊಟ್ಟು | ನಡೆ
ಮಡಿಗಳ ಹಾಸುತಲೈತಪ್ಪನು ಮುಂ
ದುಡುಪತಿಗಗನವ ಬಿಟ್ಟು ಬಲ್
ಶಡವಿನಿಂದ ಬರುತಾಳೆ ವಿನೋದ
ಸಕಲ ಜಗತ್ತಿಗೆ ಬಲು ಸುಸ್ವಾದ
ಕೊಡುವಳು ಕೋಮಲತರ ಸುಗಾತ್ರೆ

ಕೆಂದಾವರೆ ದಳದಾಯತ ನೇತ್ರ ||

[ವರಸು ಚರಿತ್ರ — ಪರಮ ಪವಿತ್ರ]
[ಮಂಗಳವಕ್ತ್ರ—ಮುನಿಮನ ಮಿತ್ರ]

ಕಡೆಗಣ್ಣಿನ ಸನ್ನೆಯಲಿ ಖಳರನು
ಕಾಮಾಗ್ನಿಗೆ ವಶಗೊಳಿಸಿ | ಸುಧೆ
ಬಡಿಸಲು ಸುರರಿಗೆ ಸರ್ವದ ತನ್ನಲಿ
ಸದ್ಬುದ್ಧಿಯ ನೆಲೆಗೊಳಿಸಿ | ಈ
ಪೊಡವಿಯೊಳಗೆ ಪಡಿಯಿಲ್ಲ ಗುಣಕೆ
ಕಡೆಯಿಲ್ಲ ತನ್ನ ಅಡಿಯಲ್ಲಿ ಮನಸು
ಇಡ | ಬಲ್ಲ ಜನರ ಒಡ | ಲಲ್ಲಿ ಇಟ್ಟು
ಕಡೆ | ಗೆಲ್ಲಮುಕ್ತಿ | ಕೊಡುವಲ್ಲಿ ಕೇಳು
ತಡ | ವಿಲ್ಲ ಸುಳ್ಳು ನುಡಿಯಲ್ಲ ಮಡದಿ ಇವ
ಳಲ್ಲ | ನೋಡು ಜಗದಿ | ನ
ಮ್ಮೊಡೆಯ ಶ್ರೀಶ ಜಯವಿಠಲನಲ್ಲದೆ
ಎಲ್ಲಿಂದ ಬಂದಳೀ ಕೆಳದಿ || ೩ || ಶ್ರೀನಾಥ

---

## ಹರಿದಾಸ ಸಾಹಿತ್ಯದಲ್ಲಿ ಬಾಳುವೆ

ಮಾನವನ ಬಾಳು ಹೇಗಿರಬೇಕೆಂಬುದನ್ನು ಹರಿದಾಸರು ಪರಿಪರಿಯಾಗಿ ತಿಳಿಸಿದುತ್ತಾರೆ. ಹಾಗಿರದ ಬಾಳು ಎಷ್ಟು ಗೋಳೆಂಬುದನ್ನು ಮನಸ್ಸಿಗೆ ತಾಕುವಂತೆ ಹೇಳುತ್ತಾರೆ. ವ್ಯಾಕುಲಿತ ಮನಸ್ಸಿನ ವ್ಯಾಕುಲವನ್ನು ಕಳೆಯು ತ್ತಾರೆ. ಮಾನವನು ಸಭ್ಯನಾಗಬೇಕು, ಮಾನವನು ಭಕ್ತನಾಗಬೇಕು, ಮಾನವನು ಮುಕ್ತನಾಗಬೇಕು, ಎಂಬುದೇ ಹರಿದಾಸರ ಹಂಬಲು. ಭವಾ ಟವಿಯಲ್ಲಿ ಬಳಲುವಹನ ಮನಸ್ಸಿಗಂತು ಹರಿದಾಸರ ಪದ ಸುಳಾದಿಗಳು ಸಂಜೀವನದಂತಿರುತ್ತವೆ. ಈ ದೃಷ್ಟಿಯಿಂದ ಈ ಬಗೆಯ ಸಾಹಿತ್ಯವನ್ನೇ

ಆರಿಸಿಕೊಡಬೇಕೆಂದರೆ ಅದು ರಾಶಿರಾಶಿಯಾಗಿದೆ. ಅವುಗಳ ಕೆಲವು ಮಾದರಿಗಳು ಕೆಳಕಂಡಂತಿವೆ.

## ಪೂರ್ವಿ — ಆದಿತಾಳ

ಫಲವಿದು ಬಾಳ್ದುದಕೆ । ಶಿರಿ
ನಿಲಯನ ಗುಣಗಳ ತಿಳಿದು ಭಜಿಸುವದೆ ॥ ಪ ॥

ಸ್ವೋಚಿತ ಕರ್ಮಗಳಾಚರಿಸುತ ಬಲು
ನೀಚರಲ್ಲಿಗೆ ಪೋಗಿ ಯಾಚಿಸದೆ
ಖೇಚರವಾಹ ಚರಾಚರ ಬಂಧ ವಿ
ಮೋಚಕ ನಿಹನೆಂದ್ಯೋಚಿಸುತಿಪ್ಪದೆ ॥ ೧ ॥

ನಿಚ್ಚಸು ಭಕುತಿಯೊಳ ಚ್ಯುತನಂಘ್ರಿಗ
ಳರ್ಚಿಸಿ ಮೆಚ್ಚಿಸುತೆಚ್ಚರದಿ
ತುಚ್ಛವಿಷಯಗಳಿಗಿಚ್ಛೈಸದೆ ಯ
ದೃಚ್ಛಲಾಭದಿಂ ಪ್ರೋಚ್ಚನಾಗುವದೆ ॥ ೨ ॥

ಮನವಾಕ್ಕಾಯ ದೊಳನುಭವಿಸುವ ದಿನ
ದಿನದ ವಿಷಯ ಸಾಧನಗಳನು
ಅನಿಲಾಂತರ್ಗತ ವನರುಹ ದಳಲೋ
ಚನಗರ್ಪಿಸಿ ದಾಸನು ನಾನೆಂಬುದೆ ॥ ೩ ॥

ಹಂಸ ಮೊದಲು ಹದಿನೆಂಟು ರೂಪಗಳ
ಸಂಸ್ಥಾನವ ತಿಳಿದನುದಿನದಿ
ಸಂಸೇವಿಸುವ ಮಹಾಪುರುಷರ ಪದ
ಪಾಂಸುವಧರಿಸಿ ಅಸಂಶಯನಪ್ಪುದೆ ॥ ೪ ॥

ವರಗಾಯಿತ್ರೀ ನಾಮಕ ಹರಿಗೀ
ರೆರಡಂಘ್ರಿಯ ವಿವರವ ತಿಳಿದು

ತರುವಾಯದಿ ಷಡ್ವಿಧರೂಪವ ಸಾ
ದರದಲಿ ಧ್ಯಾನಿಸಿ ನಿರುತ ಜಪಿಸುವದೆ ॥ ೫ ॥

ಗೃಹ ಕರ್ಮವ ಬೇಸರದಲೆ ಪರಮೋ
ತ್ಸಹದಲಿ ಮಾಡುತ ಮೂಜಗದ
ಮಹಿತನ ಸೇವೆಯಿದೆನುತಲಿ ಮೋದದಿ
ಅಹರಹ ಮನದಿ ಸಮರ್ಪಿಸುತಿಪ್ಪದೆ ॥ ೬ ॥

ಒಂದು ರೂಪದೊಳನಂತ ರೂಪವು
ಪೊಂದಿಪ್ಪವು ಗುಣಗಣಸಹಿತ
ಹಿಂದೆ ಇಂದು ಮುದೆಂದಿಗು ಶ್ರೀಗೋ
ವಿಂದಗೆ ಸರಿಮಿಗಿಲಿಲ್ಲೆಂಬುವದೆ ॥ ೭ ॥

ಹರಿಕಥೆ ಪರಮಾದರದಲಿ ಕೇಳುತ
ಮರೆದು ತನುವ ಸುಖ ಸುರಿಯುತಲಿ
ಉರುಗಾಯನ ಸಂದರುಶನ ಹಾರೈ
ಸಿರುಳು ಹಗಲುಗಳ ಜರುಗಿಸುತಿಪ್ಪದೆ ॥ ೮ ॥

ಬಿಗಿವ ಕಂಠದಿಂ ದೃಗ್ಬಾಷ್ಪಗಳಿಂ
ನಗೆಮೊಗದಿಂ ರೋಮಗಳುಗಿದು
ಮಿಗೆ ಸಂತೋಷದಿ ನೆಗೆದಾಡುತ ನಾ
ಲ್ಮೊಗನಯ್ಯನ ಗುಣಪೊಗಳಿ ಹಿಗ್ಗುವದೆ ॥ ೯ ॥

ಕ್ಲೇಶಾನಂದಗಳೀಶಾಧೀನ ಸ
ಮಾಸವು ಬ್ರಹ್ಮ ಸದಾಶಿವರು
ಈಶಿತವ್ಯರು ಪರೇಶನಲ್ಲದೆ
ಶ್ವಾಸಬಿಡುವ ಶಕ್ತಿಲೇಶಿಲ್ಲೆಂಬುದೆ ॥ ೧೦ ॥

ಪನ್ನಗಾಚಲ ಸನ್ನಿವಾಸ ಪಾ
ವನ್ನ ಚರಿತ ಸದ್ಗುಣಭರಿತ

ಜನ್ಯಜನಕ ಲಾವಣ್ಯನಿಧಿ ಜ
ಗನ್ನಾಥ ವಿಠಲನ ತನ್ನವನೆಂಬುದೆ ॥ ೧೧ ॥

---

ಮೋಹನ — ಅಟ್ಟತಾಳ

ಅಂತರಂಗದಲ್ಲಿ । ಹರಿಯ ಕಾಣದವ
ನೇ ಹುಟ್ಟು ಕುರುಡಾನೋ । ಕುರುಡಾನೋ ॥ ಪ ॥

ಸಂತತ ಶ್ರೀಕೃಷ್ಣ ಚರಿತೆ ಕೇಳದವ
ಜಡಮತಿ ಕಿವುಡಾನೋ । ಎಂದೆಂದಿಗು ॥ ಅ ॥

ಕುರುವೀರ ಸಖನಾದ ಕೃಷ್ಣನ ಮುಂದೆ
ಕುಣಿಯದವನೆ ಕುಂಟನೋ
ನರಹರಿಚರಣೋದಕವ ಧರಿಸದಶಿರ
ನಾಯುಂಡಹಂಚುಕಣೋ
ಹರುಷದಿಂದಲಿ ನರಹರಿಯ ಪೂಜೆಯ ಮಾಡ
ದವನೆ ಕೈಮುರುಕಾನೋ ॥
ಸುರವರ್ಯ ಕೃಷ್ಣಪ್ರಸಾದವಿಲ್ಲದ ಊಟ
ಸೂಕರಭೋಜನವೊ । ಎಂದೆಂದಿಗು ॥ ೧ ॥

ಅಮರೇಶ ಕೃಷ್ಣಗರ್ಪಿತವಿಲ್ಲದ ಕರ್ಮ
ಅಸತಿಯ ವ್ರತನೇಮವೋ
ರಮೆಯರಸಗೆ ಪ್ರೀತಿಯಿಲ್ಲದ ವಿತರಣೆ
ರಂಡೇ ಕೊರಳ ಸೂತ್ರವೋ
ಕಮಲನಾಭನ ಪಾಡಿಪೊಗಳದ ಸಂಗೀತ
ಗಾರ್ಧಪರೋದನವೋ ॥
ಮಮತೆಯಿಂದಲಿ ಕೇಶವಗೆ ನಮಸ್ಕಾರ
ಮಾಡದವನೆ ಮೃಗವೋ । ಎಂದೆಂದಿಗು ॥ ೨ ॥

ಸುರಧೇನು ಇರಲಾಗಿ ಶ್ವಾನನಪಾಲ
ಕರೆದು ಕುಡಿಯ ಬೇಡವೋ
ಜರೆಹುಟ್ಟುಮರಣವ ತೊಡೆವ ಸುಧೆಯ ಬಿಟ್ಟು
ಸುರೆಯ ಸೇವಿಸ ಬೇಡವೋ
ಕರಿತುರಗವು ಇರಲಾಗಿ ಕೆಡಹುವಂಥ
ಕತ್ತೆಯೇರಲಿ ಬೇಡವೋ ||
ಪರಮಪದವನೀವ ಶಿರಿಕೃಷ್ಣನಿರಲಾಗಿ
ನರರ ಸೇವಿಸಬೇಡವೋ । ಎಂದೆಂದಿಗು || ೩ ||

---

## ವ್ಯಾಕುಲ ಪರಿಹಾರ ಸುಳಾದಿ

### ಧ್ರುವತಾಳ

ವ್ಯಾಕುಲವ್ಯಾಕೋ ಮನವೆ ಯಾಕೆ ನಿನಗೆ ನಿತ್ಯ
ಸಾಕುವದಾತನು ಶ್ರೀಕಾಂತ ನಿರಲಾಗಿ
ಲೋಕಾಲೋಕವನೆಲ್ಲಾ ನೇಕಬಗೆಯಿಂದ
ಜೋಕೆ ಮಾಡುವನು ಬೇಕೆಂದು ಪ್ರತಿದಿನ
ಕಾಕೂಲಾತಿಯ ಪಿಡಿದು ಲೌಕಿಕದೊಳುಬಿದ್ದು
ಕೂಕರ್ಮವನುಸರಿಸಿ ಶೋಕಕೊಳಗಾಗದಿರು
ನೂಕುಸಂತಾಪವ ನೇಕಬಗೆಯಿಂದ
ವಾಕುಸಾರಿದೆ ನಿಜ ನೀಕೇಳು ದೃಢವಾಗಿ
ಈ ಕುಂಭಿಣಿಯ ಮಧ್ಯಪ್ರಾಕೃತವಿಡಿದು ಬ
ದೂಕುವ ಜೀವಿಗಳ ಸಾಕುವನ್ಯಾರೋ
ಗೋಕುಲಾಂಬುಧಿ ಚಂದ್ರ ವಿಜಯವಿಠಲಗ್ರಾಸ
ಹಾಕುವ ನಿರಲಾಗಿ ನೀ ಕಳವಳಿಸುವರೇ || ೧ ||

## ಮಟ್ಟತಾಳ

ಬರಬಂದರೇನು ಬಾರದಿದ್ದರೇನು
ಧರೆಯೆಲ್ಲಾ ಇಂದೇ ಕರಗಿ ಪೋದರೇನು
ಅರಸಾಗಿದ್ದವರ ಕರುಣ ತಪ್ಪಿದರೇನು
ವರುಷಂಗಳು ತಡೆದು ಬರದೆ ಇದ್ದರೇನು
ಗಿರಿ ಸಮುದಯಗಳು ಉರುಳಿ ಬಿದ್ದರೇನು
ಹರಿದು ಮುಗಿಲು ಮೇಲೆ ವರಗಿ ಬಿದ್ದರೇನು
ಧರಣಿ ಪಾಲಕರಂಗ ವಿಜಯ ವಿಠಲರೇಯನ
ಪರಮ ಭಕುತ ಹರಿಶರಣಗೆ ಭಯವೇನು || ೨ ||

## ತ್ರಿಪುಟತಾಳ

ಶಾರೆ ಹೊನ್ನಿಗೆ ಶಾರೆ ಭತ್ತವಾದರೇನು
ನೂರಾರು ಖಂಡುಗ ಕಾಸಿಗಾದರೇನು
ಊರೂರಲಿ ಧನ ಸೂರೆ ಬಿಟ್ಟರೇನು
ಮಾರುವ ಧಾರಣಿ ಏರಿ ಇಳಿದರೇನು
ಅರಾಜಕವಾಗಿ ಭೀತಿ ಬಂದರೇನು
ಆರಾದರೂ ಮೋರೆ ತಿರುಹಿಕೊಂಡರೇನು
ಮೇರೆದಪ್ಪಿ ಏಳು ಶರಧಿ ಹೆಚ್ಚಿದರೇನು
ಶರೀರವೇ ಶ್ರೀನಿವಾಸನ ಪಾದಕ್ಕೆ
ಆರೋಪಿಸಿದ ಮೇಲೆ ಎಲೆಮನವೆ
ವಾರವಾರಕ್ಕೆ ಮತ್ತೆ ಯೋಚನೆಗೊಳಸಲ್ಲ
ಪೂರೈಸಿ ತಿಳಿ ಹರಿಯ ಮಹಿಮೆಯನು ಚೆನ್ನಾಗಿ
ಶ್ರೀರಂಗ ರಾಜ ಶ್ರೀ ವಿಜಯ ವಿಠಲರೇಯ
ಭಾರಕರ್ತನಾಗಿ ಪೊರೆಹನು ಪ್ರತಿದಿನ || ೩ ||

### ಅಟ್ಟತಾಳ

ಉದುರದೊಳಗೆ ಬಂದು ಉದುಭವಿಸಿದಾಗ
ವದನಕ್ಕೆ ತಂದು ಕೊಡೆದರ‍್ಯಾರೊ ಬೆಣ್ಣೆಯು
ಬದಿಗನು ತಾನಾಗಿ ಪಾದೋಪಾದೆಗೆ ಹರಿ
ಬದಿಯಲ್ಲಿ ನಿಂದುಹದುಳ ನೋಡುತಲಿ
ಪೊದೆವನ ಗಿರಿಗುಹ ಹೊದರದೊಳಿದ್ದರು
ಕ್ಷುಧೆಯಾಗಗೊಡದಂತೆ ಉದಯಾಸ್ತಮಾನ ಬಿಡದೆ
ಒದಗಿ ಸಾಕುವ ತಂದೆ ವಿಜಯ ವಿಠಲನಿರಲು
ಮದಡಮಾನವ ನೀನು ಉದರ ಚಿಂತೆಯ ಬಿಡು
ಹೃದಯದೊಳಗೆ ಶಿರಿ ಪದುಮನಾಭನ ಇಡು || ೪ ||

### ಆದಿತಾಳ

ಹಿಂದೆ ಬಹು ಜನ್ಮಂಗಳು ಬಂದು ಬಂದು ಪೋಧುದಕ್ಕೆ
ಒಂದು ತೃಣವಾದರು ನಿನ್ನಿಂದ ನೀನೇ ಗಳಿಸಲಿಲ್ಲ
ಇಂದಿರಾರಮಣ ತಾನೇ ಒಂದೊಂದು ಪರೀಯಲ್ಲಿ
ಬಾಂಧವನಾಗಿ ನಿತ್ಯ ನಿಂದು ಭಾರಕರ್ತನಾಗಿ
ಒಂದು ನಿಮಿಷ ಮಾರಗೊಡದೆ ಸಂದೇಹಗೊಳಿಸಿದೆ
ತಂದು ಸಾಕುವ ಗೋವಿಂದ ವಿಜಯ ವಿಠಲನು
ಮಂದಮಾನವ ನೀನು ಸಂದೇಹಬಡದಿರು || ೫ ||

### ಜತೆ

ಅಣುರೇಣು ಪೊಟ್ಟೆಗೆ ನಡೆಸುವ ದೇವನು
ನಿನಗೀಯ ದಿಪ್ಪನೆ ವಿಜಯ ವಿಠಲಸ್ವಾಮಿ || ೧ ||

ಈ ಬಗೆಯ ದಾರ್ಢ್ಯ ಹರಿದಾಸರದು. "**ಸಾಲಮಾಡಬೇಡ, ಕಾಲಕಳೆನ ಬೇಡ, ನಾಳೆಗಿಡಬೇಡ ;**" ಎಂಬುವು ಹರಿದಾಸರ ಜೀವನ ಸೂತ್ರಗಳು. ಈ ಸುಳಾದಿಯನ್ನು ಹಾಡಿದ ವಿಜಯದಾಸರು, ಶ್ರೀ ಹರಿಯ ಅನುಗ್ರಹ ತಮಗಾಗುವ ಮುನ್ನ ತಾವಿದ್ದ ಸ್ಥಿತಿಯನ್ನು ಕೆಳಕಂಡ ದೇವರ ನಾಮದಲ್ಲಿ ಸಂಕೋಚಪಡದೆ ಹೇಳಿಕೊಂಡಿದ್ದಾರೆ.

### ಸೌರಾಷ್ಟ್ರ ಅಟ್ಟತಾಳ

ನಿನ್ನ ಒಲುಮೆಯಿಂದ ನಿಖಿಳ ಜನರು ಬಂದು
ಮನ್ನಿಸುವರು ಮಹರಾಯ ! ಎನ್ನ ಪುಣ್ಯಗಳಿಂದೆ
ಈ ಪರಿಯುಂಟೇನೊ । ನಿನ್ನದೆ ಸಕಲ ಸಂಪತ್ತು ॥ ಪ ॥

ಸಂಚಿತನಕ ಇದ್ದು ಸಣ್ಣ ಸೌಟು ತುಂಬ
ಗಂಜಿಗಾಣದೆ ಬಳಲಿದೆನೋ ಹಿಂದೆ
ವ್ಯಂಜನ ನಾನಾ ಸುಭಕ್ಷ್ಯ ಭೋಜ್ಯಂಗಳ
ಭುಂಜಿಸುವೆನು ಮತ್ತೇನೋ ॥ ೧ ॥

ಒಬ್ಬ ಹೆಂಗಸಿಗೆ ಅನ್ನವನಿಕ್ಕುವದಕೆನ್ನು
ತಬ್ಬಿಬ್ಬುಗೊಂಡೆನೋ ಹಿಂದೇ
ನಿರ್ಭರದಿಂದಲಿ ಸರ್ಬರ ಕೂಡಿನ್ನು
ಹಬ್ಬವನುಂಬೆ ಶ್ರೀಹರಿಯೆ ॥ ೨ ॥

ನೀಚತ್ವ ತಿಳಿಯದೆ ಸರ್ವರ ಚರಣಕ್ಕೆ
ಚಾಚಿದೆ ನೊಸಲ ಹಸ್ತಗಳ
ಯೋಚಿಸಿ ನೋಡಲು ಸೋಜಿಗವಾಗಿದೆ,
ವಾಚಕ್ಕೆ ನಿಲುಕದ ಹರಿಯೆ ॥ ೩ ॥

ಮಧ್ಯಾಹ್ನ ಕಾಲಕ್ಕೆ ಅತಿಥಿಗಳಿಗೆ ಅನ್ನ
ಮೆದ್ದೆನೆಂದರೆ ಈಯಗಾಣೇ

ಇದ್ಧರೆಯೊಳಗೆ ಸತ್ಪಾತ್ರರಿಂಗುಣಿಸುವ
ಪದ್ಧತಿಯೇನೋಧರ್ಮಾತ್ಮಾ ॥ ೪ ॥

ಜೀರ್ಣಮಲಿನ ವಸ್ತ್ರಕಾಣದ ಮನುಜಗೆ
ಊರ್ಣ ವಿಚಿತ್ರದವಸನ
ವರ್ಣ ವರ್ಣಗಳಿಂದ ಬಾಹುವದೇನೋ ಸಂ
ಪೂರ್ಣ ಗುಣಾರ್ಣವ ದೇವ ॥ ೫ ॥

ವೈದೀಕ ವೃತ್ತಿಯ ಕೊಡುವಗೆ ಲೌಕೀಕ
ವೈದಿಸುವದು ಬಲುಖ್ಯಾತೇ
ಮೈದುನಗೊಲಿದ ಶ್ರೀ ವಿಜಯ ವಿಠಲ ನಿನ್ನ
ಪಾದಸಾಕ್ಷಿ ಅನುಭವವೋ ॥ ೬ ॥

---

ಈ ಬಗೆಯ ಸ್ವಾನುಭವವನ್ನು ತಿಳಿಸಿ ಈ ದಾಸರು ಹಬ್ಬಮಾಡುವ ಬಗೆಯನ್ನು ತಿಳಿಸುತ್ತಾರೆ.

## ಹಬ್ಬ ಸುಳಾದಿ

### ಧ್ರುವತಾಳ

ಹಬ್ಬಗಳಿವೆ ಕೇಳಿ ಊರ್ಬಿಯೊಳಗೆ ವೈ
ದರ್ಭಿರಮಣ ಕರುಣಾಬ್ಧಿಯೊಲಿದ ಬಳಿಕ
ಒಬ್ಬರಕಾಡಿಬೇಡಿ ಹಬ್ಬಮಾಡಿದರಿಂದ
ಉಬ್ಬುತೀರದು ಕಾಣೊ ಬುಬ್ಬುಧ ಜನರಿಗೆ
ಲಭ್ಯವಾದ ಧಾನ್ಯರುಬ್ಬಿ ಗಂಜಿಯಕಾಸಿ
ಒಬ್ಬ ಸತಿಪತಿ ಇಬ್ಬರಾನಂದದಿಂದ
ಹೆಬ್ಬೆಟ್ಟನಿಂದ ಸವಿದು ಸಭ್ಯರಾಗಿಪ್ಪುದೆ
ಹಬ್ಬವು ಬಲುಹಬ್ಬ ಹಬ್ಬವು ಕಾಣಿರೊ

ನಿರ್ಭಯವಾದ ರತ್ನಗರ್ಭದಲ್ಲಿ ಕುಟೀರ
ಗುಬ್ಬಿಯಗೂಡಿನಷ್ಟು ನಿರ್ಬಂಧವಿಲ್ಲದೆ
ಗರ್ಭವಾಸವರಚಿಸಿ ಹಬ್ಬಮಾಡಿದರದು
ಹಬ್ಬವು ಕಾಣಿರೋ ಹಬ್ಬ ಹಬ್ಬಾ ಹಬ್ಬ
ಕರ್ಬುರನಂತೆ ತಿಂದು ಕೊಬ್ಬಿತಿರುಗುವಂಗೆ
ದುರ್ಭಾಗ್ಯವಲ್ಲದೆ ಹಬ್ಬವೆನಿಸುವದೆ
ಕಬ್ಬುಬಿಲ್ಲನಯ್ಯ ವಿಜಯ ವಿಠಲನಿಗೆ
ದರ್ಭೆಯೇರಿಸಿದರೆ ಸರ್ಬರಕರ ಪಿಡಿವ ॥ ೧ ॥

### ಮಟ್ಟತಾಳ

ಕಾಮಕ್ರೋಧಂಗಳ ಬಿಡುವದೆ ಬಲುಹಬ್ಬ
ನೇಮನಿಷ್ಠೆಗಳ ಮಾಳ್ಪುದೆ ಬಲುಹಬ್ಬ
ಕಾಮನ ಉಪಹತಿಗೆ ಅಂಜುವದೇ ಹಬ್ಬ
ಕಾಮುಕ ಜನಗಳ ಬಿಡುತಿಪ್ಪದೆ ಹಬ್ಬ
ಭೂಮಿಯೊಳಗೆ ಜ್ಞಾನಿಯಾಗುವದೇ ಹಬ್ಬ
ಸ್ವಾಮಿಭೃತ್ಯನ್ಯಾಯ ತಿಳಿಯುವದೇ ಹಬ್ಬ
ವ್ಯೋಮಗಂಗಾಜನಕ ವಿಜಯವಿಠಲನ
ಧಾಮದೊಳಗೆ ಪೂಜೆಮಾಡುವದೇ ಹಬ್ಬ ॥ ೨ ॥

### ತ್ರಿಪುಟತಾಳ

ಬಂದ ಅತಿಥಿಗಳ ಪೂಜಿಸುವದೆ ಹಬ್ಬ
ಮಂದಾಕಿನಿಯಲ್ಲಿ ಮಜ್ಜನವೇ ಹಬ್ಬ
ನಿಂದಕಜನರಲ್ಲಿ ಬೆರೆಯದಿಪ್ಪುದೆ ಹಬ್ಬ
ವಂದಿಸಿ ಗುರುಗಳಿಗೆ ಎರಗುವದೇ ಹಬ್ಬ
ಕುಂದುಸಜ್ಜನರನ್ನು ನುಡಿಯದಿಪ್ಪುದೆ ಹಬ್ಬ
ತಂದೆತಾಯಿಗಳಿಗೆ ಅನುಕೂಲವೇ ಹಬ್ಬ
ಅಂದರೆ ನಗುತ ಸಂತೋಷಪಡುವದೆ ಹಬ್ಬ

ಇಂದು ನಾಳೆಗೆಂಬ ಚಿಂತೆ ಬಿಡುವದೆ ಹಬ್ಬ
ಇಂದ್ರವರ್ಗಉಳ್ಳನಕ ವಿಜಯವಿಠಲನ
ಒಂದೇ ಭಕುತಿಯಿಂದ ಭಜಿಸುವದೇ ಹಬ್ಬ ॥ ೩ ॥

ಅಟ್ಟತಾಳ

ಋಣರೂಪವಾಗದ ಸಂಸಾರವೆ ಹಬ್ಬ
ಗುಣವಂತನಾಗಿ ಸಂಚರಿಸುವದೇ ಹಬ್ಬ
ಕನಸಿಲಿ ಪರಹೆಣ್ಣು ಬಯಸದಿಪ್ಪುದೆ ಹಬ್ಬ
ಮನವಚಕಾಯಕ್ಕೆ ಬಡತನವೇ ಹಬ್ಬ
ಅನಿಮಿಷ ಜಾಗರ ಹರಿವಾಸರವೆ ಹಬ್ಬ
ದಿನಪ್ರತಿದಿನ ಸತ್ಕರ್ಮಾಚರಣೆ ಹಬ್ಬ
ಮಣಿಕರ್ಣಿಕೆಯಲ್ಲಿ ದೇಹತ್ಯಾಗವೆ ಹಬ್ಬ
ತನುವಿಗೆ ವ್ಯಾಧಿಬಾರದಿಪ್ಪುದೆ ಹಬ್ಬ
ಚಿನುಮಯ ಮೂರುತಿ ವಿಜಯವಿಠಲನ
ಮನಸಿನೊಳನುದಿನ ಈಕ್ಷಿಸುವದೆ ಹಬ್ಬ ॥ ೪ ॥

ಆದಿತಾಳ

ಕಾಲನಬಾಧೆಗೆ ಸಿಲುಕದಿಪ್ಪದೆ ಹಬ್ಬ
ಕಾಲಕಾಲಕೆಯಾತ್ರೆ ತೀರ್ಥಮಾಳ್ಪದೆ ಹಬ್ಬ
ಕೇಳುವ ಹರಿಕಥಾಶ್ರವಣವೆ ದೊಡ್ಡ ಹಬ್ಬ
ನಾಲಿಗೆಗೆ ಹರಿನಾಮ ಭಜನೆ ಹಬ್ಬ
ಹಾಳುಹರಟೆ ಬಿಟ್ಟು ಹರಿಯ ನೆನೆವದೆ ಹಬ್ಬ
ಶ್ರೀಲೋಲಪರನೆಂದು ಕೂಗುವದೇ ಹಬ್ಬ
ವಾಲಯಗಯದಲ್ಲಿ ಕುಲಪವಿತ್ರವೆ ಹಬ್ಬ
ಫಾಲಲಿಪಿಗೆ ಮನನೋಯದಿಪ್ಪದೆ ಹಬ್ಬ
ವೇಳೆಗೆ ದೊರೆತದ್ದು ಭುಂಜಿಸುವದೆ ಹಬ್ಬ
ಬೀಳುನುಡಿವರ ಬಿಟ್ಟುಕೊಡುವದೆ ಹಬ್ಬ

ಪಾಲಾಬ್ಧಿಶಯನ ಶ್ರೀವಿಜಯ ವಿಠಲನ
ಊಳಿಗದವನಾಗಿ ಬಾಳ್ಗೈಸುವದೆ ಹಬ್ಬ ॥ ೫ ॥

ಜತೆ

ದಂಪತಿಗಳು ಏಕವಾಗಿಪ್ಪದೇ ಹಬ್ಬ
ಶಂಪದಂತೆ ವಿಜಯ ವಿಠಲ ಹೊಳೆವದೆ ಹಬ್ಬ ॥ ೧ ॥

---

## ಮತಸಾಮರಸ್ಯ

ಮತಸಾಮರಸ್ಯದಲ್ಲಿ ಹರಿದಾಸರ ಸೇವೆ ಅಸಾಧಾರಣವಾಗಿರುವದು. ವೀರಶೈವರಿಗೂ ಬ್ರಾಹ್ಮಣರಿಗೂ ಮುಷ್ಟಾಮುಷ್ಟಿಯಾಗುತ್ತಿದ್ದ ಹೊತ್ತಿನಲ್ಲಿ ಘಟ ಮಟ ಮಧ್ಯಾಹ್ನದಲ್ಲಿ, ಸೊಲ್ಲಾಪುರದಂಥಾ ವೀರಶೈವರ ಕೇಂದ್ರದಲ್ಲಿ ಹಾಡಿರುವ ಕೆಳಕಂಡ ಕೀರ್ತನೆಯು ಅನೇಕ ಜನರನ್ನು ಪ್ರಾಣಾಪತ್ತಿನಿಂದ ಸಲಹಿ, ಮತ ಸಹಾನುಭೂತಿಯನ್ನುಂಟುಮಾಡಿತೆಂಬುದನ್ನು ಇತಿಹಾಸವೇ ತಿಳಿಸುತ್ತದೆ. ಅಂತಹ ಪದಗಳ ಮಾದರಿಗಳೆಂದರೆ—

ಮಧ್ಯಮಾವತಿ — ಅಟ್ಟತಾಳ

ಜಂಗಮರು ನಾವು । ನೀವೇ ನೋಡಿ । ಜಂಗಮರು ನಾವು, ॥ ಪ ॥

ಜಂಗಮರು ನಾವು ಲಿಂಗಾಂಗಿಗಳು
ಮಂಗಳವಂತರ ಭವಿಗಳೆಂಬರೆ ಬರಿದೆ ॥ ಅ ॥

ಶಿವಗುರುದೈವ ಕೇಶವ ನಮ್ಮ ಮನೆದೈವ
ವರದಮೋಹನ ನಮ್ಮ ಗುರು ಶಾಂತೇಶ
ಶಿವಗುರು ದ್ರೋಹಮಾಡಿದ ಪರವಾದಿಗೆ
ರವರವ ನರಕದೊಳುರುಳುವದೇ ಗತಿ ॥ ೧ ॥

ವಿಭೂತಿ ನಮಗುಂಟು ವಿಶ್ವೇಶನಮಗುಂಟು
ಶೋಭನ ಮುದ್ರೆಯು ನಮಗುಂಟೊ

ಶ್ರೀ ಭಾಗೀರಥೀ ಅಗ್ನಿ ಮಜ್ಜನವುಂಟು
ಸೌಭಾಗ್ಯವೀವ ಮಹಂತಿನ ಮಠದವರು ॥ ೨ ॥

ವಿರಕ್ತರು ನಾವು ಶೀಲವಂತರು ನಾವು
ವೀರಭದ್ರನ ಪ್ರಿಯಭಕ್ತರಾವು
ಕಾರಣಕರ್ತ ಶ್ರೀ ಪುರಂದರ ವಿಠಲನ
ಕಾರುಣ್ಯಕೆ ಮುಖ್ಯ ಪಾತ್ರರು ನಾವು ॥ ೩ ॥

ಎಂಬಂತಿದೆ. ಇದೇ ರೀತಿಯ ಮತ್ತೊಂದು ಪದವು—

**ಪಂತುವರಾಳಿ — ಆದಿತಾಳ**

ಗುರುವಿನ ಧರ್ಮಕೋರೇಣ್ಯದ ಭಿಕ್ಷ । ಅರಿತು ನೀಡಲು ಮೋಕ್ಷ
ಮರೆತು ಬಿಟ್ಟರೆ ಕಪಾಳ ಮೋಕ್ಷ । ಯಮನಲ್ಲಾಹದೊ ಶಿಕ್ಷ ॥ ಪ ॥

ಖಂಡುಗ ಜೀವನ ಕೈಲ್ಹಿಡಕೊಂಡು । ಮುಂಡೇ ಬಾಗುತ ಮನೆಮನೆಗೆ
ಅಂಡಲಿಯುತ ಬಂದು ನಿಲ್ಲಲು ಮೋರೆಯ । ಹಿಡಕೊಂಡರ್ಯಮ ದಂಡನೆ ತಪ್ಪದು ॥ ೧ ॥

ಜಂಗಮರೇ ಜಗತ್ಪಾವನರು । ಲಿಂಗಾಂಗಿಗಳೇ ನಿಸ್ಸಂಗಿಗಳು
ಮಂಗಳ ಮಹಿಮ ಸಿತಾಂಗನ ಭಜಕರ । ಅಂಗುಷ್ಟವ ತೊಳೆದಗ್ಗಣಿ ಧರಿಸೋ ॥ ೨ ॥

ಐವತ್ತಾರು ದೇಶದೊಳಿಪ್ಪತ್ತೊಂದು ಸಾವಿರದಾರನೂರು
ಕೈವಲ್ಯ ಸಾಧನ ಮಂತ್ರವ ಜಪಿಸಲು । ಭವವೆತ್ತಣದೊ ಮೋಹನ ವಿಠಲ ॥ ೩ ॥

---

## ಗ್ರಂಥವಿಮರ್ಶೆಯ ವಿನೋದ

ಮಹಾಭಾರತವನ್ನು ಹಿಂದಿನಿಂದ ಇಂದಿನವರೆಗೆ ಎಷ್ಟೋ ಜನರು ವಿಮರ್ಶಿಸಿದ್ದಾರೆ. ವಿಮರ್ಶಕರು ತಮಗೆ ತೋರಿದ ನ್ಯಾಯದಂತೆ ಯಾರನ್ನಾ

ದರೂ ನಿಂದಿಸಿದರೆ, ಜನರು ಅವರನ್ನು ನಿಂದಿಸುತ್ತಾರೆ. ಹರಿದಾಸರು ಏಳೇ ನುಡಿಯ ಪದದಲ್ಲಿ ಪ್ರಾಸಬದ್ಧವಾಗಿ ಹಾಕುತ್ತಾ ಹೇಗೆ ವಿಮರ್ಶೆಮಾಡಿರುವ ರೆಂಬುದನ್ನು ಇಲ್ಲಿ ನೋಡಬೇಕು.

**ಮಧ್ಯಮಾವತಿ — ಅಟ್ಟತಾಳ**

ಬಂದಿದೆ ದೂರು ಬರಿದೆ ಪಾಂಡವರಿಗೆ
ಕೊಂದರು ಕಾದಾಡಿ ಕೌರವರ ಎಂದು ॥ ಪ ॥

ಮುನ್ನಿನಿಂದ ಮಿಗೆ ದ್ವೇಷವ ತಾಳಿ
ಉನ್ನತ ಪಗಡೆಯ ಲೆತ್ತವನಾಡಿ
ತನ್ನ ಕುಹಕದಿಂದ ಕುರುವಂಶವನೆಲ್ಲ
ಛಿನ್ನಗೈದವ ಶಕುನಿಯೊ ಪಾಂಡವರೋ ॥ ೧ ॥

ಮರಣ ತನ್ನಿಚ್ಛೆಯೊಳಾದ ಗಂಗೆಯ ಸುತ
ಧುರದಿ ಶಿಖಂಡಿಯ ನೆವದಿಂದಲಿ
ಸರಳು ಮಂಚದ ಮೇಲ್ಮಲಗಿ ಮೊಮ್ಮನ ಕುಲ
ವರೆಸಿಕೊಂದವ ಭೀಷ್ಮನೊ ಪಾಂಡವರೋ ॥ ೨ ॥

ಮಗನ ನೆವದಿ ತನ್ನತನುವ ಬಿಸುಟು ಸುರ
ನಗರಿಗೈದಿದನು ವೈರಾಗ್ಯದಿಂದ
ಜಗವರಿಯಲು ಬಂದು ಕುರುವಂಶವನೆಲ್ಲ
ಬಗೆದು ಕೊಂದವ ದ್ರೋಣನೊ ಪಾಂಡವರೊ ॥ ೩ ॥

ತೊಟ್ಟ ಬಾಣವ ತೊಡಲೊಲ್ಲದೆ ಘೂತಿಗೆ
ಕೊಟ್ಟ ಭಾಷೆಗೆ ಐವರ ಕೊಲ್ಲದೆ
ನೆಟ್ಟನೆ ರಣಮುಖದಲಿ ಕಾದಿಪ್ರಾಣವ
ಬಿಟ್ಟು ಕೊಂದವನು ಕರ್ಣನೊ ಪಾಂಡವರೋ ॥ ೪ ॥

ಮಥನಿಸಿ ಸೂತತನವ ಮಾಡಿ ರಥದೊಳು
ಅತಿಹೀನಗಳೆಯುತ್ತ ರವಿಸುತನ
ರಥದಿಂದಿಳಿದು ಬಿದ್ದು ಕುರುವಂಶವನೆಲ್ಲ
ಹತಮಾಡಿದವನು ಶಲ್ಯನೊ ಪಾಂಡವರೋ ॥ ೫ ॥

ಜಲದೊಳು ಮುಳುಗಿ ತಪವಮಾಡಿ ಕುರುರಾಯ
ಬಲವನೆಬ್ಬಿಸಿ ಕಾದುವೆನೆನುತ
ಕಲಿ ಭೀಮಸೇನನ ಧ್ವನಿಯ ಕೇಳಿ ಬಂದು
ಕುಲವ ಕೊಂದವನು ಕೌರವನೊ ಪಾಂಡವರೋ ॥ ೬ ॥

ಕೌರವ ಪಾಂಡವರೊಳು ಭೇದವುಟ್ಟಿಸಿ
ಕುರುಕ್ಷೇತ್ರದಿ ಫೌಜು ಜೋಡಿಸಿ ಕಾದಿಸಿ
ಕುರುವಂಶವನೆಲ್ಲ ಸರಕುಮಾಡದೆ ಸಂ
ಹರಿಸಿದ ನಾದಿಕೇಶವನೊ ಪಾಂಡವರೋ

---

## ಹರಿಭಕ್ತಗೆ ಗ್ರಹಬಾಧೆಗಳಿಲ್ಲ

ಕಾಂಭೋದಿ ಜಂಪೆತಾಳ

ಸಕಲ ಗ್ರಹಬಲ ನೀನೆ ಸರಸಿಜಾಕ್ಷ
ನಿಖಿಲ ವ್ಯಾಪಕರೊಡೆಯ ವಿಶ್ವವ್ಯಾಪಕನೋಹಿ ॥ ಪ॥

ರವಿಚಂದ್ರಬುಧ ನೀನೆ ರಾಹುಕೇತುವುನೀನೆ
ಕವಿಶನಿಗುರುಮಂಗಳಾನು ನೀನೇ
ದಿವಸವಾರವು ನೀನೆ ನವವಿಧಾನ್ನವು ನೀನೆ
ಭವರೋಗಹರ ನಮ್ಮ ರಕ್ಷಕನು ನೀನೆ ॥ ೧ ॥

ಪಕ್ಷಮಾಸವು ನೀನೆ ಪರ್ವಕಾಲವು ನೀನೆ
ನಕ್ಷತ್ರಯೋಗ ಕರಣಗಳು ನೀನೆ

ಅಕ್ಷಯವೆಂದು ದ್ರೌಪದಿಯ ಮಾನವ ಕಾಯ್ದ
ಪಕ್ಷಿವಾಹನ ದೀನರಕ್ಷಕನು ನೀನೆ ॥ ೨ ॥

ಋತುಕಾಲವು ನೀನೆ ವ್ರತನೇಮವೂ ನೀನೆ
ಕ್ರತುಸಂಧ್ಯವಂದನಕರ್ಮ ನೀನೇ
ಜಿತವಾಗಿ ಎನ್ನೊಡೆಯ ಪುರಂದರ ವಿಠಲ
ಸ್ತುತಿಗೆ ಸಿಲುಕದ ಮಹಾತ್ಮಕ ಹರಿಯು ನೀನೆ ॥ ೩ ॥

---

## ಹರಿಭಕ್ತರಿಗೆ ಯಾವಾಗಲೂ ಕಲ್ಯಾಣ

### ಕಾಂಬೋದಿ — ಜಂಪೆತಾಳ

ಸತತ ಕಲ್ಯಾಣ ಅಚ್ಯುತ ಭಟರಿಗೆ
ರತಿಪತಿಪಿತನಂಘ್ರಿರತ ಮಹಾತ್ಮರಿಗೆ ॥ ಪ ॥

ಅರಿಗಳೇ ಸಖರಕ್ಕು ಅತಿವಿಷಾಮೃತವಕ್ಕು
ಉರಗ ಪೂಮಾಲೆಯಕ್ಕು ಉರಿತಣ್ಣಗಕ್ಕು
ಶರಧಿಗೋಷ್ಪದವಕ್ಕು ಶರಘಾತ ಚೆಂಡಕ್ಕು
ನರಹರಿಯ ನಾಮವನು ನಂಬಿ ಭಜಿಪರಿಗೆ ॥ ೧ ॥

ಆಧಿವ್ಯಾಧಿಗಳಿಲ್ಲ ಅಶುಭವಾರ್ತೆಗಳಿಲ್ಲ
ಕ್ರೋಧನೃಪಭಯವಿಲ್ಲ ಕಾಕುಮತಿಯಿಲ್ಲ
ಖೇದಮನಕಿಲ್ಲೆಂದು ಖಿನ್ನತೆಯು ಮುಖಕಿಲ್ಲ
ಶ್ರೀಧವನ ನವಭಕುತಿ ಶೀಲಜೀವರಿಗೆ ॥ ೨ ॥

ಪಾಪ ತಾಪಗಳೋಟ ಪರಿದು ಬಹ ಎಡರೋಟ
ಆಪತ್ತುಗಳಿಗೋಟ ಆಲಸ್ಯಕೋಟ
ಕೋಪದಾರಿದ್ರ್ಯತೆಗೋಟ ಕಲಿವ್ಯಸನಮದಕೋಟ
ಶ್ರೀಪ್ರಸನ್ವೇಂಕಟನ ನಂಬಿ ಭಜಿಪರಿಗೆ ॥ ೩ ॥

## ಕರ್ಕಶಿಯಾದ ಹೆಂಡತಿಯ ಬಗೆ

### ಪೂರ್ವಿ — ಅಟ್ಟತಾಳ

ಹೆಂಡತೀ ಪ್ರಾಣ ಹಿಂಡುತೀ । ದೊಡ್ಡ
ಕೊಂಡ ಕೋಡಗನಂತೆ ಮಾಡಿ ಕುಣಿಸುತ್ತೀ ॥ ಪ ॥

ಹೊತ್ತಾರೆ ಯೇಳುತ್ತ ಹೊರಗೆ ತಿರುಗಾಡುತ್ತೀ
ಹೊತ್ತು ಹೋಯಿತು ಭತ್ಯತಾರೆನ್ನುತ್ತೀ
ಉತ್ತಮ ಗುರುಹಿರಿಯರ ಮಾತಮೀರುತ್ತಿ
ಮೃತ್ಯುದೇವತೆಯಂತೆ ಮನೆಯೊಳಗಿರುತೀ ॥ ೧ ॥

ಇಲ್ಲದ್ದ ಬೇಡುತ್ತ ಸುಳ್ಳುಮಾತಾಡುತ್ತ
ಒಳ್ಳೇ ಊಟವ ಉಣಬೇಕೆನ್ನುತ್ತೀ
ಎಳ್ಳಷ್ಟು ಕೆಲಸ ಮಾಡಲಾರೆನೆಂತೀ
ಎಲ್ಲೆಲ್ಲು ತಲೆಯೆತ್ತದ್ಹಾಂಗೆ ಮಾಡುತ್ತೀ ॥ ೨ ॥

ಹಿರೇತನಕ್ಹೋಗುತಿ ಗರುವಿಕೆಮಾಡುತಿ
ನೆರೆಹೊರೆಯರ ಕೂಡ ಜಗಳಾಡುತಿ
ಶಿರಿಪುರಂದರ ವಿಠಲನ ಸ್ಮರಿಸದೆ
ದುರಿತಕ್ಕೆ ಗುರಿಯಾಗಿ ನಿಲ್ಲುತ್ತೀ ॥ ೩ ॥

---

## ಎಲ್ಲಾ ಕಲ್ಲು ಎಲ್ಲಾ ಮಣ್ಣು

### ಛಾಪುತಾಳ.

ಕಲ್ಲಿಂದ ಜಗಕಲ್ಲಿಂದ । ಕಲ್ಲುಬಿಟ್ಟರೆ
ಇಲ್ಲ ಮತ್ತೆ ಗತಿಯೆಂದಾ ॥ ಪ ॥

ಕಲ್ಲು ಕಡಲಕಡೆಯೆ ಅಮೃತವೇ ಪುಟ್ಟಿತು
ಕಲ್ಲು ಗೋವರ್ಧನ ಮಳೆಯಿಂದ ಕಾಯಿತು

ಕಲ್ಲು ರಾಮರ ಪಾದಸೋಕಿ ಹೆಣ್ಣಾಯಿತು
ಕಲ್ಲುಲಂಕೆಗೆ ಮಾರ್ಗ ತಾನಾಯಿತು ॥ ೧ ॥

ಕಲ್ಲುಕೊರೆಯಲು ಮೂರ್ತಿ ತಾನಾಯಿತು
ಕಲ್ಲಿನೊಳಗೆ ದೇವರು ಮೂಡಿತು
ಕಲ್ಲು ದೇವರ ಗುಡಿಗೋಪುರವಾಯಿತು
ಕಲ್ಲು ಕೋಟಿ ಕೋಟಿ ಬೆಲೆಯಾಯ್ತು ॥ ೨ ॥

ಕಲ್ಲೆಂದು ಜರಿಯದೆ ಕಾಲಕಾಲದಿ ನಿಮ್ಮ
ಕಲ್ಲುಮನಸು ಬಿಟ್ಟು ಪೂಜೆಯ ಮಾಡಿರೊ
ಕಲ್ಲಿನೊಳಗಿದ್ದು ವಿಜಯವಿಠಲಸ್ವಾಮಿ
ಎಲ್ಲಾರಿಗು ಸದ್ಗತಿಯ ನೀವಾ ॥ ೩ ॥

## ಮೋಕ್ಷಕ್ಕೆ ಮಣ್ಣಿನಂತೆ

ಮಣ್ಣೆಂದ । ಎಲ್ಲಾ ಮಣ್ಣೆಂದ
ಮಣ್ಣು ಬಿಟ್ಟವರಿಗೆ ಇನ್ನು ಜೋಡಿಲ್ಲ ॥ ಪ ॥

ದೇವರ ಗುಡಿಮನೆ ಮಠವೆಲ್ಲ ಮಣ್ಣು
ಆವಾಗ ಅಡುವ ಮಡಿಕೆ ತಾಮಣ್ಣು
ಕೋವಿದರರಸನ ಕೋಟೆಯೆಲ್ಲಾ ಮಣ್ಣು
ಪಾವನ ಗಂಗೆಯ ತಡಿಯೆಲ್ಲ ಮಣ್ಣು ॥ ೧ ॥

ಅನ್ನ ಉದಕ ಊಟ ಮೀಯೋಣ ಮಣ್ಣು
ಬಣ್ಣ ಭಂಗಾರ ಬೊಕ್ಕಸವೆಲ್ಲ ಮಣ್ಣು
ಉನ್ನಂತವಾದ ಪರ್ವತವೆಲ್ಲ ಮಣ್ಣು
ಕಣ್ಣು ಮೂರುಳ್ಳವನ ಕೈಲಾಸ ಮಣ್ಣು ॥ ೨ ॥

ಭತ್ತ ಭರಣ ಧಾನ್ಯ ಬೆಳೆಯೋದು ಮಣ್ಣು
ಸತ್ತವರ ಹೂಳಿ ಸುಡುವುದು ಮಣ್ಣು

ಉತ್ತಮವಾದ ವೈಕುಂಠವೆ ಮಣ್ಣು
ಕರ್ತೃ ಪುರಂದರ ವಿಠಲನ ಮನೆ ಮಣ್ಣು ॥ ೩ ॥

---

## ಪ್ರಾಚೀನ ಕರ್ಮವನ್ನು ಕುರಿತು ವಿನೋದದಿಂದ

### ಕಾಂಬೋದಿ ಜಂಪೆತಾಳ

ಪ್ರಾಚೀನ ಕರ್ಮವಿದು ಬಿಡಲರಿಯದು
ಯೋಚನೆಯಮಾಡಿ ನೀ ಮರುಳಾಗದಿರು ಮನುಜ ॥ ಪ ॥

ಸೇತುವೆಯ ಕಟ್ಟಿ ಲಂಕೆಗೆ ಹಾರಿ ಹನುಮಂತ
ಖ್ಯಾತಿಯಿಂದಾ ರಾವಣನ ಕೊಲ್ಲಿಸಿ
ಸೀತೆಯನು ತಂದು ಶ್ರೀರಾಮರಿಗೆ ಕೊಡಲಾಗಿ
ಪ್ರೀತಿಯಲಿ ಕೌಪೀನ ಬಿಡಿಸಲಿಲ್ಲ ಹರಿಯು ॥ ೧ ॥

ಲೋಕದೊಳಗೆಲ್ಲ ಸಂಚರಿಸುವ ರವಿರಥಕೆ
ಏಕಗಾಲಿಯು ಏಳು ಕುದುರೆಗಾಳೂ
ಚೋಕೆಯಿಂದಲಿ ಹಿಡಿದು ನಡೆಸುವ ಅರುಣನಿಗೆ
ಬೇಕೆಂದು ಕಾಲುಗಳ ಕೊಡಲಿಲ್ಲ ಹರಿಯು ॥ ೨ ॥

ಸಾಸಿರನಾಮದೊಡೆಯಾದಿಕೇಶವನ
ಬೇಸರದೆ ಹೆಗಲ ಮೇಲಿಟ್ಟುಕೊಂಡು-ಆ
ಕಾಶಮಾರ್ಗದಲಿ ಚರಿಸುವ ಗರುಡನಿಗೆ
ನಾಸಿಕದ ಕೊನೆಡೊಂಕ ತಿದ್ದಲಿಲ್ಲ ಹರಿಯು

---

## ಕಾನಾಗಿ ಹರಿದು ಬರುವ ಪ್ರಾಸವೈಭವ

ಇಂದ್ರನ್ನ ರಾಜ್ಯವ ತಂದನ್ನ ಶುಭಗುಣ
ಸಾಂದ್ರನ್ನ ಸುರಸಭಾ ಚಂದ್ರನ್ನ

ನಂದನ್ನ ಕಂದನ್ನ ವಂದ್ಯನ್ನ ನಿತ್ಯಾ
ನಂದನ್ನ ತುತಿಪೆ ಮುಕುಂದನ್ನ ॥ ೧॥

ಶೌರಿಯ ನೆನೆವೆನುದಾರಿಯ ಕುಜನರ
ವೈರಿಯ ಮಂದರೋದ್ಧಾರಿಯ
ಹರೀಯ ದುರಿತ ನಿವಾರೀಯ ಸುಜನೋಪ
ಕಾರೀಯ ಮುಕುತಿಗೆ ದಾರೀಯ ॥ ೨ ॥

ನೀಲನ ನಿಜಜನಪಾಲನ ನಿರ್ಮಲ
ಶೀಲನ ಸುಚರಿತ್ರ ಜಾಲನ್ನ
ಬಾಲನ ಸಂಗೀತಲೋಲನ ತುತಿಪೆನು
ಕಾಲನವರಿಗೆ ಅನಾಲನ್ನ ॥ ೩ ॥

ಇಷ್ಟನ್ನ ದುರಿತಾಘರಟ್ಟನ್ನ ಜಗಕತಿ
ಧಿಟ್ಟನ್ನ ಸತತ ಸಂತುಷ್ಟನ್ನ
ಶಿಷ್ಟನ್ನ ಶುಭಗುಣ ಪುಷ್ಟನ್ನ ತುತಿಪೆನು
ಕೃಷ್ಣನ್ನ ಕೃತಿಗಿಂಬುಗೊಟ್ಟನ್ನ ॥ ೪ ॥

ರಂಗನ್ನ ಕರುಣಾಂತರಂಗನ್ನ ಖಳಕುಲ
ಭಂಗನ್ನ ನಿಜಜನ ಸಂಗನ್ನ
ಅಂಗನಾಜನಕೆ ಅನಂಗನ್ನ ನಿತ್ಯ ಶು
ಭಾಂಗನ್ನ ನಮಿಪೆನುತ್ತುಂಗನ್ನಾ ॥ ೫ ॥

---

## ಯಮಕ ಆರ್ಯಗಳು

### ಸುಧೀಷ್ಟೆಗೆ ಬೃಹನ್ನಡೆಯ ಭರವಸೆ

ಕಾಯಿತವಾನುಗ್ರಹ ಒಳಿ
ಕಾಯತವಾಗಿರಲಿ ಕಾಳ್ಕೆ ಕಾಯಿತವ

ತಾಯಿ ತವರಮನೆಯೊಳು ಗುರು
ತಾಯಿತವರ ಗೆಲುವೆ ನಾತ ತಾಯಿತವ ॥ ೧ ॥

## ಉತ್ತರ ಕುಮಾರನಿಗೆ ಆರತಿ

ರಾಜನಳಿನ ಮುಖಿಯರು ನೀ
ರಾಜನ ಬೆಳಗಿದರು ಗೆಲುವನೇ ಕದನ
ರಾಜನ ಸುತನಯನದಿ ನೀ
ರಾಜನ ಕುದರಿಸಲು ಗೆಲುವನೇಕದನ ॥ ೧ ॥

## ಬೃಹನ್ನಡೆಯು ಉತ್ತರ ಕುಮಾರನಿಗೆ

ನೀತರು ವೀಕ್ಷಣವೇರಿ ಮ
ಹೀತಳ ಕಿಮು ಚಾಪ ಸಿಂಜಿನೀ ತರುವಿ ?
ನೀತರು ವೀರಭಟರುಗಳ
ನ್ನೈತರಿಸಿಹ ಕುರುಪ ಬಾಲನೀತರುವಿ ॥ ೧ ॥

---

## ಕೃಷ್ಣನ ಕೊಳಲು

ಕೊಳಲು ಕೈಯಲಿ ಕೊಳಲು
ಕೃಷ್ಣನ ಕೊಳಲು ಧ್ವನಿತುಂಬಿತಾ ಕೊಳಲು
ಕೊಳಲು ಕೇಳಿ ಮುತ್ತಿಕೊಳಲು
ಸರ್‍ವರ ಕೊಳಲು ವೈಕುಂಠವ ಒಳಕೊಳಲು ॥ ೧ ॥

---

## ತತ್ವಸುವಾಲಿಯು ತ್ರಿಪದಿಗಳ ಮಾದರಿ

ಪತಿತನಾನಾದರೂ ಪತಿತಪಾವನ ನೀನು
ರತಿನಾಥ ಜನಕ ನಗಪಾಣಿ ॥ ನಗಪಾಣಿ
ನೀನಿರಲು ಇತರ ಚಿಂತ್ಯಾಕೋ ಎನಗಿನ್ನು ॥ ೧ ॥

ನಡೆನುಡಿಗಳಪರಾಧ ಒಡೆಯ ನೀನೆಣಿಸಿದರೆ
ಬಡವನಾನೆಂತೂ ಬದುಕಾಲೋ ॥ ಬದುಕಲೋ
ಕರುಣಾಳು ಕಡೆಬೀಳ್ವದೆಂತೋ ಭವದಿಂದ ॥ ೨ ॥

ಏಸೇಸು ಕಲ್ಪದಲಿ ದಾಸನಾನಿನಗಯ್ಯ
ಈಶನೀನೆಂಬೋ ನುಡಿಸಿದ್ಧ ॥ ನುಡಿಸಿದ್ಧ
ವಾಗಿರಲುದಾಸೀನವಮಾಡೋದುಚಿತಲ್ಲಾ ॥ ೩ ॥

ಆವಯೋನಿಯೊಳಿರಿಸು ಆವಲೋಕದೊಳಿರಿಸು
ಆವಾಗ ನಿನ್ನ ನೆನೆವಂತೆ ॥ ನೆನೆವಂತೆ
ಕರುಣಿಸೋ ದೇವಕೀಕಂದಾ ದಯದಿಂದ ॥ ೪ ॥

ಶಿಷ್ಯನೆಂದೆನಿಸೆನ್ನ ಭ್ರಷ್ಟನೆಂದೆನಿಸು ಸ
ರ್ವೋತ್ಕೃಷ್ಟ ಮೂರುತಿಯೇ ಜನರಿಂದ ॥ ಜನರಿಂದ
ನುಡಿಸಿದ್ದು ಇಷ್ಟವೇ ಕಾಣೋ ಎನಗಿನ್ನು ॥ ೫ ॥

ಶರಣಪಾಲಕನೆಂಬ ಬಿರುದಿದ್ದ ಕಾರಣ
ಪೊರೆಯದಿರೆ ಎನ್ನ ನಗರೇನೋ ॥ ನಗರೇನೊ
ಮೂಲೋಕದರಸನಾ ನಿನ್ನ ಬಿಡೆ ಕಂಡ್ಯ ॥ ೬ ॥

ಪಾಪಪುಣ್ಯಗಳು ಬರಲಾಪವೇನಿನ್ನು ಳಿದು
ಪ್ರಾಪಕನು ನೀನು ಇರಲಾಗಿ ॥ ಇರಲಾಗಿ
ತಿಳಿಯದುದೆ ಪಾಪ ತಿಳಿಯುವದೇ ಮಹಪುಣ್ಯ ॥ ೭ ॥

ಮನವೆ ಆಲೋಚಿಸಿಕೊ ನಿನಗಿದ್ದ ಚಿಂತೆ ನ
ಮ್ಮನಿರುದ್ಧಗಿಲ್ಲೇ ಅನುಗಾಲ ॥ ಅನುಗಾಲ
ಸಲಹುವವ ಬಿನುಗು ಮಾನವರ ಬಿಡುವೋನೇ ॥ ೮ ॥

ಭಂಡ ಮನವೇ ಕೇಳು ಕಂಡಕಂಡವರಿಗಿ
ನ್ನಂಡಲೆದರೇನು ಪುರುಷಾರ್ಥ ॥ ಪುರುಷಾರ್ಥ
ಸ್ವಾಮಿಪದ ಪುಂಡರೀಕವನೇ ನೆರೆನಂಬು ॥ ೯ ॥

ಅಶನವಸನಗಳೀವ ವಸುದೇವಸುತನಿರಲು
ಹುಸಿಯಾಗಿ ಬದುಕೋ ನರರೀಗೆ || ನರರಿಗಾ
ಳ್ಪರಿದರೆ ಹಸಿವಿಯಡಗುವದೇ ಎಲೆ ಜೀವಾ || ೧೦ ||

ಹಿಂದೆ ಜನ್ಮಾಂತರದಿ ತಂದು ಕೊಟ್ಟವರಾರು
ಇಂದುಮುಂದೀವ ಧೊರೆಯಾರು || ಧೊರೆಯಾರು
ಎಲೆಮನವೆ ಮಂದಮತಿಯಾಗೀ ಕೆಡದೀರು || ೧೧ ||

ತತ್ತತ್ವದಾರ್ಥದಲಿ ತತ್ತದಾಕಾರನಾ
ಗೆತ್ತ ನೋಡಿದರೂ ಇರುತಿಪ್ಪ || ಇರುತಿಪ್ಪ
ಶ್ರೀ ಹರಿಗೆ ಭೃತ್ಯನೆಂಬುವದೇ ಬಲು ಧರ್ಮ || ೧೨ ||

ನರಕ ಸ್ವರ್ಗಗಳೆಂಬುವೆರಡು ಇಲ್ಲಿಹವು ವಿ
ಸ್ಮರಣೆಯೀ ನರಕ ಸ್ಮೃತಿ ಸ್ವರ್ಗ|| ಸ್ಮೃತಿಸ್ವರ್ಗ
ವಿರೆ ಬಾಹ್ಯನರಕ ಭಯಕಂಜೇ ಎಂದೆಂದೂ || ೧೩ ||

ಅಪರಾಧಿ ನಾನೆಂಬುದುಪಚಾರ ಮಾತ್ರ ನಿನ
ಗಪರಾಧಿಯೊಂಬೋದಿಳೆಯೊಳು || ಇಳೆಯೊಳು
ಇನ್ನುಂಟೆ ಅಪರಾಧಿಯೊಂಬೋಧಪರಾಧ || ೧೪ ||

ಇದಕ್ಕಿಂತ ಉಪದೇಶ, ಇದಕ್ಕಿಂತ ಮನಸ್ಸನ್ನು ಕರಗಿಸುವ ಮಾತು ಕನ್ನಡ ಭಾಷೆಯಲ್ಲಿಲ್ಲ. ಜೀವನದ ಯಾವದೊಂದು ವಿಷಯದ ಮೇಲೂ ಹರಿದಾಸರು ಹಾಡಿದ ಹಾಡುಗಳಿವೆ. ಮಾತುಗಳು ಮಾಂಸಗ್ರಂಥಿಯನ್ನು ನಡುಗಿಸುತ್ತವೆ. ಮನಸ್ಸನ್ನು ಮೃದುಮಾಡುತ್ತವೆ ; ಶಾಂತರಸದಲ್ಲಿ ತನ್ಮಯತ್ವವನ್ನುಂಟುಮಾಡುತ್ತವೆ, ಮಾನವನು ದೇವತೆಯಾಗುತ್ತಾನೆ.

ಇದು ದಾಸಸಾಹಿತ್ಯದ ವೈಶಿಷ್ಟ್ಯ.

## ೬ ಬ್ರಹ್ಮಾನಂದ

ಶ್ರೀ ಹರಿಭಕ್ತಿಯಿಂದುಂಟಾದ ಬ್ರಹ್ಮಾನಂದ ಸಾಮ್ರಾಜ್ಯದಲ್ಲಿ ನಿರಂತರ ಸುಖಾನುಭವ ಮಾಡುತ್ತಿರುವ ಭಗವಾನ್ ನಾರದ ಮಹರ್ಷಿಗಳು "ಅಥಾತೋ ಭಕ್ತಿಂ ವ್ಯಾಖ್ಯಾಸ್ಯಾಮಃ" ಎಂಬ ಸೂತ್ರದಿಂದಾರಂಭಿಸಿ "ಯಇದಂ ನಾರದ ಪ್ರೋಕ್ತಂ ಶಿವಾನುಶಾಸನಂ ವಿಶ್ವಸಿತಿ, ಶ್ರದ್ಧತ್ತೇ, ಸಭಕ್ತಿಮಾನ್ ಭವತಿ, ಸಪ್ರೇಷ್ಠಂಲಭತೇ, ಸಪ್ರೇಷ್ಠಂಲಭತೇ ;" ಎನ್ನುವವರೆಗೆ ಐದು ಅಧ್ಯಾಯಗಳಲ್ಲಿ ಉಪದೇಶಿಸಿರುವ ೮೪ ಸೂತ್ರಗಳು ಸಕಲ ಶಾಸ್ತ್ರ ಸಾರಭೂತ ಗಳಾಗಿರುತ್ತವೆ. ಸೂತ್ರ ಗ್ರಂಥಗಳ ಜಾತಿಯಲ್ಲಿ ಒಂದೇ ಪುಟದಲ್ಲಿ ಬರೆದಿಡುವಷ್ಟು ಅಡಕವಾದ ಮತ್ತು ಸ್ವಯಂ ಪೂರ್ಣವಾದ ಸೂತ್ರ ಗ್ರಂಥ ನಾರದಭಕ್ತಿ ಸೂತ್ರಗಳನ್ನು ಬಿಟ್ಟರೆ ಮತ್ತೊಂದಿರುವುದಿಲ್ಲ. ವ್ಯಾಸಾದಿ ಮಹರ್ಷಿಗಳ ಸೂತ್ರಗಳು 'ಅಥಾತೋಬ್ರಹ್ಮಜಿಜ್ಞಾಸಾ ಅಥಾತೋಧರ್ಮಜಿಜ್ಞಾಸಾ' ಎಂಬಂತೆ ಜಿಜ್ಞಾಸಾ ರೂಪವಾಗಿದ್ದರೆ,ನಾರದರ ಸೂತ್ರಗ್ರಂಥವು ಹಾಗಿರದೆ ಸಾಧನೆಯಿಂದ ಸಿದ್ಧಿ ಪಡೆದ ಸ್ವಾನುಭವದ ವ್ಯಾಖ್ಯಾನ ರೂಪವಾಗಿರುತ್ತದೆ. ಆದುದರಿಂದ ಇತರ ಸೂತ್ರ ಗ್ರಂಥಗಳಿಗೆ ವಿವಿಧ ಭಾಷ್ಯಕಾರರಾದಂತೆ ನಾರದ ಸೂತ್ರಗ್ರಂಥಕ್ಕೆ ಆಗಿಲ್ಲ. ಶಾಂಡಿಲ್ಯ ಮೊದಲಾದ ಭಕ್ತಿಸಾಧಕರು ಮತಭೇದ ದಿಂದ ತಮ್ಮದೇ ಆದ ಪ್ರತ್ಯೇಕ ಸೂತ್ರಗಳನ್ನು ಬರೆದಿದ್ದರೂ, ಅವುಗಳನ್ನು ನಾರದರು ಖಂಡಿಸದೆ ಅವರುಗಳ ಮತ ಹೀಗಿದೆಯೆಂದು ಮಾತ್ರ ತಿಳಿಸಿ, ತಮ್ಮ ಅನುಭವದಿಂದ ಸಿದ್ಧವಾದ ಸಂಗತಿಗಳನ್ನು ಸೂತ್ರವತ್ತಾಗಿ ಬರೆದಿರುತ್ತಾರೆ. ಶ್ರುತಿ ಸಮೂಹದಲ್ಲಿ ಹುಡುಕುತ್ತ ಹೊರಟರೆ, ಋಗ್ವೇದ ಎಂಟನೇ ಮಂಡಲದಲ್ಲಿ ನಾರದರು ಒಬ್ಬ ಪ್ರಸಿದ್ಧ ಮಂತ್ರದ್ರಷ್ಟರೆಂದು ಗೊತ್ತಾಗುತ್ತದೆ. ಸ್ಮೃತಿ ಸಮೂಹದಲ್ಲಿ ಹುಡುಕುತ್ತ ಹೊರಟರೆ, ಇವರ ಹೆಸರಿನದೇ ಆದ "ನಾರದ ಸ್ಮೃತಿ"ಯಿದ್ದು ಇವರೊಬ್ಬ ಸಂಪ್ರದಾಯ ಪ್ರವರ್ತಕರಾಗಿರುವರೆಂದು ಗೊತ್ತಾಗುತ್ತದೆ. ಶೈವ,ವೈಷ್ಣವ, ಶಾಕ್ತ, ಹೀಗೆ ಯಾವ ಪುರಾಣಗಳಲ್ಲಿ ನೋಡಿ ದರೂ ನಾರದರು ಮುಖ್ಯ ಪಾತ್ರವಹಿಸಿರುವುದು ಕಂಡುಬರುತ್ತದೆ. ಯುಗ ಪುರುಷರಾದ ಇವರು ಕಾವ್ಯಗಳಲ್ಲಿ ಆದಿಕಾವ್ಯವೆಂದು ಪ್ರಸಿದ್ಧವಾಗಿರುವ ವಾಲ್ಮೀಕಿ ರಾಮಾಯಣದ ರಚನೆಗೆ ಕಾರಣರಾಗಿರುತ್ತಾರೆ. ಸಂಗೀತಶಾಸ್ತ್ರಕ್ಕಂತೂ

ವೆಂಬ ಗ್ರಂಥರಚನೆ ಮಾಡಿರುವರೆಂಬ ಪ್ರಸಿದ್ಧಿಯಿಂದಲೂ, ವೀಣಾ ವಾದನ ನೈಪುಣ್ಯದಿಂದಲೂ, ಇವರು ಬಹು ದೊಡ್ಡ ಗಾಯನಾಚಾರ್ಯರಾಗಿರುತ್ತಾರೆ. ವ್ಯಾಸಭಗವಾನರು ಈ ನಾರದರ ಪ್ರೇರಣೆಯಿಂದ ಶ್ರೀಮದ್ಭಾಗವತವನ್ನು ರಚಿಸಿರುವ ಕಾರಣ, ಆ ಗ್ರಂಥವು ನಾರದರ ಭಕ್ತಿಸೂತ್ರಗಳ ವ್ಯಾಖ್ಯಾನ ರೂಪವಾಗಿರುವಂತೆ ಮಾತು ಮಾತಿನಲ್ಲೂ ಕಂಡುಬರುತ್ತದೆ. ಇಂತಹ ಭಕ್ತಿ ಪಂಥವೇ ಸನಾತನ ಧರ್ಮವೆಂತಲೂ ಭಾಗವತ ಧರ್ಮವೆಂತಲೂ ಕರೆಸಿಕೊಳ್ಳುತ್ತಾ, ವೇದವ್ಯಾಸರಿಂದಲೂ ಇವರ ಪುತ್ರ ಶುಕಾಚಾರ್ಯರಿಂದಲೂ ಪರಂಪರೆಯಾಗಿ ಉಪದಿಷ್ಟವಾಗಿ ಮಾನವ ಪ್ರಪಂಚಕ್ಕೆ ಇದು ಧರ್ಮ, ಇದೇ ವಿಶ್ವಧರ್ಮ ಎಂದು ಪ್ರಖ್ಯಾತಿ ಪಡೆದಿರುವುದು ಗೋಚರವಾಗುತ್ತದೆ. ಚಾರ್ವಾಕ ಬೌದ್ಧಾದಿ ನಾಸ್ತಿಕ ಮತಗಳ ಅಭ್ಯುದಯ ಕಾಲದಲ್ಲಿ ಸಹ ಈ ಭಾಗವತ ಧರ್ಮವು ನಾಶವಾಗದೆ ಜೀವಬ್ರಹ್ಮೈಕ್ಯರೂಪವಾದ ವೇದಾಂತವನ್ನುಪದೇಶಿಸಿದ ಶಂಕರಾಚಾರ್ಯರ ಕಾಲದಲ್ಲಿ ಸಕಲ ವ್ಯವಹಾರದಲ್ಲೂ ಪಾಲನೆ ಪೋಷಣೆಗಳನ್ನು ಪಡೆದು ರಾರಾಜಿಸಿರುವುದು ಕಂಡುಬರುತ್ತದೆ. ರಾಮಾನುಜಾಚಾರ್ಯರು, ಮಧ್ವಾಚಾರ್ಯರು, ನಿಂಬಾರ್ಕವಲ್ಲಭಾಚಾರ್ಯರುಗಳು, ಚೈತನ್ಯ ಮಹಾ ಪ್ರಭುಗಳು, ಎಲ್ಲರೂ ಇದೇ ಭಾಗವತ ಧರ್ಮದ ಅವಲಂಬಿಗಳಾಗಿದ್ದು ಸಂಪ್ರದಾಯದಲ್ಲಿ ಅಲ್ಪಸ್ವಲ್ಪ ಭೇದಗಳುಳ್ಳವರಾಗಿರುವುದು ಒಡೆದು ಕಾಣುತ್ತದೆ.

ಇಂತಹ ಭಾಗವತ ಧರ್ಮವನ್ನು ಅಚ್ಚಳಿಯದಂತೆ, ಉದ್ರೇಕದಿಂದ ಔಚಿತ್ಯ ಕೆಡದಂತೆ, ಪರಮ ಪರಿಶುದ್ಧ ರೀತಿಯಲ್ಲಿ ಪರಿಪಾಲಿಸಿಕೊಂಡು ಬಂದಿರುವವರು ಕರ್ಣಾಟಕದ ಹರಿದಾಸರುಗಳು. "ಯಲ್ಲಬ್ಧ್ವಾ ಪುಮಾನ್ಸಿದ್ಧೋ ಭವತಿ, ಅಮೃತೋ ಭವತಿ, ತೃಪ್ತೋ ಭವತಿ, ಯತ್ಪ್ರಾಪ್ಯ-ನಕಿಂಚಿದ್ವಾಂಛತಿ, ನಶೋಚತಿ, ನದ್ವೇಷ್ಟಿ, ನರಮತೇ, ನಸ್ನೇಹೀ ಭವತಿ ; ಯದ್‌ಜ್ಞಾತ್ವಾ ಮತ್ತೋಭವತಿ, ಸ್ತಬ್ಧೋಭವತಿ ಎಂಬ ಸೂತ್ರಾರ್ಥಗಳ ಮೂರ್ತಿಮಂತ ಸ್ವರೂಪರು ಹರಿದಾಸರುಗಳು. ಈ ಮಹಾನುಭಾವರು ಆರಿಸಿಕೊಂಡ ಭಕ್ತಿ ಪಂಥವು ಸೂತ್ರದ ಮಾತಿನಂತೆಯೇ ಕರ್ಮಜ್ಞಾನ ಯೋಗಮಾರ್ಗಗಳಿಗಿಂತ ಶ್ರೇಷ್ಠತಮವಾಗಿರುವುದು. ವಿಷಯತ್ಯಾಗ, ಸಂಗರಾಹಿತ್ಯ, ಕರ್ಮಫಲ

ತ್ಯಾಗ, ಸಂಸರ್ಗದಲ್ಲಿದ್ದರೂ ನಿರಂತರ ಭಗವದ್ಗುಣಾನುವಾದದಲ್ಲೇ ಆಸಕ್ತಿ, ಇವೆಲ್ಲಾ ಹರಿದಾಸರ ಹುಟ್ಟು ಗುಣಗಳು. ಈ ಮಹಾನುಭಾವರ ಸಾಧನೆಗೆ ಸಿದ್ಧಿಯೇ ಪ್ರಮಾಣವಾಗಿರುವುದರಿಂದ ಪ್ರಮಾಣಾಂತರಗಳು ಸಹ ಬೇಕಾಗಿಲ್ಲ. ಅಂತರಂಗದಲ್ಲಿ ಜ್ಯೋತಿದರ್ಶನ ಬಹಿರಂಗದಲ್ಲಿ ಸಗುಣ ಮೂರ್ತಿದರ್ಶನ ಮಾಡುತ್ತ ಪರವಶವಾಗಿ ಆನಂದ ಬಾಷ್ಪಗಳಿಂದ, ರೋಮಾಂಚನದಿಂದ, ಅವರುದ್ಧ ಕಂಠಸ್ವರದಿಂದ, ತಮ್ಮಲ್ಲಿ ತಾವು ಪ್ರಲಪಿಸಿದ ಉಪದೇಶಗಳನ್ನು ಕೇಳಿದ ಜನರ ಕುಲಕುಲಗಳೇ ಪಾವನವಾದವು. ತೀರ್ಥರಲ್ಲಿ ತೀರ್ಥತ್ವ, ಕರ್ಮದಲ್ಲಿ ಸುಕರ್ಮತ್ವ, ಶಾಸ್ತ್ರದಲ್ಲಿ ಸಚ್ಛಾಸ್ತ್ರತ್ವಗಳುಂಟಾಗಿ ಹರಿದಾಸರು ಜನ್ಮತಾಳಿದ ಭೂಮಂಡಲವು ಪಾವನವಾಯಿತು. ನತೇಷು "ಜಾತಿ-ವಿದ್ಯಾ-ರೂಪ-ಕುಲ ಧನಕ್ರಿಯಾದಿಭೇದಃ" ಎಂಬ ಸೂತ್ರದಲ್ಲಿ ಹೇಳಿರುವಂತೆ ಈ ಮಹಾನುಭಾವರಲ್ಲಿ ಯಾವದೊಂದು ಭೇದ ಭಾವನೆಗಳೂ ಇರಲಿಲ್ಲ. ಈ ಪರಂಪರೆಯಲ್ಲಿ ಸ್ತ್ರೀಯರು, ಶೂದ್ರರು, ವ:ತತ್ರಯಗಳ ಬ್ರಾಹ್ಮಣರು, ಸರ್ವಸಂಗ ಪರಿತ್ಯಾಗಮಾಡಿದ ವಿದ್ಯಾ ಸಿಂಹಾಸನಾಧಿಪತಿಗಳಾದ ಸನ್ಯಾಸಿಗಳು ಮೊದಲಾಗಿ ಯಾರಿದ್ದರೂ ಎಲ್ಲರದೂ ಒಂದೇ ಮಾತು, ಒಂದೇ ರೀತಿ, ಒಂದೇ ನೀತಿ, ಎಂಬಂತಿದ್ದು ಪಾವನವಾಯಿತು ಕನ್ನಡನಾಡು. ಇವರ ಮಾರ್ಗವನ್ನು ಮಹಾರಾಷ್ಟ್ರರು ಅನುಸರಿಸಿದರು. ಇವರ ನಿಶಾನಿಯನ್ನೇ "ಭಗವಾಝುಂಡಾ" ಎಂದು ರಾಮದಾಸ ಸಮರ್ಥರು ಸ್ವೀಕರಿಸಿದರು. ಧರ್ಮ ಸ್ಥಾಪನೆಯಾಯಿತು, ರಾಷ್ಟ್ರನಿರ್ಮಾಣವಾಯಿತು. ಜನತೆಯಲ್ಲಿ ಶಾಂತಿತುಷ್ಟಿ ಪುಷ್ಟಿಗಳು ನೆಲೆಸಿದವು. ಆದ್ದರಿಂದ ಆದೇ ಸೂತ್ರಕಾರರಾದ ನಾರದರ ಮಾತಿನಿಂದ ಹೇಳಿದರೆ ಅವು ಇಂದಿಗೂ ಎಂದಿಗೂ ಸಂದೇಶ ವಾಕ್ಯಗಳಂತೆ ನಿಲ್ಲುತ್ತವೆ. ಆ ಮಹಾ ವಾಕ್ಯಗಳೆಂದರೆ "ಭಕ್ತಿ ಶಾಸ್ತ್ರಗಳನ್ನು ಮನನಮಾಡಿರಿ, ಸರ್ವಕಾಲದಲ್ಲಿ ಸಕ್ಷ್ವ ರೀತಿಯಲ್ಲಿ ಭಗವಂತನನ್ನು ಭಜನೆಮಾಡಿರಿ, ಎಲ್ಲಕ್ಕಿಂತ ಭಕ್ತಿ ದೊಡ್ಡದು, ಭಕ್ತಿಯೇ ದೊಡ್ಡದು."

ಹರಿದಾಸರ ಬ್ರಹ್ಮಾನಂದಾನುಭವದ ಉದ್ಗಾರಗಳ ಮಾದರಿಗಳನ್ನು ತಿಳಿಸುವ ಮಂಗಳಾಧ್ಯಾಯವಿದಾದುದರಿಂದ, ಉಪಲಬ್ಧವಿರುವ ಕಾಗದದ ಅಳತೆಗೆ ತಕ್ಕಂತೆ, ವಾಚಕರ ಕ್ಷಮೆ ಬೇಡುತ್ತಾ ಕೆಲವು ಮಾದರಿಗಳನ್ನು ಮಾತ್ರ ಇಲ್ಲಿ ಕೊಡಲಾಗುತ್ತದೆ.

೨೨ನೇ ಪುಟದಲ್ಲಿ ಶಾಂತರಸದಲ್ಲಿ ಕೊಟ್ಟಿರುವ "ಸೇರಿದೆನು ಸೇರಿದೆನು ಜಗದೀಶನ" ಎಂಬ ಪದವು ಈ ಬ್ರಹ್ಮಾನಂದದ ತರಗತಿಗೆ ಸೇರಿದುದಾದ್ದರಿಂದ ಮತ್ತದರ ಉಲ್ಲೇಖ ಇಲ್ಲಿ ಮಾಡುವುದಿಲ್ಲ. ೯೪ನೇ ಪುಟದಲ್ಲಿ ಕೊಟ್ಟಿರುವ "ಇಂದಿನ ದಿನವೇ ಶುಭದಿನವು" ಎಂಬ ಉಗಾಭೋಗವೂ ೪೪ನೇ ಪುಟದಲ್ಲಿ ಕೊಟ್ಟಿರುವ ಬ್ರಹ್ಮಾನಂಧ ಸುಳಾದಿಯೂ ಇದೇ ತರಗತಿಗೆ ಸೇರಿರುವ ಕಾರಣ ಪುನರುಕ್ತಿ ಬೇಕಾಗಿಲ್ಲ. ಕೆಳಕಂಡ ಪದವು ಪುರಂದರದಾಸರು ಬೇಲೂರಿಗೆ ಬಂದಾಗ ಶ್ರೀ ಸೌಮ್ಯ ಕೇಶವಸ್ವಾಮಿಯ ದರ್ಶನಮಾಡಿದಾಗ ಅಂತರಂಗದಲ್ಲಾದ ಜ್ಯೋತಿದರ್ಶನ ಬಹಿರಂಗದಲ್ಲಾದ ರೂಪದರ್ಶನಗಳನ್ನು ತಿಳಿಸುತ್ತಿದೆ. ಆ ಪದದ ವಿವರವು ಕೆಳಕಂಡಂತಿದೆ.

ಸಾವೇರಿ ಅಟ್ಟತಾಳ

ಕಂಡೆನು ಗೋವಿಂದನ । ಮನ್ಮನದಲ್ಲಿ ‖ ಪ ‖

ಪುಂಡರೀಕಾಕ್ಷ ಪಾಂಡವಪಕ್ಷಪಾತನ ‖ ಅ ‖

ಕೇಶವನಾರಾಯಣ ತ್ರಿವಿಕ್ರಮ ।
ವಾಸುದೇವ ಅಚ್ಯುತಾನಂತನ
ಸಾಶಿರನಾಮದ ಶ್ರೀಹೃಷೀಕೇಶನ ।
ಶೇಷಶಯನ ನಮ್ಮವಸುದೇವ ತನಯನ ‖ ೧ ‖

ಮಾಧವ ಮಧುಸೂದನ ಜನಾರ್ದನ ।
ಆದಿಮೂರುತಿ ಶ್ರೀ ಶ್ರೀಧರನ
ವೇದಾಂತವೇದ್ಯನ ಇಂದಿರೆ ರಮಣ ।
ನಾದ ಪ್ರಹ್ಲಾದ ವರದ ನರಸಿಂಹನ ‖ ೨ ‖

ಪುರುಷೋತ್ತಮ ಭಾರ್ಗವ ರಾಘವನ ।
ಶರಣಾಗತ ವಜ್ರಪಂಜರನ
ಕರುಣಾಕರ ಶ್ರೀಪುರಂದರ ವಿಠಲನ ।
ನೆರೆನಂಬಿದೆ ಬೇಲೂರ ಚನ್ನಿಗನ ‖ ೩ ‖

ಪುರಂದರದಾಸರ ಬ್ರಹ್ಮಾನಂದದ ಇನ್ನೊಂದು ಮಾದರಿ :—

ಸೌರಾಷ್ಟ್ರ — ಅಟ್ಟತಾಳ

ಹರಿದಾಸರಸಂಗ ದೊರಕಿತು ಎನಗೆ । ಇನ್ನೇನಿನ್ನೇನು
ವರಗುರು ಉಪದೇಶ ನೆರವಾಯಿತು ಎನಗೆ । ಇನ್ನೇನಿನ್ನೇನು ॥ ಪ ॥

ಮಾಯಾ ಸಂಸಾರದ ಮಮಕಾರತಗ್ಗಿತು । ಇನ್ನೇನಿನ್ನೇನು
ತೋಯಜಾಕ್ಷನನಾಮ ಜಿಹ್ವೆಗೆ ಒದಗಿತು । ಇನ್ನೇನಿನ್ನೇನು ॥ ೧ ॥

ಹಲವುದೈವಂಗಳ ಹಂಬಲು ಬಿಟ್ಟಿತು । ಇನ್ನೇನಿನ್ನೇನು
ಜಲಜನಾಭನಧ್ಯಾನ ಹೃದಯದಿನೆಟ್ಟಿತು । ಇನ್ನೇನಿನ್ನೇನು ॥ ೨ ॥

ತಂದೆತಾಯಿ ಮುಚುಕುಂದವರದನಾದ । ಇನ್ನೇನಿನ್ನೇನು
ಸಂದೇಹವಿಲ್ಲ ಮುಕುಂದದಯಮಾಡಿದ । ಇನ್ನೇನಿನ್ನೇನು ॥ ೩ ॥

ಏನೆಂದು ಪೇಳಲಿ ಆನಂದ ಸಂಭ್ರಮ । ಇನ್ನೇನಿನ್ನೇನು
ಆನಂದಗೋಪನ ಕಂದನ ಕಂಡೆನು । ಇನ್ನೇನಿನ್ನೇನು ॥ ೪ ॥

ಎನ್ನ ವಂಶಗಳೆಲ್ಲ ಪಾವನ್ನವಾದವು । ಇನ್ನೇನಿನ್ನೇನು
ಚಿನ್ಮಯಪುರಂದರ ವಿಠಲದೊರಕಿದ । ಇನ್ನೇನಿನ್ನೇನು ॥ ೫ ॥

---

ಪುರಂದರದಾಸರ ಬ್ರಹ್ಮಾನಂದಾನುಭವ ಹೀಗಿದ್ದರೆ ಅವರ ಶಿಷ್ಯರು ವಿಜಯದಾಸರ ಅನುಭವ ಕೇಳಕಂಡಂತಿದೆ. ಏನೊಂದು ಯೋಗ್ಯತೆಯೂ ಇಲ್ಲದ ತಮಗೆ ಪುರಂದರದಾಸರ ಅನುಗ್ರಹವೇ ಸಾಕ್ಷಾತ್ಕಾರಕ್ಕೆ ಕಾರಣವಾಯಿತೆಂದು ಬಲು ರೀತಿಯಿಂದ ಅವರು ಗುರುಗಳನ್ನು ಕೊಂಡಾಡಿದ್ದಾರೆ.

ಸುಳಾದಿ — ಧ್ರುವತಾಳ

ದಾಸರ ನಿಜಕಾರುಣ್ಯಪಾತ್ರನು ನಾನು
ದಾಸರ ಹೆಬ್ಬಾಗಿಲ ಕಾಯುವವನಾನು

ದಾಸರ ಮನೆಯಂಗಳ ಬಳಿವವನಾನು
ದಾಸರ ಮನೆಸಮ್ಮಾರ್ಜಕನಾನು
ದಾಸರ ಸದನಕ್ಕೆ ಜಲವಾಹಕನಾನು
ದಾಸರ ಪೂಜಾಸಾಧನ ತರುವವನಾನು
ದಾಸರುಂಡೆಂಜಲ ತೆಗೆಯುವನುನಾನು
ದಾಸರ ಬಳಿಯಲ್ಲಿ ಸಮ್ಯೋಗದವನಾನು
ದಾಸರುಂಡದ್ದುಂಡು ದಾಸರುಟ್ಟದ್ದುಟ್ಟು
ದಾಸರಾಡಿದ್ದೇ ವೇದವಾಕ್ಯವೆಂದು
ಲೇಸಾಗಿ ಪೇಳುತ್ತಲಿರುವವರಸಂಗ
ಲೇಶಬಿಡದೆ ಕಾಲಕಳೆಯುತ್ತಲಿರುವ
ದಾಸದಾಸೀಜನರ ದಾಸನುನಾನು
ಭೂಷಣವೆನಗಿದು ಆವಾವಕಾಲಕ್ಕು
ದಾಸಜನರಪ್ರಿಯ ವಿಜಯವಿಠಲನ
ದಾಸನಾದವನಿಗೆ ಯಾವದು ಕೊರತೆ ॥ ೧ ॥

### ಮಟ್ಟತಾಳ

ಸುಣ್ಣಕೆಗತಿಯಿಲ್ಲದ ಪಾಮರಮನುಜಗೆ
ರನ್ನವಜ್ರದಕಣಿ ತನ್ನಿಂದಲೆತಾನೆ
ಕಣ್ಣಿಗೆಪೊಳೆದಂತೆ ಚಿನ್ಮಯ ಪೊಳೆದನು
ಘನ್ನದುರಿತ ವಿಮೋಚನ್ನವಾಯಿತಿದಕೆ
ಎನ್ನಪುಣ್ಯವಲ್ಲ ಎನ್ನಸಾಧನವಲ್ಲ
ಮನ್ನಿಸಿಗುರುಗಳು ಇನ್ನಿತುಪಾಲಿಸಲು
ಜನ್ನಾರ್ದನದೇವ ವಿಜಯವಿಠಲನ್ನ
ಕಣ್ಣಿಂದಲಿ ಕಂಡೆ ಸನ್ನುತಿಪ್ಪೆನದಕೆ ॥ ೨ ॥

### ತ್ರಿಪುಟತಾಳ

ಅರವಿಂದದಬಳಿ ಖದ್ಯೋತಕ್ರಿಮಿ ಬಂದು
ಹರಿದಾಡುತಿರಲಾಗಿ ಆದೆಆದೇಕಾಲದಿ

ತರಣಿ ಉದ್ಭವವಾಗೆ ಮುದುರಿದ್ದ ಸರಸಿಜ
ಅರಳಲುಕಾಣುತ ಖದ್ಯೋತವು
ಹರಷಬಟ್ಟರೇನು ನರರರಿಯರೆ ಚರಿತೆ
ಮರುಳುಮನವೆ ನಿನ್ನದೆಂದು ಹಿಗ್ಗದಿರು
ಎರಡರಪೆಸರೊಂದಾದರೆ ಮಹಾಖ್ಯಾತಿ
ತರಣಿಗಲ್ಲದೆ ಖದ್ಯೋತಕೆ ಉಂಟೆ
ಗುರುವಿಕೆಯೂ ಸಲ್ಲವಿಜಯ ವಿಠಲನ್ನ
ಶರಣರಕೃಪೆಯಿಂದ ಬಂದ ಭಾಗ್ಯವೆನ್ನು || ೩ ||

## ಅಟ್ಟತಾಳ

ಪರಮದರಿದ್ರನು ಬಲುರೋಗಿಷ್ಟನು
ನಿರುತನಿಂದಕಮಹಾದುಃಖಿಷ್ಟ ಎಂದಿಗು
ಕುರುಡನು ಕುಂಟನು ಕಿವುಡ ಮೂಕನಾನಾ
ಪರಿವ್ಯಾಕುಲದವ ಆರು ಇಲ್ಲದಿಪ್ಪ
ಪರದೇಶಿ ಕೇವಲ ತೃಷೆಪೀಡಿತ ಕ್ಷುಧಾ
ತುರನಾಗಿ ಬೇಸಿಗೆ ಬಿಸಿಲೊಳು ಚರಿಸುತ
ಸ್ಮರಣೆಯಿಲ್ಲದೆ ನೀರಿಲ್ಲದರಣ್ಯದಿ
ಇರುತಿಪ್ಪ ಮಂದಮಾನವನ ತತ್ಕಾಲದಿ
ಭರದಿಂದ ಕೊಂಡೊಯ್ದು ಸಂಜೀವನಾದ್ರಿಯಲ್ಲಿ
ಸುರತರುವಿನ ತಂಪು ನೆರಳೊಳಗಿಟ್ಟ
ಪರಿಯಂತೆ ಎನಗಿಂದು ದಾಸೋತ್ತಮರಿಂದ
ದೊರಕಿತು ಪರಮಾನಂದ ಸುಖ
ಧರೆಯೊಳಗೆ ನಮ್ಮ ವಿಜಯವಿಠಲನ
ಮರೆಯದೆ ಕೊಂಡಾಡಿ ನಲಿನಲಿದಾಡುವೆನು || ೪ ||

### ಆದಿತಾಳ

ಉಪಜೀವ ನಿನಗಿದು ಎಲೆಮನವೇ ಕೇಳು
ಗುಪಿತದಲ್ಲಿ ಚರಿಸು ಅಂತರಂಗದಲ್ಲಿ
ಸುಪಥಬಯಸುತಿರು ಸುಜನರ ಬಿಡದಿರು
ಸಫಲನಾಗು ಅತಿ ಉಗ್ರಕರ್ಮವಬಿಡು
ಉಪಚಾರವೆನದಿರು ಹರಿದಾಸರು ಒಲಿದು
ಕೃಪೆಮಾಡಿದಲ್ಲದೆ ಬರಿದೆಬಾಹದೆ ಸುಖ
ಉಪದೇಶಕರ್ತ ವಿಜಯವಿಠಲನ
ಜಪತಪ ಧ್ಯಾನದಿಂದ ಹೊತ್ತು ಪೋಗಾಡು ॥ ೫ ॥

### ಜತೆ

ಇಂದ್ರನಾಮಕರಾದ ದಾಸರೊಲಿದ ಮೇಲೆ
ಚಂದ್ರಪ್ರಕಾಶ ಶ್ರೀವಿಜಯ ವಿಠಲ ಒಲಿವ ॥ ೧ ॥

### ಶಂಕರಾಭರಣ — ಝಂಪೆತಾಳ

ಅಂತರಂಗದ ಕದವು ತೆರೆಯಿತಿಂದು
ಎಂತು ಪುಣ್ಯದ ಫಲವು ದೊರಕಿತೋ ಎನಗಿಂದು ॥ ಪ ॥
ಏಸು ದಿನವಾಯಿತೋ ಬೀಗಮುದ್ರೆಯ ಮಾಡಿ
ವಾಸವಾಗಿದ್ದರು ದುರಳರಲ್ಲಿ
ಮೋಸವಾಗಿತ್ತು ಇಂದಿನತನಕ ತಮ
ರಾಶಿಯೊಳಗೆ ಹೊಳೆ ಕಾಣಿಸುತ್ತಿರಲಿಲ್ಲ ॥ ೧ ॥

ಹರಿ ಕರುಣವೆಂಬಂಥ ಕೀಲಿ ಕೈದೊರಕಿತು
ಗುರುಕರುಣವೆಂಬಂಥ ಶಕ್ತಿಯಿಂದ
ಪರಮ ಭಾಗವತರ ಸಹವಾಸದಲಿ ಪೋಗಿ
ಹರಿಸ್ಮರಣೆಯಿಂದಲಿ ಬೀಗಮುದ್ರೆಯನೊಡೆದೆ ॥ ೨ ॥

ಸ್ವಮೂರ್ತಿಗಣ ಮಧ್ಯ ಸಚ್ಚಿದಾನಂದೈಕ
ರಮೆಧರೆಯರಿಂದ ಸೇವೆಯಕೊಳ್ಳುವ
ಕಮಲಜಾದಿಗಳಿಂದ ತುತಿಸಿಕೊಳ್ಳುತ ಹೃದಯ
ಕಮಲದೊಳಗಿರುವ ಶ್ರೀ ವಿಜಯ ವಿಠಲನ ಕಂಡೆ ॥ ೩ ॥

ಜಗನ್ನಾಥದಾಸರು ತಮಗಾದ ಸಾಕ್ಷಾತ್ಕಾರದ ಪರಿಯನ್ನು ಕೆಳಕಂಡಂತೆ ವರ್ಣಿಸಿರುತ್ತಾರೆ.

### ಮೋಹನ ಆದಿತಾಳ

ಕಂಡೆ ಪಂಡರಿರಾಯನ । ಶ್ರೀಮನಃಪ್ರಿಯನ ॥ ಪ ॥

ಚಂಡವಿಕ್ರಮಕರ । ದಂಡ ಮುನಿಪಗೊಲಿ
ದಂಡಜಾಧಿಪ ಪ್ರಕಾಂಡ ಸುಪೀಠನ ॥ ಅ ॥

ಮಣಿಮಯ ಮಕುಟ ಮಧುಪ ನಿವಹಾ । ಸೆರೆ
ಫಣೆಯೊಳಿಟ್ಟ ಕಸ್ತೂರಿ ತಿಲಕ
ವನರುಹ ಉಪಮಲೋಚನ ಯುಗ ಚಂಪಕನಾಸವ
ಕುಂಡಲದ ವಿಕಾಸವ । ಕದಪಿನ ವಿಲಾಸವ ।
ಮೊಗದ ಮಂದಹಾಸವ ॥ ೧ ॥

ಕುಂದಕೋರಕ ದಶನಾವಳಿಯ । ಬಿಂಬ
ದಂದದಿ ಪೊಳೆವ ಅಧರ ಕಳೆಯ
ಕಂಧರ ತ್ರಿವಳಿ ಪುರಂದರ ಇಭಕರ ಪೋಲುವ
ಭುಜಯುಗ ವಿಶಾಲವ । ಕರತಲರಸಾಲವ
ನಖರ ಮಲ್ಲಿಕಾಲವ ॥ ೨ ॥

ಅತಿವಿಸ್ತೃತ ವಕ್ಷಸ್ಥಳವ । ಸಿರಿ
ಸತಿಸದನಾರ್ಕದಂದದಿ ಪೊಳೆವ
ರತುನ ಕೌಸ್ತುಭದೀಧಿತಿವಿಲಸಿತ ವೈಜಯಂತಿಯ

ಉದರ ರೋಮಪಙ್ತಿಯ । ನಾಭಿವಲ್ಮೀಕದಂತಿಹ
ಕುಕ್ಷಿ ತ್ರಿವಳಿ ಕಾಂತಿಯ ॥ ೩ ॥

ಮುಂಬಿಸಲಂತೆ ಕನಕಚೇಲ । ಸು ನಿ
ತಂಬದಿ ಪೊಳೆವ ಗೋಲಿಯಚೀಲ
ಕಂಬು ಕೋಕನದ ವಿಡಂಬಮೇಖಳಬಕದಂಬವ
ಊರು ಕದಳೀಸ್ತಂಭವ । ಜಾನುಗಳಿಂದುಬಿಂಬವ
ಆಚರಿಪ ವಿಡಂಬವಾ ॥ ೪ ॥

ಮಾತಂಗಕರದ ಜಂಘೆಗಳ । ಗುಲ್ಫ
ಜಾತಿ ಮಾಣಿಕಾಂಗುಲಿ ಸಂಘಗಳ
ಜ್ಯೋತಿ ಬೆಳಗೆ ಜಗನ್ನಾಥ ವಿಠಲನಂಘ್ರಿ ಪುಷ್ಕರ
ಉದಿತ ಶತಭಾಸ್ಕರ । ಗಭಸ್ತಿ ತಿರಸ್ಕರ
ಸುಜನರ ಯಶಸ್ಕರ ॥ ೫ ॥

## ಮಧ್ಯಮಾವತಿ — ಆದಿತಾಳ

ಧನ್ಯನಾದೆ । ವಿಠಲನ ಕಂಡು
ಧನ್ಯನಾದೆ ಕಾಮನ್ನ ಪಿತನ ಲಾ ।
ವಣ್ಯಮೂರುತಿಯ ಕಣ್ಣೆಲಿಕಂಡು ॥ ಅ ॥

ದೇವವರೇಣ್ಯ ಸದಾವಿನೋದಿ ಪ್ರಂ ।
ದಾವನಚರಿಸಿದ ಓವನಕಂಡು ॥ ೧ ॥

ಮಂಗಳಾಂಗ ಕಾಳಿಂಗ ಮಥನ ಮಾ ।
ತಂಗವರದ ವರರಂಗನ ಕಂಡು ॥ ೨ ॥

ಹಾಟಕಾಂಬರ ಕಿರೀಟಿ ಸಾರಥಿಯ ।
ತಾಟಕಾರಿ ವೈರಾಟನ ಕಂಡು ॥ ೩ ॥

ಚಿಂತಿತ ಫಲದ ಮದಂತರ್ಯಾಮಿ ಸ ।
ತ್ವಾಂಥಜನಾಪ್ತ ಮಹಾಂತನ ಕಂಡು ॥ ೪ ॥

ಮಾತುಳಾಂತಕ ವಿಧಾತಪಿತ ಜಗ ।
ನ್ನಾಥ ವಿಠಲ ವಿಖ್ಯಾತನ ಕಂಡು ॥ ೫ ॥

ಪೂರ್ವಿ .... ಆದಿತಾಳ

ಯಾತರ ಭಯ ಶ್ರೀನಾಥನ ಪರಮಪ್ರೀತಿಯ ಪಡೆದವಗೆ ॥ ಪ ॥

ಕಾತುರಪಡದಲೆ ಪಾತಕ ಹರವಿಧಿ । ತಾತನೆ ನಿಜ ಸುಖದಾತ
ನೆಂದರಿತಗೆ ॥ ಅ ॥

ಬಂಧು ಜನರು ತನ್ನ ವಂದಿಸಿದಾಕ್ಷಣ । ಬಂದಭಾಗ್ಯವೇನೋ
ಹಿಂದೆ ಮುಂದೆ ತನ್ನ ನಿಂದಿಸಿ ನುಡಿಯಲು ಕುಂದಾದದ್ದೇನೊ ॥
ಇಂದಿರೆ ರಮಣ ಗೋವಿಂದನ ಮಾನಸ । ಮಂದಿರದಲಿ ಎಂದೆಂದಿಗು
ಭಜಿಪಗೆ ॥ ೧ ॥

ದುಸುಮುಸುಗುಟ್ಟುವ ಸತಿಸುತರಿಂದಲಿ ಹಸಗೆಟ್ಟದ್ದೇನೋ
ಅಶನಾಚ್ಛಾದನ ತರಲಿಲ್ಲವೆಂದು ವ್ಯಸನ ಬಟ್ಟರೇನೋ ॥
ಕುಸುಮನಾಭ ಸುಮನಸವಂದಿತ ಪದ । ವಸುದೇವ ಸುತನ
ವಶದೊಳಿದ್ದವಗೆ ॥ ೨ ॥

ಘಾಸಿಯಿಂದ ಆಯಾಸಗೊಳದೆ ಆವಾಸದೊಳಿದ್ದರೇನೋ
ಕಾಶಿಕಂಚಿಕಾಳಹಸ್ತಿ ಮೊದಲಾದ ದೇಶ ತಿರುಗಲೇನೋ ॥
ಈಶಶ್ರೀಶ ಜಗನ್ನಾಥ ವಿಠಲನ । ದಾಸನೆನಿಸಿ ಸಂತೋಷ
ದೊಳಿರುವಗೆ ॥ ೩ ॥

ಹರಿದಾಸರುಗಳ ಆನಂದವಿಂಥಾದ್ದು, ಅನುಭವವಿಂಥಾದ್ದು, ತ್ಯಾಗ ವಿಂಥಾದ್ದು.

---

ಒಂದು ಸಾವಿರ ವರ್ಷಗಳ ಹರಿದಾಸರ ಇತಿಹಾಸದಲ್ಲಿ ನೂರರಲ್ಲಿ ಒಂದಂಶ ಸಹ ನಮಗೆ ಉಪಲಬ್ಧವಾಗಿಲ್ಲ. ಹರಿದಾಸ ಸಾಹಿತ್ಯ ರಾಶಿಯಲ್ಲಿ ಸಾವಿರದಲ್ಲೊಂದಂಶ ಕೂಡ ದೊರೆತಿಲ್ಲ. ಇತರ ಗ್ರಂಥಗಳ ಶೋಧನೆ ನಡೆಯುತ್ತಿರುವಂತೆ ದಾಸ ಸಾಹಿತ್ಯಕ್ಕಾಗಿ ಶೋಧನೆ ನಡೆಯುತ್ತಿಲ್ಲ. ಸಂಶೋಧನೆ ಮಾಡುವವರ ಕೈಗೆ ಕದಾಚಿತ್ ದೇವರ ನಾಮಗಳ ಪುಸ್ತಕ ಸಿಕ್ಕಿದರೆ ಅದೇನೋ ಹಾಡಿನ ಪುಸ್ತಕ, ನಮಗೇಕೆನ್ನುವ ತಿರಸ್ಕಾರ ತಪ್ಪಿಲ್ಲ. ಐವತ್ತು ವರ್ಷಗಳ ಹಿಂದೆ ಕೇಳುತ್ತಿದ್ದ ದೇವರ ನಾಮಗಳು ಈಗ ಕಿವಿಗೆ ಬೀಳುತ್ತಿಲ್ಲ. ನಲವತ್ತು ವರ್ಷಗಳಿಂದ ಮುದ್ರಣಮಾಡಿದ ಸಂಸ್ಥೆಗಳು ಶುದ್ಧಪ್ರತಿಗಳಿಗಾಗಿ ಶ್ರಮಪಟ್ಟಿಲ್ಲ. ಅಂಕಿತಗಳನ್ನು ಬದಲಾಯಿಸುವುದು, ಮಾತುಗಳನ್ನು ಬದಲಾಯಿಸಿ ತಿದ್ದಿದ ಮುದ್ರಣವೆನ್ನುವುದು, ಸರ್ವ ಸಾಮಾನ್ಯವಾಗಿ ಬಿಟ್ಟಿದೆ. ಈ ಕಾರಣಗಳಿಂದ ಈ ಸಾಹಿತ್ಯಕ್ಕೆ ಹೆಚ್ಚಾಗಿ ದುಡಿಯಬೇಕಾದ ಕಾಲವೀಗ ಬಂದಿದೆ. ಮರಾಟಿಯಲ್ಲಿ ಸಂತಸಾಹಿತ್ಯದ ಮುದ್ರಣವಾಗಿರುವಂತೆ ಕನ್ನಡದಲ್ಲೂ ಆಗಬೇಕಾಗಿದೆ. ಮಹಾರಾಷ್ಟ್ರರಂತೆ ಕನ್ನಡಿಗರು ಸಂತಸಾಹಿತ್ಯದಲ್ಲಿ ಅಭಿಮಾನತಾಳಬೇಕು, ಸಹಾಯ ಮಾಡಬೇಕು ಮಾತ್ರ.

## ಮಂಗಳಗಳು

ಜಯಜಯ ಮಂಗಳ ಹರಿಗೆ | ಜಯ ಜಯ ಮಂಗಳ ಶಿರಿಗೆ
ಜಯ ಜಯ ಮಂಗಳ ವರದ ಪುರಂದರ ವಿಠಲಗೆ ||೧||

ಶುಭವೆನ್ನಿ ಶೋಭನ ಹರಿಗೆ | ಶುಭವೆನ್ನಿ ಶೋಭನ ಶಿರಿಗೆ
ಶುಭವೆನ್ನಿ ಶೋಭನವರದ ಪುರಂದರ ವಿಠಲಗೆ ||೨||

ಪರಮಾನಂದವು ಹರಿಗೆ | ಪರಮಾನಂದವು ಶಿರಿಗೆ
ಪರಮಾನಂದವು ವರದ ಪುರಂದರ ವಿಠಲಗೆ ||೩|

ಸುರಟಿ — ಅಟ್ಟತಾಳ

ಆನಂದ ಮಯಗೆ ಚಿನ್ಮಯಗೆ | ಶ್ರೀ |
ನಾರಾಯಣಗಾರತಿ ಯೆತ್ತಿರೆ || ಪ|

ವೇದವ ತಂದು ಬೆಟ್ಟವ ಪೊತ್ತು ಧರಣಿಯ |
ಸಾಧಿಸಿ ಕಂಭದೊಳುದಿಸಿದಗೆ
ಭೂದಾನವ ಬೇಡಿ ನೃಪರ ಸಂಹರಿಸಿಧ |
ಆದಿಮೂರುತಿ ಗಾರತಿಯೆತ್ತಿರೆ || ೧ ||

ಇಂದುವದನೆ ಸಹಿತಾರಣ್ಯದೊಳು ನಿಂದು
ನಂದಗೋಕುಲದೊಳು ಬೆಳೆದವಗೆ ||
ಮಂದಗಮನೆಯರ ಮುಂದೆ ನಿರ್ವಾಣದಿ
ನಿಂದ ಮೂರುತಿಗಾರತಿಯೆತ್ತಿರೆ || ೨ ||

ತುರಗವನೇರಿ ದೈತ್ಯರ ಸೀಳಿ ಭಕ್ತರ
ಪೊರೆದಮಂಗಳ ಹಯವದನನಿಗೆ
ವರವೇಲಾಪುರ ಚನ್ನಿಗರಾಯನ
ಚರಣಕಮಲಕಾರತಿಯೆತ್ತಿರೆ || ೩ ||

## ಭೈರವಿ — ಜಂಪೆತಾಳ

ಜಯಮಂಗಳಂ ನಿತ್ಯ ಶುಭ ಮಂಗಳಂ || ಪ ||

ತೊಳಸದಕ್ಕಿಯ ತಿಂಬ | ಕಿಲುಬುತಳಿಗೆಯೊಳುಂಬ
ಕೊಳಗದಲಿ ಹಣಗಳನು ಅಳೆಸಿಕೊಂಬ ||
ಇಲ್ಲತನಗೆಂತೆಂದು ಸುಳ್ಳುಮಾತಾಡಿದರೆ
ಎಲ್ಲವನು ಕಸುಕೊಂಬ ಸುಳ್ಳುಧೊರೆಗೆ || ೧ ||

ತನ್ನ ನೋಡುವೆನೆಂದು ಮುನ್ನುಗ್ಗಾವುದ ಬಂದು
ತನ್ನಗುಡಿಯಪೊಕ್ಕ ಜನರಿಗೆಲ್ಲಾ ||
ಹೊನ್ನು ಹಣಕಸುಕೊಂಡು ತನ್ನದರುಶನ ಕೊಡದೆ
ಬೆನ್ನೊಡೆಯ ಹೊಡೆಸುವ ಅನ್ಯಾಯಕಾರಿಗೆ || ೨ ||

ಗಿಡ್ಡ ಹಾರುವಗೆ ಶರಗೊಡ್ಡಿ ಬೇಡೀದವಗೆ
ದುಡ್ಡು ಕಾಸುಗಳಿಗೆ ಕೈನೀಡಿದವಗೆ ||
ಅಡ್ಡ ಬಿದ್ದ ದಾಸರ ವಿಡ್ಡೂರ ಕಳೆದು
ದೊಡ್ಡವರವಾಳ್ವ ಶಿರಿವಿಜಯವಿಠಲಗೆ || ೩ ||

ಸುರಟಿ — ಛಾಪು

ಮಂಗಳಂ ಮಂಗಳಂ । ದಯಾನಿಧೇ || ಪ ||

ನಂದನಂದನ ಶಾಮಸುಂದರ ಶುಭಕಾಯ
ಇಂದೀವರಾಕ್ಷ ಮುಕುಂದ ಮುರಾರೇ || ೧ ||

ದೇವ ದೇವೇಶ ದೇಹಿ ಕಲ್ಯಾಣಂ
ಶ್ರೀವರಭೂವರ ಶ್ರೀಶ್ರೀನಿವಾಸ || ೨ ||

ರಾಜಿತವರದ ಗೋಪಾಲವಿಠಲ ಮಹಾ
ರಾಜ ಭಜಕಕಲ್ಪಭೂಜ ಸುತೇಜ || ೩ ||

|| ಶ್ರೀ ಕೃಷ್ಣಾರ್ಪಣಮಸ್ತು ||

—: o :—